ಬಾಲಸಾಹಿತ್ಯ ಮಂಡಲ,
ಲಿಮಿಟೆಡ್,
ಕೊಡಿಯಾಲಬೈಲ್, ಮಂಗಳೂರು.

# ಶೂದ್ರಕ

ಬ್ರಹ್ಮಶ್ರೀ ವಿದ್ವಾನ್
ಪಾ. ಸುಂದರಶಾಸ್ತ್ರಿಯವರಿಂದ ಬರೆಯಲ್ಪಟ್ಟಿತು



೧೯೩೨.



## ವಿಜ್ಞಾಪನೆ.



ಇತ್ತೀಚೆಗೆ ಕನ್ನಡಭಾಷೆಯು ಬಗೆಬಗೆಯ ಇಂಪು ಸೊಂಪುಗಳಿಂದ ಪುಷ್ಟವಾಗಿ ಕನ್ನಡಿಗರ ಆದರಣೆಗೆ ವಿಶೇಷ ಪಾತ್ರವಾಗಿರುವುದೆಂಬ ಸಂಗತಿಯು ಆಹ್ಲಾದವನ್ನುಂಟುಮಾಡುತ್ತಿದೆ ಸರ್ವತೋಮುಖವಾದ ನವನಾಗರಿಕತೆಯಿಂಮೊಪ್ಪುವ ಈ ಶಕಾಬ್ದದಲ್ಲಿ ರಸಪರಿಪುಷ್ಟವೆನಿಸಿ ಚಿತ್ತರಂಜಕವಾಗುವಂತ ಬರೆದ ಕಾದಂಬರಿಗಳಿಗೂ ಕಟ್ಟುಕಥೆಗಳಿಗೂ ಪ್ರಾಶಸ್ತ್ಯವೂ ಓದುಗರ ಅವಲಂಬನವೂ ಹೆಚ್ಚಾಗಿ ದೊರೆಯುತ್ತಿರುವ ಕಾರಣ ಈ ಶಕಾಬ್ದವನ್ನು **ಕಾದಂಬರೀಯುಗ**ವೆಂತ ಹೇಳಿದರೂ ಅತ್ಯುಕ್ತಿಯೆನಿಸಲಾರದು ಈ ಗ್ರಂಥವು ಉಜ್ಜಯಿನೀ ನಗರಾಧೀಶ್ವರನಾಗಿದ್ದ ಶೂದ್ರಕನ ಚರಿತ್ರೆಯನ್ನೊಳಗೊಂಡಿರುವ ಒಂದು ಕಥಾನಕವು. ಹಿಂದಣ ಕಾಲದಲ್ಲಿ ನಮ್ಮ ಭರತಖಂಡದಲ್ಲಿ ಪ್ರಚುರಗೊಂಡಿದ್ದ "ಕಲೆ"ಗಳು ಈಗ ಎಷ್ಟರ ಮಟ್ಟಿಗೆ ಮಾಲಿನ್ಯವನ್ನು ಪಡೆದಿವೆ? ಆ ಕಾಲದಲ್ಲಿ ಕಲೆಗಳಿಗೂ ಕಲಾವಿಶಾರದರಿಗೂ ಎಷ್ಟರ ಮಟ್ಟಿನ ಪ್ರೋತ್ಸಾಹವೂ ಮನ್ನಣೆಯೂ ದೊರೆಯುತ್ತಿದ್ದಿತು?—ಎಂಬೀ ಮುಂತಾದ ವಿಷಯಗಳನ್ನು ನಮ್ಮ ತರುಣರು ಅವಗಾಹನೆಗೆ ತಂದುಕೊಂಡು ಮರಳಿ ಅವುಗಳನ್ನು ಉಜ್ಜೀವನಗೊಳಿಸಲು ಪ್ರಯತ್ನಿಸಿದಲ್ಲಿ ಜೀರ್ಣಾ

ವತಿಷ್ಠಗಳಾದ ನಮ್ಮ ಕಲೆಗಳು ಸ್ವಲ್ಪಮಟ್ಟಿಗಾದರೂ ತಲೆಯೆತ್ತಲು ಅವಕಾಶವಾಗುವುದೆಂಬ ಭಾವನೆಯಿಂದಲೇ ಈ ಕಥಾನಕವನ್ನು ಕನ್ನಡಿಗರ ಮುಂದೆ ಇರಿಸಿರುವೆನು. ಅಶ್ವಶಾಸ್ತ್ರ, ಗಜಶಾಸ್ತ್ರ, ಯುದ್ಧವಿದ್ಯೆ, ಆಯುಧನಿರ್ಮಾಣ, ಪುರನಿರ್ಮಾಣ, ದುರ್ಗವಿನ್ಯಾಸ, ಚಿತ್ರಲೇಖನ, ವಿಷವೈದ್ಯ ಮುಂತಾದ ವಿಷಯಗಳಲ್ಲಿ ಎಷ್ಟು ಗ್ರಂಥಗಳು ರಚಿತವಾಗಿದ್ದುವೆಂಬ ವಿಷಯವು ಈ ಕಥಾನಕದಲ್ಲಿ ಅಲ್ಲಲ್ಲಿ ಸಮಯೋಚಿತವಾಗಿ ಸೂಕ್ಷ್ಮರೀತಿಯಿಂದ ವರ್ಣಿತವಾಗಿರುವುದು ಈ ಪುಸ್ತಕವನ್ನು ಮುದ್ರಣಗೊಳಿಸಲು ಉದಾರ ಭಾವದಿಂದ ಅವಲಂಬವನ್ನಿತ್ತು ಪ್ರಚಾರಗೊಳಿಸಿದ ಮಂಗಳೂರಿನ "ಬಾಲಸಾಹಿತ್ಯಮಂಡಲ"ದ ಕಾರ್ಯದರ್ಶಿಗಳಿಗೆ ಚಿರಋಣಿಯಾಗಿರುವೆನು ಇದರಲ್ಲಿ ಕಂಡುಬರುವ ನ್ಯೂನಾತಿರೇಕಗಳನ್ನು ತಿಳಿಯಪಡಿಸುವ ಮಹನೀಯರಿಗೆ ಕೃತಜ್ಞನಾಗಿರುವೆನಲ್ಲದೆ ಮುಂದಣ ಮುದ್ರಣದಲ್ಲಿ (ಅಂತಹ ಸನ್ನಿವೇಶವೂ ಒದಗಿದಲ್ಲಿ) ಅಕ್ಕರೆಯಿಂದ ಸರಿಪಡಿಸುವೆನು.

ಮದ್ರಾಸು
ಆಂಗೀರಸ ಸಂ. ಚೈತ್ರ ಶು ೧
ಬುಧವಾರ.

ಇಂತು
ಕನ್ನಡಿಗರ ಪ್ರೇಮಾಭಿಲಾಷಿ
**ಪಾನ್ಯಂ ಸುಂದರಶಾಸ್ತ್ರಿ.**



# ಶೂದ್ರಕ






ರತರಮಣಿಯು ನವರತ್ನಖಚಿತವಾದ ಮೇಖಲೆಯಂತೆ ಕಂಗೊಳಿಸುವ ಸಿಪ್ರಾನದಿಯ ತೀರದಲ್ಲಿ ಉಜ್ಜಯಿನಿಯೆಂಬ ಪಟ್ಟಣವು ಸಕಲೈಶ್ವರ್ಯಗಳಿಂದ ಒಪ್ಪುತ್ತಿದ್ದಿತು ಅಲ್ಲಿ ಸಕಲಗುಣಪರಿಪೂರ್ಣನಾದ ಮೇಘಸ್ವಾತಿಯು ರಾಜ್ಯಭಾರಮಾಡುತ್ತಿದ್ದನು. ಚತುರ್ವೇದವಿಶಾರದನೂ, ಸಕಲಶಾಸ್ತ್ರಪಾರಂಗತನೂ, ನಿಖಿಲಕಳಾಸಾರಗ್ರಾಹಿಯೂ, ವಿದ್ವತ್ಸಭಾ ವಾದಪ್ರತಿವಾದಚತುರನೂ ಎನಿಸಿದ ಭಾರದ್ವಾಜನೆಂಬ ದ್ವಿಜಪುಂಗವನು ಮೇಘಸ್ವಾತಿಯ ಆಚಾರ್ಯನಾಗಿದ್ದನು. ಆ ಆಚಾರ್ಯನು ವೈದಿಕಧರ್ಮಗಳಿಗೆ ಸ್ವಲ್ಪವೂ ಲೋಪ ಬಾರದಂತೆ ಅನುದಿನವೂ ಭಗವದ್ಭಕ್ತಿಸಂಪನ್ನನೆನಿಸಿ ಸತ್ಯನಿಷ್ಠನಾಗಿ ಎಲ್ಲರ ಗೌರವಕ್ಕೂ ತಕ್ಕವನಾಗಿದ್ದನು. ಆದರೆ ಮಕ್ಕಳಿಲ್ಲದ ಚಿಂತೆಯು ಮಾತ್ರ ಆತನನ್ನು ಬಹಳವಾಗಿ ಪೀಡಿಸುತ್ತಿದ್ದಿತು. ಸಂತಾನಾಪೇಕ್ಷೆಯಿಂದ ಅನೇಕ ಪುಣ್ಯಕಾರ್ಯಗಳನ್ನು ನಡೆಯಿಸುತ್ತ ಕಾಲಕಳೆಯುತ್ತಿದ್ದನು. ಈ ಭೂಸುರೋತ್ತಮನಿಗೆ ಗೌರಿಯ ಅವತಾರವೋ ಎಂಬಂತೆ ಸಕಲ ಗುಣಗಳಿಂದೊಪ್ಪುವ ಗೌರಿಯೆಂಬ ನಾರೀಮಣಿಯು ಸಹಧರ್ಮಿಣಿಯಾಗಿದ್ದಳು. ಇಂತಿರಲು ಈತನ ಪರಿವಾರದವರಲ್ಲಿ ಒಬ್ಬನಾದ ಶೂದ್ರಕನೆಂಬವನು ದೈವಪ್ರೇರಣೆಯಿಂದ ಬಳಿಸಾರ್ದು, "ಸ್ವಾಮಿ! ಶೀಘ್ರದಲ್ಲಿಯೇ ತಮಗೆ ಸತ್ಪುತ್ರನು ಜನಿಸುವನು. ಆಗ ನನಗೆ ಸ್ವಾಮಿಯು ಯಾವ ವಿಧವಾದ ಪಾರಿತೋಷಿಕವನ್ನು ದಯೆಪಾಲಿಸುವರು?" ಎಂಬುದಾಗಿ ಪ್ರಶ್ನೆ ಮಾಡಿದನು.

ಆಗ ಭಾರದ್ವಾಜನು "ಹಾಗೆ ಪುತ್ರಸಂತಾನವು ಲಭಿಸಿದುದೇ ಆದರೆ ನೀನು ಕೋರಿದುದನ್ನು ಕೊಡುವೆನು" ಎನಲು, ಶೂದ್ರಕನು "ಸ್ವಾಮಿಯು ಆಡಿದ ಮಾತಿಗೆ ತಪ್ಪತಕ್ಕವರಲ್ಲ. ಈ ವಿಷಯದಲ್ಲಿ ನನಗೆ ಭರವಸೆಯುಂಟು. ತಮಗೆ ಜನಿಸುವ ಪುತ್ರನಿಗೆ ನನ್ನ ಹೆಸರನ್ನೇ ಇಟ್ಟರೆ ಸಾಕು. ಇಷ್ಟರ ಮಟ್ಟಿನ ವರವನ್ನು ಅನುಗ್ರಹಿಸಿದರೆ ಕೃತಾರ್ಥನಾಗುವೆನು" ಎಂದನು.

ಆ ಮಾತನ್ನು ಕೇಳಿದ ಭಾರದ್ವಾಜನು ಆ ರೀತಿ ಮಾಡುವುದರಲ್ಲಿ ಯಾವ ದೋಷವೂ ಇಲ್ಲವೆಂದು ಅದಕ್ಕೆ ಸಮ್ಮತಿಸಿದನು ಅಂತೆಯೇ ಕೆಲವು ಕಾಲದಲ್ಲಿಯೇ ಆತನಿಗೆ ಗಂಡುಮಗುವಾಗಲು, ಆ ಮಗುವಿಗೆ ಶೂದ್ರಕನೆಂಬುದಾಗಿ ನಾಮಕರಣಮಾಡಿದನು ಈ ಮಗುವು ದಿನದಿನಕ್ಕೂ ವೃದ್ಧಿಯನ್ನೈದಲು, ತಂದೆಯು ಎಂಟನೆಯ ವಯಸ್ಸಿನಲ್ಲಿ ಉಪನಯನವನ್ನು ಮಾಡಿದನು. ಬಳಿಕ ಈ ವಟುವು ಕುಶಾಗ್ರಬುದ್ಧಿಸಂಪನ್ನನೆನಿಸಿ ಕಾವ್ಯಸಾರಗಳನ್ನು ಮುಗಿಸಿ, ಋಗ್ವೇದವನ್ನೂ ಯಜುರ್ವೇದವನ್ನೂ ಅಧ್ಯಯನಮಾಡತೊಡಗಿ, ವಾಕ್ಚಾತುರ್ಯದಿಂದಲೂ, ಮೇಧಾಶಕ್ತಿಯಿಂದಲೂ, ವಿನಯಸಂಪತ್ತಿನಿಂದಲೂ ಶ್ಲಾಘಿಸಲು ತಕ್ಕವನಾಗಿದ್ದನು.

ಈ ರೀತಿಯಾಗಿ ಕೆಲವು ವರ್ಷಗಳು ಕಳೆದುವು ಶರನ್ನವರಾತ್ರಿಯ ವೇಳೆಯಲ್ಲಿ ಆ ಪಟ್ಟಣದಲ್ಲಿ ಮಹಾಕಾಳಿಯ ಉತ್ಸವವು ಬಹಳ ವೈಭವದಿಂದ ನಡೆಯುತ್ತಿದ್ದಿತು ಈ ಮಹೋತ್ಸವ ಸಮಯದಲ್ಲಿ ಸುತ್ತುಮುತ್ತಣ ದೇಶದವರೆಲ್ಲರೂ ದೇವಿಯ ಸಂದರ್ಶನಾರ್ಥವಾಗಿ ಕಾಣಿಕೆಗಳೊಂದಿಗೆ ಆ ಪಟ್ಟಣದಲ್ಲಿ ಬಂದು ನೆರೆಯುತ್ತಿದ್ದರು ಹೀಗೆ ಜನರಿಂದ ಕಿಕ್ಕಿರಿದಿದ್ದ ಸಿಪ್ರಾನದಿಯ ದಡದಲ್ಲಿ ಒಬ್ಬ ಯತಿಪುಂಗವನು ಎಲ್ಲಿಂದಲೋ ಬಂದು ಇಳಿದು ಸ್ನಾನ ಮಾಡಿ, ಸೋಪಾನದ ಒಂದು ಕಡೆ ಕೃಷ್ಣಾಜಿನವನ್ನು ಹಾಸಿ ಕುಳಿತುಕೊಂಡು, ಕಣ್ಣುಮುಚ್ಚಿ ಧ್ಯಾನಾರೂಢನಾಗಿದ್ದನು. ಇದೇ ಸಮಯದಲ್ಲಿ ದೈವವಶದಿಂದ ಶೂದ್ರಕನು ಅಲ್ಲಿಗೆ ಬಂದು ಆ ಯತೀಶ್ವರನ ಸಮೀಪದಲ್ಲಿಯೇ ಮಿಂದು ನಿರ್ಭಯವಾಗಿ ಮಂತ್ರಗಳನ್ನು ಸ್ಪಷ್ಟವಾಗಿ ಉಚ್ಚರಿಸುತ್ತ ಸಂಧ್ಯಾವಂದನೆಯನ್ನು ಮಾಡುತ್ತಿದ್ದನು. ಇಷ್ಟರಲ್ಲಿ ಆ ಸನ್ಯಾಸಿಯು ಬಹಿರ್ಮುಖನಾಗಿ ಈ ಹುಡುಗನನ್ನು ಕಂಡು, ಅವನ ತೇಜಸ್ಸಿಗೂ ಪ್ರತಿಭೆಗೂ ಮೆಚ್ಚಿ, ಅವನನ್ನು ತನ್ನ ಹತ್ತಿರ ಬರುವಂತೆ

ಸನ್ನೆ ಮಾಡಿದನು ಕೂಡಲೇ ಹುಡುಗನು ವಿನಯದಿಂದ ಬಳಿಸಾರ್ದು, ತಲೆವಾಗಿ, ತನ್ನ ಗೋತ್ರವನ್ನೂ ಹೆಸರನ್ನೂ ಹೇಳಿ, ಸಾಷ್ಟಾಂಗ ಪ್ರಣಾಮ ಮಾಡಿ ಕಯ್ಮುಗಿದು ನಿಂತನು. ಆಗ ಯತಿಶ್ರೇಷ್ಠನು "ನಿನಗೆ ಒಂದು ಮಂತ್ರವನ್ನು ಉಪದೇಶಿಸುವೆನು" ಎನಲು, ಆದರದಿಂದಲೂ ಭಯವಿನಯ ಭಕ್ತಿಗಳಿಂದಲೂ ಮರಳಿ ಆತನಿಗೆ ಅಡ್ಡಬಿದ್ದು "ಸ್ವಾಮಿಯು ಅನುಗ್ರಹಿಸ ಬೇಡುವೆನು" ಎಂದನು. ಆ ಮುನಿಯು ಮಹಾಕಾಳೀ ಮಂತ್ರವನ್ನು ಉಪದೇಶಿಸಿ, "ನೀನು ನಿಯಮದಿಂದ ಲಕ್ಷಸಂಖ್ಯೆಯ ಜಪವನ್ನು ಮಾಡಿದ ಯಾದರೆ, ಮಹಾಕಾಳಿಯು ನಿನಗೆ ಪ್ರತ್ಯಕ್ಷನಾಗುವಳು. ನೀನು ಬೇಕಾ ದುದನ್ನು ಪಡೆದು ಸುಖಿಯಾಗಿರುವೆ" ಎಂದು ಹರಸಿ ಕಳುಹಿಸಿದನು.

ಶೂದ್ರಕನು ಆ ಯತಿಯ ಅಪ್ಪಣೆಯಂತೆಯೇ ಮಹಾಕಾಳಿಯ ಮಂದಿರದಲ್ಲಿಯೇ ಒಂದು ಮೂಲೆಯಲ್ಲಿ ಕುಳಿತು ನಿಯಮದಿಂದ ನಾಲ್ಕಾರು ದಿನಗಳಲ್ಲಿಯೇ ಆ ಮಂತ್ರವನ್ನು ಒಂದು ಲಕ್ಷಸಾರಿ ಪುನಶ್ಚರಣ ಮಾಡಿದನು. ಆ ರಾತ್ರಿ ಹನ್ನೆರಡು ಘಂಟೆಯ ಸಮಯದಲ್ಲಿ ಉತ್ಸವದ ಗಲಭೆ ಎಲ್ಲವೂ ಶಾಂತವಾಗಿ ಜನಸಮ್ಮರ್ದವಿಲ್ಲದೆ ದೇವಾಲಯವೆಲ್ಲವೂ ನಿಶ್ಶಬ್ದವಾಗಿದ್ದಾಗ, ಮಹಾಕಾಳಿಯು ಭಯಂಕರಾಕಾರವನ್ನು ತಳೆದು ಇವನ ಇದಿರಾಗಿ ನಿಂತಳು.

ಶೂದ್ರಕನು ಸ್ವಲ್ಪವೂ ಎದೆಗುಂದದೆ ಝುಗ್ಗನೆ ಎದ್ದು ನಿಂತು, "ಜನನೀ ! ನಾನು ನಿನ್ನ ಮರೆಹೊಕ್ಕಿರುವೆನು. ನನಗೆ ಏನು ಅಪ್ಪಣೆ?" ಎಂದನು

ಆ ದೇವಿಯು "ಎಲೆ ತರಳನೆ! ನಿನ್ನ ಧೈರ್ಯಕ್ಕೆ ನಾನು ಮೆಚ್ಚಿದೆನು. ಇತ್ತ ನೋಡು. ಈ ಕಯ್ಯಲ್ಲಿ ಹಾಲು, ಈ ಕಯ್ಯಲ್ಲಿ ಮೊಸರು; ಇವುಗಳಲ್ಲಿ ನಿನಗೆ ಯಾವುದು ಬೇಕು?" ಎಂದಳು.

ಬಾಲಕನು ಪರಮೇಶ್ವರಿಯನ್ನೇ ದಿಟ್ಟಿಸಿ ನೋಡುತ್ತ, "ದೇವೀ! ಇವುಗಳಲ್ಲಿ ಯಾವುದರಿಂದ ಏನು ಫಲವು ದೊರೆಯುವುದೆಂಬುದನ್ನು ವಿವರವಾಗಿ ಹೇಳದೆ ಬೇಕಾದುದನ್ನು ತೆಗೆದುಕೊಳ್ಳುವಂತೆ ಹೇಳಿದರೇನಾ ದೀತು? ಇವುಗಳ ಉಪಯೋಗವೇನೆಂಬುದನ್ನು ಮೊದಲು ತಿಳಿಸಿದ ರಲ್ಲವೇ?" ಎಂದನು.

ಮಹಾಕಾಳಿಯು ಇವನ ಚಾತುರ್ಯಕ್ಕೆ ಮೆಚ್ಚಿ, "ಬಾಲಕನೆ! ಮೊಸ ರನ್ನು ಕುಡಿದರೆ, ವ್ಯಾಸ ವಾಲ್ಮೀಕಿಗಳಿಗೆ ಸಮಾನನಾದ ಋಷಿಯಾಗಿ

ಮಹಾಪ್ರಭಾವದಿಂದ ಕಂಗೊಳಿಸುವೆ; ಹಾಲನ್ನು ಕುಡಿದಲ್ಲಿ ಸಮಸ್ತ ಭೂಪಾಲರನ್ನೂ ಜಯಿಸಿ ಚಕ್ರವರ್ತಿಯಾಗಿ ಚಿರಕಾಲ ರಾಜ್ಯಭಾರ ಮಾಡುವೆ” ಎಂದಳು.

“ತಾಯಿ! ಎರಡನ್ನೂ ಇತ್ತ ಕೊಡು. ನೋಡಿ ನನಗೆ ಇಷ್ಟಬಂದುದನ್ನು ಆರಿಸಿಕೊಳ್ಳುವೆನು” ಎಂಬುದಾಗಿ ಬಾಲಕನು ಹೇಳಲಾಗಿ, ಪರಮೇಶ್ವರಿಯು ಮುಗುಳ್ನಗೆಯಿಂದ ಎರಡೂ ಪಾತ್ರೆಗಳನ್ನು ಆ ಹುಡುಗನ ಕೈಗೆ ಕೊಟ್ಟಳು.

ಶೂದ್ರಕನು ಮೊದಲು ಮೊಸರಿನ ಸ್ವಲ್ಪ ಭಾಗವನ್ನು ಸವಿ ನೋಡಿ “ತಾಯೇ! ಇದು ರುಚಿಯಾಗಿಲ್ಲ. ಹಾಲು ಕುಡಿದು ನೋಡುವೆನು” ಎಂದು ಹೇಳಿ ಹಾಲನ್ನೆಲ್ಲಾ ಕುಡಿದು ಬಿಟ್ಟನು

ಇದನ್ನು ಕಂಡು ಮಹಾಕಾಳಿಯು “ಎಲಾ! ಯಾವುದಾದರೊಂದನ್ನು ಕುಡಿಯದೆ ಹಾಲನ್ನೆಲ್ಲಾ ಕುಡಿದು, ಮೊಸರಿನಲ್ಲಿಯೂ ಅರ್ಧಭಾಗವನ್ನು ಕುಡಿದು ಬಿಟ್ಟೆಯಾ?” ಎಂದಳು.

ಆಗ ಶೂದ್ರಕನು “ಅಮ್ಮಾ! ಇದು ನನ್ನ ತಪ್ಪಲ್ಲ. ನೀನು ಮೊದಲೇ ಹಾಲಿನ ರುಚಿಯನ್ನೂ ಮೊಸರಿನ ರುಚಿಯನ್ನೂ ತಿಳಿಸಿದ್ದಲ್ಲಿ ನಾನು ಹೀಗೆ ಮಾಡುತ್ತಲಿರಲಿಲ್ಲ. ಹಾಗೇಕೆ ತಿಳಿಸಬಾರದಾಗಿದ್ದಿತು?” ಎಂದು ಪ್ರಶ್ನೆ ಮಾಡಿದನು.

ದೇವಿಯು “ಹಾಲು ಕುಡಿಯುವುದಕ್ಕಿಂತಲೂ ಮುಂಚಿತವಾಗಿ ನೀನು ಮೊಸರಿನಲ್ಲಿ ಅರ್ಧಭಾಗವನ್ನು ಕುಡಿದಿರುವೆಯಾದುದರಿಂದ, ಚಕ್ರವರ್ತಿ ಪದವಿಯನ್ನು ಅನುಭವಿಸುವುದಕ್ಕೆ ಮೊದಲು ಕೆಲವು ಕಷ್ಟಗಳಿಗೆ ಈಡಾಗುವೆ” ಎನ್ನುತ್ತಿದ್ದಂತೆಯೇ ಕಣ್ಮರೆಯಾದಳು.

ಶೂದ್ರಕನು ಈ ಮಾತನ್ನು ಕೇಳಿ ಎದೆಗುಂದದೆ, ಮನೆಗೆ ಬಂದು ನಡೆದ ಸಮಾಚಾರವನ್ನೆಲ್ಲ ತನ್ನ ತಂದೆಯ ಬಳಿಯಲ್ಲಿ ಒಕ್ಕಣಿಸಿದನು. ಆಗ ತಂದೆಯು ಆನಂದಭರಿತನಾಗಿ ಮಗನನ್ನು ಕುರಿತು ಆ ವಿಷಯವನ್ನು ರಹಸ್ಯವಾಗಿರಿಸಬೇಕೆಂಬುದಾಗಿ ಆಣತಿಯಿತ್ತನು.

ಇದಾದ ಕೆಲವು ದಿನಗಳಲ್ಲಿಯೇ ಭಾರದ್ವಾಜನು ತನ್ನ ಅವಸಾನಕಾಲವು ಸಮೀಪಿಸಿತೆಂದು ತಿಳಿದು, ತನ್ನ ಮಗನನ್ನು ಮೇಘಸ್ವಾತಿಯು

ಬಳಿಗೆ ಕರೆದುಯ್ದು "ನನಗೆ ಮುಪ್ಪು ಒದಗಿತು. ಈ ಹುಡುಗನನ್ನು ಕಾಪಾಡುವ ಭಾರವು ನಿನ್ನನ್ನು ಸೇರಿದುದು" ಎಂದು ಬಾಲಕನನ್ನು ರಾಜನಿಗೆ ಒಪ್ಪಿಸಲಾಗಿ, ಅರಸನು ಅದಕ್ಕೆ ಸಮ್ಮತಿಸಿ, ತನ್ನ ಮಕ್ಕಳಂತೆಯೇ ಅವನನ್ನೂ ಅಕ್ಕರೆಯಿಂದ ಕಾಣುತ್ತಿದ್ದನು.

ಬಳಿಕ ಕೆಲವು ಕಾಲದಲ್ಲಿಯೇ ಭಾರದ್ವಾಜನು ಪರಲೋಕಕ್ಕೆ ತೆರಳಿದನು ಗೌರಿಯು ಸತೀಧರ್ಮವನ್ನು ಅವಲಂಬಿಸಿದಳು. ಶೂದ್ರಕನು ರಾಜಪುತ್ರರೊಡನೆ ಕಲಿತು, ಅವರ ಮನ್ನಣೆಗೆ ಪಾತ್ರನಾಗಿ ಆಟಪಾಟಗಳಲ್ಲಿಯೂ ವಿದ್ಯಾವಿವೇಕಗಳಲ್ಲಿಯೂ ರಾಜಪುತ್ರರನ್ನು ಮೀರಿಸಿದನು ಇಷ್ಟರಲ್ಲಿಯೇ ಮೇಘಸ್ವಾತಿಯೂ ಕಾಲಧರ್ಮವನ್ನೈದಿದನು ಅನಂತರ ಹಿರಿಯಮಗನಾದ ಸ್ವಾತಿಯು ಸಿಂಹಾಸನವನ್ನೇರಿ ರಾಜ್ಯಭಾರವನ್ನು ಕೈಕೊಂಡನು. ಯುವರಾಜನಾದ ಜಯಸ್ವಾತಿಯೂ ಶೂದ್ರಕನೂ ಬೇರೆ ಶರೀರಗಳನ್ನು ಧರಿಸಿದ್ದರೂ ಒಂದೇ ಮನಸ್ಸಿನಿಂದ ಕೂಡಿದವರಂತೆ ಅನ್ಯೋನ್ಯವಾಗಿ ಸ್ನೇಹದಿಂದಿದ್ದರು. ಅರಮನೆಯಲ್ಲಿ ಆಗಾಗ್ಗೆ ನಡೆಯುತ್ತಿದ್ದ ವಿದ್ಯಾವಿವಾದಗಳಲ್ಲಿಯೂ, ಬಲಸಾಹಸಪ್ರದರ್ಶನಗಳಲ್ಲಿಯೂ ಹೋರಾಟವು ಮೊದಲಾದರೆ, ಪ್ರತಿಸಲವೂ ಶೂದ್ರಕನೇ ಮೊದಲನೆಯವನಾಗಿ ತೇರ್ಗಡೆ ಹೊಂದುತ್ತಿದ್ದನು ಆನೆ ಕುದುರೆಗಳನ್ನು ಏರುವಿಕೆ, ಅವುಗಳ ವೇಗವನ್ನು ಪರೀಕ್ಷಿಸುವಿಕೆ, ಚತುರಂಗ ಮೊದಲಾದ ಆಟಗಳು, ಟಗರು, ಹೋತ, ಹುಂಜ, ಲಾವುಗೆ ಮೊದಲಾದುವುಗಳ ಜೂಜು, ಜಟ್ಟಿಗಳ ಕಾಳಗ, ದನಿಯನ್ನು ಗುರುತು ಹಿಡಿದು ಗುರಿಯನ್ನು ಭೇದಿಸುವುದರಲ್ಲಿಯೂ, ಚಲಾಚಲ ತಿರ್ಯಕ್ಸಾಚೀ ವೇಧಗಳಲ್ಲಿಯೂ, ಧನುರ್ವೇದ, ಆಯುಧಕಲಾಕೌಶಲ, ದೂತ, ಚಾರ, ಭಟ, ಮಂತ್ರಿ ಸೇನಾಪತಿಗಳ ಕಾರ್ಯನಿರ್ವಹಣದಲ್ಲಿಯೂ, ವ್ಯೂಹನಿರ್ಮಾಣದಲ್ಲಿಯೂ, ಸಂಧಿವಿಗ್ರಹ ಮೊದಲಾದ ಕಾರ್ಯಪ್ರಚಾರದಲ್ಲಿಯೂ, ಕಾವ್ಯನಾಟಕಾಲಂಕಾರ ಚಿತ್ರಕವಿತೆ ಮೊದಲಾದುವುಗಳಲ್ಲಿಯೂ, ನಾಟ್ಯವಿದ್ಯಾಭಿನಯಗಳಲ್ಲಿಯೂ ಗಾಂಧರ್ವವೇದ ರಹಸ್ಯಗಳಲ್ಲಿಯೂ, ಚಿತ್ರರಚನೆಯಲ್ಲಿಯೂ, ಶಿಲ್ಪಶಾಸ್ತ್ರದಲ್ಲಿಯೂ ಅದ್ವಿತೀಯನೆನಿಸಿ ಶೂದ್ರಕನು ಪುರುಷದೇಹವನ್ನು ಧರಿಸಿದ ಭಾರತಿಯೋ ಎಂಬಂತೆ ಅನವರತವೂ ವಿದ್ಯಾವಿನೋದದಿಂದಲೇ ಸರಸಮತಿಗಳಾದ ಮಿತ್ರರೊಂದಿಗೆ ಕಾಲಕಳೆಯುತ್ತಿದ್ದನು.

ಸ್ವಾತಿಯು ಪಟ್ಟಾಭಿಷಿಕ್ತನಾದ ಕೆಲವು ವರ್ಷಗಳಲ್ಲಿಯೇ ವಿದೇಹ ದೇಶಾಧಿಪತಿಯಾದ ವಿಜಯಸಿಂಹನ ಮಗಳಾದ ಅನಂಗಲೇಖೆಯನ್ನು ಪಾಣಿಗ್ರಹಣಮಾಡಿ, ರಾಜತಂತ್ರಗಳನ್ನು ಜಾಗರೂಕತೆಯಿಂದ ನಡೆಯಿಸು ತ್ತಿದ್ದನು. ಈ ಅನಂಗಲೇಖೆಯ ತಮ್ಮನಾದ ಚಂಡಸಿಂಹನು ಜನಕನಾದ ವಿಜಯಸಿಂಹನೊಡನೆಯೂ ತನ್ನ ಹಿರಿಯ ಅಣ್ಣನಾದ ಸಂಗ್ರಾಮ ಸಿಂಹನೊಡನೆಯೂ ದ್ವೇಷವನ್ನು ಬಳೆಯಿಸಿ ಅಕ್ಕನಾದ ಅನಂಗಲೇಖೆಯ ಬಳಿಯಲ್ಲಿಯೇ ಇರುತ್ತಿದ್ದನು. ಇವನ ಹೆಡ್ಡತನವೂ ದುರುದುಂಬಿತನವೂ ಸ್ವಲ್ಪ ಕಾಲದಲ್ಲಿಯೇ ಇಲ್ಲಿಯೂ ಹೊರಬೀಳದಿರಲಿಲ್ಲ. ಅರಸನ ಮೈದುನನಾದುದರಿಂದ ದೇಶದಲ್ಲಿ ಯಾರೊಬ್ಬರೂ ಬಾಯ್ದೆರೆದು ಏನನ್ನೂ ಹೇಳಲಾರದೆ, ಇವನಿಂದ ಉಂಟಾಗುವ ತೊಂದರೆಗಳನ್ನು ಹೇಗೋ ವಿಧಿ ಯಿಲ್ಲದೆ ಸಹಿಸಿಕೊಂಡಿದ್ದರು. ಅವನು ಪ್ರತಿಯೊಂದು ವಿಷಯದಲ್ಲಿಯೂ ತಲೆಹಾಕುತ್ತ ವಿತಂಡವಾದಗಳಿಂದಲೂ ಪರುಷವಾಕ್ಯಗಳಿಂದಲೂ ಅಧಿ ಕಾರಿಗಳ ಮನಸ್ಸನ್ನು ನೋಯಿಸಿ, ರಾಜಕಾರ್ಯಕುಶಲರಾದ ಮಂತ್ರಿ ಮೊದಲಾದವರನ್ನೂ ಬಹಳವಾಗಿ ಪೀಡಿಸುತ್ತಿದ್ದನು. ಯಾವ ವಿಷಯ ದಲ್ಲಿಯೂ ತನಗೆ ಸರಿಸಾಟಿಗಳಿಲ್ಲವೆಂತಲೂ, ರಾಜಕಾರ್ಯಗಳಲ್ಲಿಯೂ ನೀತಿ ನಿಪುಣತೆಯಲ್ಲಿಯೂ ತಾನೇ ಅದ್ವಿತೀಯನೆಂತಲೂ ಹೆಮ್ಮೆಯಿಂದ ಮೆರೆ ಯುತ್ತ, ಮಂತ್ರಿಗಳ ರಾಜತಂತ್ರಗಳನ್ನೂ ತಿದ್ದುಪಡಿಸುತ್ತ, ಯಾರಾದರೂ ಇದಿರು ಮಾತನಾಡಿದರಾದರೆ ಅವರೊಂದಿಗೆ ಜಗಳವಾಡಿ, ಅವರನ್ನು ಶಿಕ್ಷೆಗೆ ಗುರಿಪಡಿಸುತ್ತ, ತನ್ನ ವಿಷಯದಲ್ಲಿ ಯಾರು ಎಳ್ಳಷ್ಟು ಅಪರಾಧ ಮಾಡಿದರೂ, ತನ್ನ ಮಾತಿಗೆ ಪ್ರತಿಹೇಳಿದರೂ, ಆ ವಿಷಯಗಳನ್ನು ಆಗಾಗಲೇ ಅನಂಗಲೇಖೆಗೆ ದೂತರ ಮೂಲಕ ಹೇಳಿಕಳುಹಿಸಿ, ಅವರನ್ನು ಶಿಕ್ಷಿಸಿದಲ್ಲದೆ ತಾನು ಮನೆಯಲ್ಲಿ ಅರೆಗಳಿಗೆಯಾದರೂ ನಿಲ್ಲಲೊಲ್ಲೆನೆಂಬು ದಾಗಿ ಬೆದರಿಸುತ್ತ ನಿತ್ಯಪ್ರಯಾಣಕಾತರನಾಗಿರುತ್ತಿದ್ದನು. ಅನಂಗ ಲೇಖೆಯೂ ಕೂಡ ತಮ್ಮನ ಮೇಲಣ ಪ್ರೇಮಾತಿಶಯದಿಂದಲೂ ಪತಿಯು ತನಗೆ ಅನುಕೂಲನಾಗಿರುವುದರಿಂದಲೂ ಎಲ್ಲವನ್ನೂ ರಾಜಸ್ಯಾಲಕನ ಇಷ್ಟ ದಂತೆಯೇ ನಡೆಯಿಸುತ್ತಿದ್ದಳು.

ಅನಂಗಲೇಖೆಯು ಸೌಂದರ್ಯದ ಗಣಿ, ಮಹಾಚತುರೆ. ಅದಕ್ಕೆ ತಕ್ಕಂತೆಯೇ ಅರಸನಾದ ಸ್ವಾತಿಯು ಮಂದಮತಿ; ಅವನ ಮನಸ್ಸು ಬೆಣ್ಣೆಯ ಮುದ್ದೆ. ಈ ಕಾರಣಗಳಿಂದ ಅರಸನು ರಾಣಿಯ ಮಾತನ್ನು

ಸ್ವಲ್ಪವೂ ವಿಚಾರುತ್ತಿರಲಿಲ್ಲ ಹೀಗಾಗಿ ಕ್ರಮಕ್ರಮವಾಗಿ ರಾಜತಂತ್ರಗಳೆಲ್ಲವೂ ರಾಜಸ್ಯಾಲಕನಾದ ಚಂಡಸಿಂಹನ ವಶವಾಗುತ್ತಿದ್ದುವು ಒಂದೊಂದು ಸಮಯದಲ್ಲಿ ಮಂತ್ರಿಗಳೂ ಈ ಅತ್ಯಾಚಾರವನ್ನು ಕಂಡು ವ್ಯಥೆಪಟ್ಟು ತಲ್ಲಣಿಸುತ್ತಿದ್ದರು.

ಸ್ವಾತಿಮಹಾರಾಜನ ಆಸ್ಥಾನದಲ್ಲಿ ಧರ್ಮಪಾಲನೆಂತಲೂ ಚಕೋರನೆಂತಲೂ ಇಬ್ಬರು ಮಂತ್ರಿಗಳಿದ್ದರು. ಅವರಲ್ಲಿ ಚಕೋರನು ಬಹಳ ಕಪಟಿ, ಮಾಯಾವಿ, ಸಮಯಕ್ಕೆ ತಕ್ಕಂತೆ ನಡೆಯುತ್ತ ಜನಗಳ ಮನಸ್ಸನ್ನು ವಶಗೊಳಿಸುವುದರಲ್ಲಿ ಚದುರ. ತನ್ನ ಕೆಲಸವಿಲ್ಲವಾದರೆ ಯಾರೊಂದಿಗೂ ಬಾಯ್ದೆರೆದು ಮಾತನಾಡತಕ್ಕವನಲ್ಲ ಇವನ ಸ್ನೇಹವೂ ಅಂತೆಯೇ. ಧರ್ಮಪಾಲನು ಮಾತ್ರ ತನ್ನ ಹೆಸರಿಗೆ ತಕ್ಕಂತೆಯೇ ನಡೆಯತಕ್ಕವನು. ಎಂತಹ ಕುಟಿಲವಾದ ರಾಜತಂತ್ರವನ್ನಾದರೂ ಧರ್ಮವನ್ನು ಮೀರಿ ನಡೆಯಿಸತಕ್ಕವನಲ್ಲ. ಪರಹಿಂಸೆಗೂ ಅವನಿಗೂ ಬಲು ದೂರ. ಪರನಿಂದೆ, ಅಸೂಯೆಗಳ ಸುಳಿವನ್ನೇ ಅರಿತವನಲ್ಲ. ಪರೋಪಕಾರವೇ ಅವನ ಜನ್ಮವ್ರತವಾಗಿದ್ದಿತು. ಅನಾಥರನ್ನು ಸಲಹುವುದು ಅವನ ಕುಲಧರ್ಮ ಮರೆಹೊಕ್ಕವರನ್ನು ಕಾಪಾಡುವ ಬಿರುದು ಅವನಿಗೇ ಸಲ್ಲತಕ್ಕುದು. ಅತಿಥಿಪೂಜೆಯು ಅವನ ನಿತ್ಯಾನುಷ್ಠಾನಗಳಲ್ಲಿ ಒಂದು. ಮಠ, ಸತ್ರ, ಗುಡಿ, ಗೋಪುರಗಳನ್ನು ಪುನರುಜ್ಜೀವನ ಮಾಡಿ ಪ್ರತಿಷ್ಠೆಗೊಳಿಸುವುದು ಆತನಿಗೆ ಮುಖ್ಯಪುರುಷಾರ್ಥ ಸ್ವಾಮಿಭಕ್ತಿಯೂ ರಾಜಕಾರ್ಯನಿಷ್ಠೆಯೂ, ಪವಿತ್ರವಾದ ಕೀರ್ತಿಯೂ ಆತನ ಮುಖ್ಯಧ್ಯೇಯಗಳಾಗಿದ್ದುವು ಚಂಡಸಿಂಹನ ಸುಳಿವೆಂದರೆ ಈ ಮಂತ್ರಿಗಳಿಬ್ಬರಿಗೂ ತಾಳಲಾರದಷ್ಟು ಜುಗುಪ್ಸೆ. ಆದರೆ ಧರ್ಮಪಾಲನು ಇದಿರಲ್ಲಿಯೇ ಚಂಡಸಿಂಹನನ್ನು ಹಂಗಿಸಿ ಮಾತನಾಡುವನು. ಯುಕ್ತಿಯಿಂದ ಅವನ ಲೋಪಗಳನ್ನು ಹೊರಗೆಡಹುವನು ಉಪಾಯದಿಂದಲೇ ಅವನ ಮೂಲಕ ಸಂಭವಿಸಬಹುದಾದ ಅಪಾಯಗಳನ್ನು ತೋರುವನು. ಮರುಮಾತನಾಡದಂತೆ ಅಲ್ಲಿಂದಲ್ಲಿಗೆ ಆಗಾಗಲೇ ಅವನನ್ನು ತುಳಿಯುವನು ಚಕೋರನು ಮಾತ್ರ ಚಂಡಸಿಂಹನನ್ನು ಇದಿರು ಹಾಕಿಕೊಳ್ಳುತ್ತಿರಲಿಲ್ಲ ಅವನು ಎಂತಹ ಮಾತನ್ನಾಡಿದರೂ 'ಭಾಪು !' ಎಂಬುದಾಗಿ ಮೆಚ್ಚುಗೆಯನ್ನು ತೋರುವನು. ಕಾರ್ಯವು ಕೆಟ್ಟಿತೆಂದರೆ ಆ ಭಾರವನ್ನು ಇತರರ ಮೇಲೆ ಹೊರಿಸುವನು. ಚಂಡಸಿಂಹನ ಮಾತು

ಧರ್ಮವಿರುದ್ಧವಾಗಿದ್ದರೂ ಆ ಕಾಲಕ್ಕೆ ಅದೇ ಸರಿ ಎನ್ನುವನು. ಸುಳ್ಳು ಹೇಳಿದರೂ ರಾಜನೀತಿಗೆ ಅದು ವಿರುದ್ಧವಲ್ಲವೆನ್ನುವನು ಯಾರಾದರೂ ಚಂಡಸಿಂಹನಲ್ಲಿಗೆ ಹೋಗಿ ತನ್ನ ವಿಷಯವಾಗಿ ಚಾಡಿ ಹೇಳಿದರಾದರೆ ಅವರನ್ನು ನಾಲ್ಕರಷ್ಟು ಅಪರಾಧಕ್ಕೆ ಗುರಿಮಾಡುವನು ಚಂಡಸಿಂಹನು ತನ್ನಲ್ಲಿಗೆ ಬಂದ ಸಮಯದಲ್ಲಿ ಗೌರವದಿಂದ ಬರಮಾಡಿಕೊಂಡು ರಾಜನಂತೆಯೇ ಅವನನ್ನು ಮನ್ನಿಸುತ್ತಿದ್ದನು. ಅವನು ಯಾವುದಾದರೊಂದು ಕಾರ್ಯವನ್ನು ಪ್ರಸ್ತಾಪಿಸಿದರೆ ಅದಕ್ಕಾಗಿಯೇ ತಾನು ಪಾಡುಪಡುತ್ತಿರುವೆನೆಂತಲೂ ಈ ನಿಮಿಷದಲ್ಲಿಯೇ ಆ ಕಾರ್ಯವು ನೆರವೇರುವುದೆಂತಲೂ ಅಭಿನಯಗಳಿಂದ ತೋರುವನು. ಈ ಬಗೆಯ ವರ್ತನದಿಂದ ಚಂಡಸಿಂಹನಿಗೆ ಚಕೋರನಲ್ಲಿ ಆದರವೂ ಗೌರವವೂ ಹೆಚ್ಚಿದಂತೆಯೇ ಧರ್ಮಪಾಲನ ವಿಷಯದಲ್ಲಿ ಅಸೂಯೆಯೂ ತಿರಸ್ಕಾರವೂ ಮಿತಿಮೀರುತ್ತಿದ್ದಿತು.

ರಾಜಪುತ್ರರೂ ಶೂದ್ರಕನೂ ವಿನೋದಗೋಷ್ಠಿಯಲ್ಲಿಯೂ ವನವಿಹಾರಾದಿಗಳಲ್ಲಿಯೂ ಕಾಲಕಳೆಯುವಾಗ ಒಬ್ಬರನ್ನೊಬ್ಬರು ಅಡ್ಡ ಹೆಸರುಗಳಿಂದ ಕರೆಯುವ ವಾಡಿಕೆಯಿದ್ದಿತು. ಈ ಅಡ್ಡ ಹೆಸರುಗಳು ಅವರವರ ಗುಣಾತಿಶಯಗಳಿಗೂ ವಿವೇಕಸಂಪತ್ತಿಗೂ ತಕ್ಕಂತೆಯೇ ಇರುತ್ತಿದ್ದುವು ಚಂಡಸಿಂಹನಿಗೆ ನಾಲಗೆ ಮಂದ ಶ ಷ ಸ ವರ್ಣಗಳನ್ನು ಸ್ಪಷ್ಟವಾಗಿ ಉಚ್ಚರಿಸುವುದಕ್ಕೆ ಬಾಯಿ ತಿರುಗುತ್ತಿದ್ದಿಲ್ಲ. ಹೀಗಾಗಿ ಅವನು ಶ ಷ ಸ ಈ ಮೂರು ವರ್ಣಗಳಿಗೂ ಶವರ್ಣವನ್ನೇ ಉಪಯೋಗಿಸುತ್ತಿದ್ದನು. ಈ ಕಾರಣದಿಂದ ಚಂಡಸಿಂಹನಿಗೆ **ಶಕಾರ**ನೆಂಬ ಹೆಸರು ಪರಿಹಾಸಗೋಷ್ಠಿಯಲ್ಲಿ ರೂಢವಾಗಿದ್ದಿತು.

ಶೂದ್ರಕನಿಗೆ ಬಂಧುದತ್ತನೆಂಬ ಬ್ರಾಹ್ಮಣನೊಬ್ಬನು ಅತ್ಯಂತವಾಗಿ ನಂಬುಗೆಯ ಗೆಳೆಯ. ಇವನು ದೊಡ್ಡ ಹಣಗಾರ ವಿದ್ಯೆಯಲ್ಲಿಯೂ ಚಾತುರ್ಯದಲ್ಲಿಯೂ ಶೂದ್ರಕನಿಗೆ ಈಡಾಗಿರುತ್ತಿದ್ದನು ಆದರೆ ಮಾತ್ರ ಇವನು ಶೂದ್ರಕನಂತೆ ರಾಜಪುತ್ರರ ಸಹವಾಸದಲ್ಲಿ ಸೇರದೆ ಯಾವಾಗಲೂ ತೀರ್ಥಯಾತ್ರೆಗಳಲ್ಲಿಯೋ ಧರ್ಮಕಾರ್ಯಗಳಲ್ಲಿಯೋ ಪುರಾಣಶ್ರವಣಾದಿಗಳಲ್ಲಿಯೋ ಕಾಲಕಳೆಯುತ್ತಿದ್ದನು ಪ್ರಪಂಚದ ಸೃಷ್ಟಿ ಚಾತುರ್ಯಪರಿಶೀಲನದಲ್ಲಿ ಇವನಿಗೆ ಬಹಳ ಅಕ್ಕರೆ ಚಿತ್ರಕಲೆಯಲ್ಲಿ ಅದ್ವಿತೀಯನು. [illegible]ಶ್ರಮ ಧರ್ಮಗಳನ್ನು ಸ್ವಲ್ಪವೂ ಮೀರತಕ್ಕವನಲ್ಲ. ಈ ಕಾರಣದಿಂದ [illegible]

ಇವನೂ ಆಗಾಗ ಕಲೆತು ಪರಸ್ಪರ ಸುಖದುಃಖಗಳನ್ನು ವಿಚಾರಿಸಿ, ತಮ್ಮ ಕಲಾಕೌಶಲಗಳನ್ನು ಕುರಿತು ಚರ್ಚಿಸುತ್ತಿದ್ದರು

ಅರಸನಾದ ಸ್ವಾತಿಗೆ ವಿನಯವತಿಯೆಂಬ ಸೋದರಿಯಿದ್ದಳು, ವಯಸ್ಸಿನಲ್ಲಿ ಅನಂಗಲೇಖೆಗಿಂತಲೂ ಚಿಕ್ಕವಳು ವೃದ್ಧನಾದ ಮೇಘಸ್ವಾತಿಯು ಈ ಲೋಕವನ್ನು ಬಿಡುವುದಕ್ಕೆ ಮುಂಚೆಯೇ ಅವಳ ಪೋಷಣೆಗೂ ಮದುವೆ ಮೊದಲಾದ ಸಕಲ ಕಾರ್ಯಗಳಿಗೂ ತಕ್ಕ ಸೌಕರ್ಯಗಳನ್ನು ಕಲ್ಪಿಸಿ ಉಡಿಗೆತೊಡಿಗೆಗಳನ್ನೂ ಮದುವೆಯ ಸಮಯದಲ್ಲಿ ವಧೂವರರಿಗೆ ಕೊಡಬೇಕಾದ ಬಳುವಳಿಗಳನ್ನೂ ನಿರ್ಣಯಗೊಳಿಸಿ, ತನ್ನ ಮಕ್ಕಳಾದ ಸ್ವಾತಿಯಾಗಲಿ ಜಯಸ್ವಾತಿಯಾಗಲಿ ತನ್ನ ಮುದ್ದುಮಗಳನ್ನು ಅಕ್ಕರೆಯಿಂದ ನೋಡುವರೋ ಇಲ್ಲವೋ ಎಂಬ ಭೀತಿಯಿಂದ ಆಕೆಯ ಅಭಿಲಾಷೆಗಳನ್ನು ನೆರವೇರಿಸುವ ಸಲುವಾಗಿ ತನ್ನ ಮಂತ್ರಿವರ್ಯನಾದ ಧರ್ಮಪಾಲನನ್ನು ನಿಯಮಿಸಿ, ಆತನಿಂದ ಭಾಷೆಯನ್ನು ತೆಗೆದುಕೊಂಡಿದ್ದನು. ಧರ್ಮಪಾಲನಾದರೋ ರಾಜ್ಯಕಾರ್ಯಗಳನ್ನು ಒಂದು ಪಾಲಾಗಿಯೂ ಇವಳ ಸಂರಕ್ಷಣೆಯನ್ನು ಒಂದು ಪಾಲಾಗಿಯೂ ಬಗೆದು, ಯಾವ ವಿಧವಾದ ಕುಂದುಕೊರತೆಗಳಿಗೂ ಅವಕಾಶವಿಲ್ಲದಂತೆ ಆಕೆಯ ವಿದ್ಯಾವಿನಯಗಳ ಅಭಿವೃದ್ಧಿಗೆ ಯೋಗ್ಯರಾದ ಆಪ್ತರನ್ನು ನಿಯಮಿಸಿ, ಅನುದಿನವೂ ಮೇಲ್ವಿಚಾರಣೆಯಿಂದ ತಿಳಿದುಕೊಳ್ಳುತ್ತಿದ್ದನು ಅನಂಗಲೇಖೆಗೆ ಈ ಬಗೆಯ ಏರ್ಪಾಡು ಸ್ವಲ್ಪವೂ ಒಪ್ಪಿಗೆಯಾಗಿರಲಿಲ್ಲ ವಿನಯವತಿಗಿರುವಷ್ಟು ಸ್ವಾತಂತ್ರ್ಯವು ತನಗಿಲ್ಲದಿರುವುದೇ ಅದಕ್ಕೆ ಮೂಲಕಾರಣ. ಚಂಡಸಿಂಹನು ವಿನಯವತಿಯನ್ನು ಕಂಡಾಗಲೆಲ್ಲಾ ಅನಾಗರಿಕರಿಗೆ ಮಾತ್ರವೇ ಯೋಗ್ಯವಾದ ಅಸಭ್ಯ ಪರಿಹಾಸಗಳಿಂದ ಅವಳ ಮನಸ್ಸನ್ನು ಕಳವಳಗೊಳಿಸುತ್ತಿದ್ದನು. ವಿನಯವತಿಯಾದರೋ, ಇವನನ್ನು ಶಾಖಾಮೃಗಕ್ಕೆ ಸಮಾನವಾಗಿ ತಿಳಿದಿದ್ದಳು. ಇನ್ನೂ ಮದುವೆಗೆ ತಕ್ಕ ಪ್ರಾಯವು ಬಂದಿರಲಿಲ್ಲವಾಗಿ ವಿನಯವತಿಯು ವಿಶೇಷವಾಗಿ ಗಂಡುಸರ ಇದಿರಲ್ಲಿ ನಾಚಿಕೆಯನ್ನು ತೋರದಿದ್ದರೂ ಸಹಜಸಿದ್ಧವಾದ ವಿನಯವನ್ನು ಎಳ್ಳಷ್ಟಾದರೂ ಮೀರುತ್ತಿರಲಿಲ್ಲ ಚಂಡಸಿಂಹನೂ ಅವನ ಅಸಭ್ಯ ಪರಿಹಾಸಗಳೂ ಆಕೆಗೆ ಉಪಹಾಸವನ್ನು ಮಾತ್ರವೇ ಉಂಟುಮಾಡುತ್ತಿದ್ದುವು ವಿನಯವತಿಯನ್ನು ತಾನು ಮದುವೆಯಾದರೆ ಉಜ್ಜಯಿನೀರಾಜ್ಯದಲ್ಲಿ ತನಗೆ ನಾಲ್ಕನೆಯ ಪಾಲು ದೊರೆಯುವುದೆಂಬ

ದುರ್ಭಾವನೆಯೇ ಚಂಡಸಿಂಹನ ಈ ಬಗೆಯ ವ್ಯವಹಾರಕ್ಕೆ ಕಾರಣ ವಾಗಿದ್ದಿತು. ಅಸಂಗಲೇಖೆಯ ಮನಸ್ಸಿನಲ್ಲಿ ಮಾತ್ರ ವಿನಯವತಿಗೆ ರಾಜ್ಯದ ಸಂಪರ್ಕವೇ ಇಲ್ಲದಂತಾಗಿ ಸಂಪೂರ್ಣರಾಜ್ಯಾಧಿಕಾರವು ತನ್ನ ಪತಿಯ ಅಧೀನದಲ್ಲಿಯೇ ಇರಬೇಕೆಂಬುದಾಗಿ ದೃಢತರವಾದ ಅಭಿಸಂಧಿ ಇದ್ದಿತ್ತಾದರೂ ಬಾಯಾರ ಯಾರೊಡನೆಯೂ ಹೇಳಿದವಳಲ್ಲ ಕಿರಿಯವನಾದ ಜಯಸ್ವಾತಿಗೆ ತಂಗಿಯಾದ ವಿನಯವತಿಯೆಂದರೆ ಪ್ರಾಣ; ಅಕ್ಕರೆಯು ಉಕ್ಕಿ ಬರುತ್ತಿದ್ದಿತು. ಕಾಲಕ್ರಮವಾಗಿ ಚಂಡಸಿಂಹನ ದುರುಳತನವನ್ನು ಕಂಡ ಜಯಸ್ವಾತಿಯು ಆಕೆಯನ್ನು ಚಂಡಸಿಂಹನ ಕಣ್ಣಿಗೆ ಬೀಳದಂತೆ ತಡೆಮಾಡುತ್ತಿದ್ದನು. ವಿನಯವತಿಯೂ ಕೂಡ ಹಿರಿಯ ಅಣ್ಣನಿಗಿಂತಲೂ ಕಿರಿಯಣ್ಣನನ್ನೇ ಪ್ರೇಮಗೌರವಗಳಿಂದ ನೋಡುತ್ತ ಆತನ ಮಾತಿಗೆ ತಪ್ಪದೆ ನಡೆಯುತ್ತಿದ್ದಳು.

ಶೂದ್ರಕನು ತನ್ನ ಗೆಳೆಯರೊಂದಿಗೆ ಒಂದು ದಿನ ಸಾಯಂಕಾಲದಲ್ಲಿ ಉಜ್ಜಯಿನಿಗೆ ಸಮೀಪದಲ್ಲಿಯೇ ಇದ್ದ ಒಂದು ಬೆಟ್ಟವನ್ನು ಹತ್ತಿ, ಅದರ ತುದಿಯ ಮೇಲಿನ ಮರದಡಿಯಲ್ಲಿ ಕುಳಿತು, ಪ್ರಕೃತಿಸೌಂದರ್ಯವನ್ನೂ ಪಟ್ಟಣದ ಸೊಬಗನ್ನೂ ಎರಡು ಪಕ್ಕದಲ್ಲಿಯೂ ಹರಿಯುವ ಸಿಪ್ರಾನದಿಯನ್ನೂ ಮೇಘಜಾಲಪರಿವೃತವಾದ ಆಕಾಶವನ್ನೂ ನೋಡಿ, ಸುಖಸಂಕಥಾ ವಿನೋದದಲ್ಲಿದ್ದನು. ಕೆಲವು ಕಾಲವಾದ ಬಳಿಕ ಅಲ್ಲಿಂದ ಹೊರಟು ಮುಂದೆ ನಡೆಯುವಾಗ್ಗೆ ಒಂದು ಕೋಡುಗಲ್ಲು ಕಾಣಿಸಿತು. ಅದು ನುಣ್ಣಗೆ ದುಂಡಾಗಿದ್ದಿತು. ಅದರ ಮೇಲೆ ಹತ್ತುವುದು ಸುಲಭಸಾಧ್ಯವಾಗಿ ಕಂಡು ಬರಲಿಲ್ಲ. ಯುವರಾಜನಾದ ಜಯಸ್ವಾತಿಯು, ಯಾರಾದರೂ ಈ ಕೋಡುಗಲ್ಲಿನ ಮೇಲೆ ಹತ್ತಿ ಕುಳಿತುಕೊಂಡರೆ ಅಂತಹವರಿಗೆ ತನ್ನ ರತ್ನಾಂಗುಳೀಯಕವನ್ನು ಪಾರಿತೋಷಿಕವಾಗಿ ಕೊಡುವೆನೆಂದು ವಿನೋದದಿಂದ ಹೇಳಿದನು. ವಿಶ್ವಿಲಕನು ನಾಲ್ಕು ಅಡಿ ಎತ್ತರದ ವರೆಗೆ ಹೇಗೋ ಹತ್ತಿ ಜಾರಿ ಅಲ್ಲಿಂದ ಇಳಿಯಲಾರದೆ ಶೂದ್ರಕನ ಸಹಾಯದಿಂದ ಕೆಳಕ್ಕೆ ಇಳಿದನು. ಸಂಘಿಲಕನೆಂಬ ಬೌದ್ಧನು ಒಂಬತ್ತು ಅಡಿಯ ವರೆಗೆ ಹತ್ತಿ ದಣಿದು ತ್ರಿಶಂಕುವಿನಂತೆ ಆದನು. ಏಣಿಯ ಸಹಾಯವಿದ್ದರೆ ತಾನು ಸುಲಭವಾಗಿ ಏರುವೆನೆಂಬುದಾಗಿ ಬಂಧುದತ್ತನು ಹೇಳಿದನು. ಯುವರಾಜನೂ ಮಂತ್ರಿಪುತ್ರನೂ ವಿನೋದವನ್ನು ನೋಡುತ್ತಿದ್ದರು. ಶೂದ್ರಕನು

ಮೂರು ಬಾರಿ ಪ್ರಯತ್ನಪಟ್ಟು ಜಾರಿ ಬಿದ್ದು, ನಾಲ್ಕನೆಯ ಬಾರಿ ಹೇಗೋ ಸಾಹಸದಿಂದ ಹತ್ತಿ, ಅದರ ಮೇಲೆ ಕುಳಿತುಕೊಂಡನು. ಅದು ಸುಮಾರು ಇಪ್ಪತ್ತು ಅಡಿಗಳಿಗಿಂತಲೂ ಎತ್ತರವಾಗಿಯೇ ಇದ್ದಿತು ಇಂತು ಶೂದ್ರಕನ ಸಾಹಸವನ್ನು ಸಹಿಸಲಾರದೆ ಚಂಡಸಿಂಹನು ಆ ಕೋಡುಗಲ್ಲನ್ನು ಶೂದ್ರಕನೊಂದಿಗೆ ಕೆಳಕ್ಕೆ ಉರುಳಿಸುವುದಾಗಿ ಹೇಳಿದನು. ಶೂದ್ರಕನು ಹಾಗೆಯೇ ಆಗಬಹುದೆಂದು ಹೇಳಿ ಆ ಕಲ್ಲಿನ ಮೇಲೆಯೇ ನಿಂತನು. ಬಳಿಕ ಚಂಡಸಿಂಹನು ತ್ರಿಶಂಕುವಿನಂತಿದ್ದ ಸಂಘಿಲಕನಿಗೆ ಆಸರೆಕೊಟ್ಟು ಕೆಳಕ್ಕೆ ಇಳಿಸಿದನು. ಎಲ್ಲರೂ ಸೇರಿ ತಮ್ಮ ಸಾಹಸವನ್ನೆಲ್ಲಾ ವೆಚ್ಚಮಾಡಿದರೂ ಆ ಕಲ್ಲು ಸ್ವಲ್ಪವೂ ಅಲುಗಲಿಲ್ಲ. ಬಳಿಕ ಶೂದ್ರಕನು ತಾನಾಗಿಯೇ ಇಳಿದು ಬಂದನು ಆ ಶಿಲೆಯು ನಡುವೆ ಸೀಳಾಗಿದ್ದಿತು. ಮೇಲೆ ಹತ್ತಿದ್ದಾಗ ಶೂದ್ರಕನು ಇದನ್ನು ಕಣ್ಣಾರೆ ನೋಡಿದ್ದ ಕಾರಣ ಅದನ್ನು ಉರುಳಿಸುವುದು ದೊಡ್ಡ ಕೆಲಸವಲ್ಲವೆಂದು ಭಾವಿಸಿ, ಕಲ್ಲಿನ ಅಡಿ ಸುತ್ತಲೂ ನೋಡಿ ತಾನೊಬ್ಬನೇ ಅದನ್ನು ಉರುಳಿಸುವುದಾಗಿ ಪಂದ್ಯಹಾಕಿಕೊಂಡನು. ಮಿಕ್ಕವರೆಲ್ಲರೂ ಸಮ್ಮತಿಸಿದರು ಆಗ ಶೂದ್ರಕನು ಆ ಕೋಡುಗಲ್ಲಿಗೆ ಆಸರೆಯಾಗಿ ಕೆಳಗಡೆ ಇಟ್ಟಿದ್ದ ಒಂದು ಒತ್ತುಗಲ್ಲನ್ನು ಒಂದು ಪಕ್ಕಕ್ಕೆ ಜರುಗಿಸಲಾಗಿ ಅದು ನೂರಾರು ಸಿಡಿಲುಗಳು ಒಂದೇ ಬಾರಿ ಹೊಡೆದಂತೆ ಭಯಂಕರ ಧ್ವನಿಯಿಂದ ಉರುಳಿ, ಬೆಟ್ಟದ ಬುಡದಲ್ಲಿದ್ದ ತಾವರೆಯ ಕೊಳದಲ್ಲಿ ಬಿದ್ದಿತು

ಮಹಾಕಾಳೇಶ್ವರನ ಪೂಜೆಗಾಗಿ ಅನುದಿನವೂ ಆ ಕೊಳದಿಂದ ತಾವರೆಗಳನ್ನು ಕುಯ್ದುಯ್ಯುತ್ತಿದ್ದರು. ಈ ಬಂಡೆಯು ಅಪ್ಪಳಿಸಿದುದರಿಂದ ಹೂಮೊಗ್ಗೆಗಳೆಲ್ಲವೂ ಪುಡಿಪುಡಿಯಾಗಿ ಒಂದು ತಿಂಗಳ ವರೆಗೂ ಒಂದು ಹೂವಾದರೂ ದೊರೆಯದಂತಾಯಿತು. ಆ ಕೋಡುಗಲ್ಲು ಉರುಳಿದ ಕೂಡಲೇ ಅದರ ಅಡಿಯಲ್ಲಿ ಇಕ್ಕಟ್ಟಾದ ಒಂದು ಸುರಂಗವಿರುವುದಾಗಿ ಶೂದ್ರಕನ ಕಣ್ಣಿಗೆ ಕಂಡುಬಂದಿತು. ಅದರ ದ್ವಾರದಿಂದ ಕೆಟ್ಟ ಗಾಳಿಯೂ ಹೊರಬರುತ್ತಿದ್ದಿತು. ಸಂಘಿಲಕನು ಬಳಿಸಾರ್ದು ಅದರೊಳಗೆ ಘಟಸರ್ಪವಿರುವುದಾಗಿ ಕೂಗಿಕೊಂಡನು. ಶೂದ್ರಕನು ಹತ್ತಿರಕ್ಕೆ ಹೋಗಿ ಇಣಿಕಿ

ನೋಡಲಾಗಿ ಒಳಗಡೆ ಕಗ್ಗತ್ತಲೆಯು ಕವಿದಿದ್ದಿತು. ಅಸ್ಪಷ್ಟವಾದ ಯಾವುದೋ ಶಬ್ದವು ಕೇಳುತ್ತಿದ್ದಿತು ಬಳಿಕ ಅವರೆಲ್ಲರೂ ಮನೆಗೆ ಬಂದರು. ಅರಸನಾದ ಸ್ವಾತಿಯು ತಾವರೆಕೊಳದ ವಿಚಾರವನ್ನು ಕೇಳಿ ಮನಸ್ಸಿನಲ್ಲಿಯೇ ಕನಲುತ್ತಿದ್ದನು.

ಹೀಗೆ ಕೆಲವು ದಿನಗಳು ಕಳೆದ ತರುವಾಯ ಮಹಾಕಾಳೇಶ್ವರನ ಜಾತ್ರೆಯು ಸಮಿಾಪಿಸಿತು. ಮಕರತೋರಣಗಳಿಂದಲೂ ಮುತ್ತಿನ ರಂಗ ವಲ್ಲಿಗಳಿಂದಲೂ ಪುರದ ಕೇರಿಗಳನ್ನೆಲ್ಲ ಸಿಂಗರಿಸಿದರು. ಪಟ್ಟಣಿಗರೆಲ್ಲರೂ ಬಂಧುಬಳಗಗಳೊಂದಿಗೆ ಮಿಷ್ಟಾನ್ನವನ್ನುಂಡು ಸಿಂಗರಿಸಿ, ಸ್ವರ್ಗಲೋಕ ಸುಖವನ್ನು ಅಲ್ಲಗಳೆಯುತ್ತಿದ್ದರು. ಅಲ್ಲಲ್ಲಿ ಕುದುರೆಯ ಜೂಜು, ಹುಂಜ ಗಳ ಕಾಳಗ, ಓಟದ ಪಂದ್ಯ, ಆಕಾಶಗಮನ, ಜಟ್ಟಿಯುಕಾಳಗ, ಬೊಂಬೆ ಯಾಟ, ಸಂಗೀತನಾಟ್ಯಚಿತ್ರಕಲಾವಿನೋದಗಳು ನಡೆಯುತ್ತಿದ್ದುವು. ಈ ಕುದುರೆಯ ಜೂಜಿನಲ್ಲಿ ರಾಜಪುತ್ರರೂ ಅವರ ಒಡನಾಡಿಗಳೂ ಹೋರಾ ಟಕ್ಕೆ ನಿಂತಿದ್ದರು. ಅವರಲ್ಲಿ ಶೂದ್ರಕನೂ ಒಬ್ಬನಾಗಿದ್ದನು. ಈ ವಿನೋದ ವನ್ನು ನೋಡುವುದಕ್ಕಾಗಿ ಪಟ್ಟಣದ ಮುಕ್ಕಾಲುಪಾಲು ಜನರೆಲ್ಲರೂ ಇಲ್ಲಿಯೇ ಸುತ್ತಲೂ ಉಪ್ಪರಿಗೆಗಳ ಮೇಲೆಯೂ ಒಳಗೂ ನೆರೆದಿದ್ದರು. ಅಂತೆಯೇ ಅನಂಗಲೇಖೆಯೂ ವಿನಯವತಿಯೂ ತಮ್ಮತಮ್ಮ ಪರಿವಾರ ದೊಂದಿಗೆ ಅಂತಃಪುರದ ಬಿಸಿಲುಮಾಳಿಗೆಯ ಮೇಲೆ ಆಸನಗಳನ್ನಲಂಕರಿಸಿ ದ್ದರು. ಕುದುರೆಗಳು ಜನಗಳ ಕಣ್ಮನಗಳನ್ನು ಸೂರೆಗೊಂಡಿದ್ದುವು.

ಆಗ ಶೂದ್ರಕನು ಮುತ್ತಿನ ಕಾಂತಿಯನ್ನು ಅಲ್ಲಗಳೆವ ಎತ್ತರವಾದ ತೇಜಿಯನ್ನು ಏರಿ ಅಲ್ಲಿಗೆ ಬಂದನು ಸಂಘಿಲಕನು ಕರಿಯ ಗುಜ್ಜು ತಟ್ಟನ್ನು ಹತ್ತಿ ರಂಗಸ್ಥಳವನ್ನು ಸೇರಿದನು. ಆ ಹಯರತ್ನವು ಕುರುಚಾದ ಬಾಲವನ್ನು ಅಲ್ಲಾಡಿಸುತ್ತ ಅರೆನಿಮಿಷವಾದರೂ ನಿಂತಲ್ಲಿ ನಿಲ್ಲದೆ ಹಿಂದಕ್ಕೂ ಮುಂದಕ್ಕೂ ತುಳಿದಾಡುತ್ತಿದ್ದಿತು. ಆಗ ಸಂಘಿಲಕನು ಅಂಗೈಯಿಂದ ಅದರ ಬೆನ್ನಿನ ಮೇಲೆ ಚಪ್ಪರಿಸುತ್ತ ಸಮಾಧಾನಪಡಿಸುತ್ತಿದ್ದನು ಬಂಧು ದತ್ತನು ಕೃಶದೇಹದ ಅತ್ಯುನ್ನತವಾದ ಕೆಂಪು ಕುದುರೆಯ ಮೇಲೆ ಕುಳಿತು ಆ ಎಡಗೆ ಬಂದನು. ವಿಶ್ವಲಕನು ಉತ್ತಮವಾದ ಶ್ವೇತಾಶ್ವವನ್ನೇರಿ ಸಮಯಕ್ಕೆ ಬಂದು ಸೇರಿದನು. ಯುವರಾಜನಾದ ಜಯಸ್ವಾತಿಯು

ಜೇನುಬಣ್ಣದ ಕೀಳ್ಗತ್ತಿನ ಉತ್ತಮಾಶ್ವದೊಂದಿಗೆ ನಡೆತಂದನು. ಚಂಡ ಸಿಂಹನು ಬೂದುಬಣ್ಣದ ಪೇರೊಡಲ ಪಂಚಕಲ್ಯಾಣಿಯನ್ನು ಏರಿ ರಂಗ ಸ್ಥಳವನ್ನು ಸೇರಿದನು. ಪಂತದ ಸಮಯವು ಸಮಿಾಪಿಸುತ್ತಿದ್ದ ಕಾರಣ ವೀರರೆಲ್ಲರೂ ತಮ್ಮ ಗೆಲುವು ತಮ್ಮ ತಮ್ಮ ಕುದುರೆಗಳನ್ನೇ ಹೊಂದಿರುವ ಕಾರಣ ಅವುಗಳನ್ನು ಒಳ್ಳೆಯ ಮಾತಿನಿಂದ ಪ್ರೋತ್ಸಾಹಗೊಳಿಸುತ್ತ ಫಲಾ ಹಾರಾದಿಗಳಿಂದ ಪರಿಶ್ರಮವನ್ನು ನೀಗಿಕೊಳ್ಳುತ್ತಿದ್ದರು. ಜೂಜಿನ ಕುದುರೆಗಳು ಓಡುವ ದಾರಿಯಲ್ಲಿ ಸುತ್ತಲೂ ಹೂಮರಳನ್ನು ಹರವಿ, ಅಲ್ಲಲ್ಲಿ ಐದು ಅಡಿಗಳ ಎತ್ತರವಾದ ತಡಕೆಗಳನ್ನೂ, ಕೆಲವೆಡೆ ಹತ್ತು ಅಡಿಗಳಷ್ಟು ಅಗಲವಾದ ಕಾಲುವೆಗಳನ್ನೂ, ಆರಡಿ ಎತ್ತರವಾದ ಮುಳ್ಳು ಪೊದೆಗಳನ್ನೂ ಕಲ್ಪಿಸಿದ್ದರು ರಂಗಸ್ಥಳದ ಎಡಭಾಗದಲ್ಲಿ ಪ್ರಭುಗಳೂ, ಸಾಮಂತರೂ, ರಾಜಾಧಿರಾಜರೂ ಕುಳಿತಿದ್ದರು. ಇವರು ಕುಳಿ ತಿದ್ದ ಉಪ್ಪರಿಗೆಯ ಮೇಲ್ಗಡೆಯ ಅಂತಸ್ತಿನಲ್ಲಿಯೇ ಅನಂಗಲೇಖೆಯೂ ವಿನಯವತಿಯೂ ಒಂದೇ ಮಂಚದ ಮೇಲೆ ಕುಳಿತು ವಿನೋದಗಳನ್ನು ನೋಡುತ್ತಿದ್ದರು.

ನಿಯಮಿತವಾದ ಸಮಯವು ಬಂದ ಕೂಡಲೇ ಅಶ್ವಾರೋಹಿಗಳ ಜಾಗರೂಕತೆಯನ್ನು ಸೂಚಿಸುವ ಸಲುವಾಗಿ ಘಂಟೆಯು ಮೊಳಗಿತು. ಒಡನೆಯೇ ವೀರರೆಲ್ಲರೂ ಕುದುರೆಗಳನ್ನು ಏರಿದರು. ಬಗೆಬಗೆಯ ಅವರ ಉಡುಪುಗಳು ಆನಂದಕರಗಳಾಗಿದ್ದುವು. ತೇಜಿಗಳು ತಮ್ಮ ಸಾಮರ್ಥ್ಯವನ್ನು ಪ್ರಕಾಶಗೊಳಿಸುವ ಸಲುವಾಗಿ ಆತುರಗೊಂಡಿದ್ದುವು. ಮರಳಿ ಘಂಟೆ ಬಾರಿಸಿತು. ಕೂಡಲೇ ತರುಣವೀರರೆಲ್ಲರೂ ತಮ್ಮ ಕುದುರೆಗಳನ್ನು ಸನ್ನೆ ಮಾಡಿ ಓಡಿಸಿದರು. ಒಂದು ಸುತ್ತು ಬರುವಷ್ಟರಲ್ಲಿಯೇ ಕರಿಯ ಗುಜ್ಜುತೇಜಿಯು ಎಲ್ಲಕ್ಕಿಂತಲೂ ಮುಂದಾಯಿತು. ಶೂದ್ರಕನ ಕುದು ರೆಯು ಎರಡನೆಯದಾಯಿತು. ಚಂಡಸಿಂಹನ ಪೇರೊಡಲನ್ನು ಹೊರ ಲಾರದೆ ಕುದುರೆಯು ಘುರ್ಘುರ ಧ್ವನಿಯಿಂದ ಹಿಂದೆಹಿಂದಕ್ಕೆ ತಡೆಯಿತು. ಜೇನುಬಣ್ಣದ ತೇಜಿಯು ಒಂದೇ ತೆರನಾಗಿ ಓಡುತ್ತ ಮೂರನೆಯ ದಾಗಿದ್ದಿತು. ಮೊದಲನೆಯ ಸುತ್ತು ಮುಗಿಯುವಾಗ್ಗೆ ಸಂಘಿಲಕನು ಮೊದಲನೆಯವನಾದನು. ಶೂದ್ರಕನು ನಲುವತ್ತು ಮಾರು ಹಿಂದೆ ಬಿದ್ದನು. ಜಯಸ್ವಾತಿಯೂ, ವಿಶ್ವಲಕನೂ ಬಂಧುದತ್ತನೂ ಚಂಡಸಿಂ

ಹನೂ ಕ್ರಮವಾಗಿ ಒಬ್ಬರ ಹಿಂದೆ ಒಬ್ಬರು ಬರುತ್ತಿದ್ದರು. ಎರಡನೆಯ ಸುತ್ತು ಮುಗಿಯುವ ವೇಳೆಗೆ ಚಂಡಸಿಂಹನು ಕೋಪದಿಂದ ತನ್ನ ಕುದುರೆಯನ್ನು ಅಪಾಯಸ್ಥಳದಲ್ಲಿ ಹೊಡೆಯಲಾಗಿ, ಸಿಟ್ಟೇರಿದ ಆ ತೇಜಿಯು ಮುಂಗಾಲುಗಳನ್ನು ಎತ್ತಿ ನಿಂತು ಅವನನ್ನು ಕೆಳಕ್ಕೆ ತಳ್ಳಿ ಓಡಿಹೋಯಿತು. ಹೀಗಾಗಿ ಮಿಕ್ಕ ಐವರು ಮಾತ್ರವೇ ಉಳಿದರು ಬಂಧುದತ್ತನ ಕುದುರೆಯು ವನಾಯುಜ ದೇಶದಲ್ಲಿ ಹುಟ್ಟಿದ ಕಾರಣ ಅತಿಸುಕುಮಾರವಾದುದು. ಅದರಿಂದ ಅದು ತಡಕೆಗಳನ್ನು ದಾಟಲಾರದೆ ನಿಟ್ಟುಸಿರ್ಗರೆಯುತ್ತ ನಡೆಯನ್ನು ಕಡಿಮೆಮಾಡತೊಡಗಿತು. ಇದನ್ನು ತಿಳಿದು ಬಂಧುದತ್ತನು ವೇಗವಾಗಿ ಓಡುವಂತೆ ಸನ್ನೆಮಾಡಿದನು. ಆದರೂ ಫಲಕಾರಿಯಾಗಲಿಲ್ಲ. ಯುವರಾಜನ ತೇಜಿಯು ಬಲಾಢ್ಯವಾದುದರಿಂದ ಎರಡನೆಯ ಸುತ್ತು ಮುಗಿಯುವಾಗ್ಗೆ ಜಯಸ್ವಾತಿಯು ಮೊದಲನೆಯವನಾದನು. ಸಂಘಿಲಕನು ಎರಡನೆಯವನೂ ಶೂದ್ರಕನು ಮೂರನೆಯವನೂ ಆದರು ವಿಶ್ವಲಕನೂ ಬಂಧುದತ್ತನೂ ಬಹಳ ಹಿಂದೆ ಬಿದ್ದರು. ಮೂರನೆಯ ಸುತ್ತಿಗೆ ಮೊದಲಿಟ್ಟ ಕೂಡಲೇ ಒಂದು ಕಾಲುವೆಯನ್ನು ದಾಟಿ ಮತ್ತೊಂದು ತಡಕೆಯನ್ನು ಹಾರಿ ಕುಪ್ಪಳಿಸುವ ಸಮಯದಲ್ಲಿ ದಣಿದಿದ್ದ ಸಂಘಿಲಕನ ಕುದುರೆಯು ಕೆಳಬಿದ್ದಿತು. ಸಂಘಿಲಕನಿಗೂ ಪೆಟ್ಟು ತಗುಲಿತು. ಅದನ್ನು ಲಕ್ಷ್ಯಮಾಡದೆ ಅವನು ಬೇಗನೆ ತೇಜಿಯನ್ನು ಏರಿ, ಕುದುರೆಯನ್ನು ಅಪ್ಪಳಿಸಿ ಹುರಿದುಂಬಿಸಿದನು. ಆದರೆ ಇಷ್ಟರಲ್ಲಿಯೇ ಜಯಸ್ವಾತಿಯೂ ಅವನ ಹಿಂದೆ ಶೂದ್ರಕನೂ ಮುಂದಾಗಿ ಹೋದರು. ಅರೆ ಸುತ್ತು ಬರುವ ವೇಳೆಗೆ ಶೂದ್ರಕನು ಯುವರಾಜನಿಗಿಂತಲೂ ಸುಮಾರು ಐವತ್ತು ಮಾರು ದೂರದಲ್ಲಿದ್ದನು. ಆದರೆ ಶೂದ್ರಕನು ಮೊದಲಿನಿಂದಲೂ ಕುದುರೆಯನ್ನು ಹೊಡೆಯದೆ ಒಂದೇ ನಡಿಗೆಯಿಂದ ನಡೆಯಿಸುತ್ತಿದ್ದ ಕಾರಣ ಅವನ ಕುದುರೆಯು ದಣಿದಿರಲಿಲ್ಲ. ಈ ಕಾರಣದಿಂದ ಸಮಯಜ್ಞನಾದ ಶೂದ್ರಕನು ಕುದುರೆಯ ದವಡೆಯ ಮೇಲೆ ಚಾವಟಿಯಿಂದ ಮೆಲ್ಲನೆ ಸೋಕಿಸಲಾಗಿ ಆ ಪೆಟ್ಟನ್ನು ಕೂಡ ಸಹಿಸಲಾರದ ಆ ದಿವ್ಯಾಶ್ವವು ವೀರಾವೇಶದಿಂದ ಓಡತೊಡಗಿ ಯುವರಾಜನನ್ನು ಬಹಳ ಹಿಂದೆ ಮಾಡಿ ಕ್ಲುಪ್ತಸ್ಥಾನದಲ್ಲಿ ಮೊತ್ತಮೊದಲನೆಯದಾಗಿ ಬಂದು ನಿಂತಿತು. ಆ ಕಾಲಕ್ಕೆ ಜಯಸ್ವಾತಿಯು ಸುಮಾರು ಅರುವತ್ತು ಮಾರು ಹಿಂದೆ ಬಿದ್ದನು.

ಅವನ ಹಿಂದೆ ಬಂಧುದತ್ತನು ಬಂದನು. ಬಳಿಕ ಸಂಘಿಲಕನೂ ವಿಶ್ವಲ ಕನೂ ಏಕಕಾಲದಲ್ಲಿಯೇ ಬಂದು ಸೇರಿದರು. ಶೂದ್ರಕನು ಮೊದಲ ನೆಯವನಾದ ಕೂಡಲೇ ಜನರೆಲ್ಲರೂ ಚಪ್ಪಾಳೆಗಳಿಂದಲೂ ಜಯಧ್ವನಿ ಗಳಿಂದಲೂ ಆನಂದವನ್ನು ಹೊರಪಡಿಸಿದರು, ಶೂದ್ರಕನ ಕೌಶಲವನ್ನು ಬಗೆಬಗೆಯಿಂದ ಕೊಂಡಾಡಿದರು. ಅಲ್ಲಿ ಕೆಲವರು "ಇಷ್ಟಲ್ಲವೇ ಜೀವ ಯಾತ್ರೆಯೆಂಬುದು, ಮೊದಲಿನಿಂದಲೂ ಒಂದೇ ಸಮನಾಗಿ ನಡೆಯಿಸಿದ ಕಾರಣ ಸಮಯದಲ್ಲಿ ಶೂದ್ರಕನ ಕುದುರೆಯು ಪಂತವನ್ನು ಗೆಲ್ಲಲು ಸಾಧ್ಯವಾಯಿತು. ಚಂಡಸಿಂಹನಂತೆ ಆರಂಭಶೌರ್ಯವನ್ನು ತೋರಿ ವೇಗ ವಾಗಿ ಓಡಿಸಿದರೇನಾದೀತು! ಇವನು ಇನ್ನೂ ಎಳೆ ಪ್ರಾಯದವ ನಾಗಿದ್ದರೂ ಲೋಕಾನುಭವಜ್ಞನಾದ ದೊಡ್ಡ ತರುಣನಂತೆ ವಿವೇಕಶಾಲಿ ಯಾಗಿರುವುದೇ ಇವನ ವಿಜಯಕ್ಕೆ ಮೂಲಕಾರಣವಲ್ಲವೇ? ಕೆಲವರು ಬಾಲ್ಯದಲ್ಲಿ ಹೆಡ್ಡರಂತಿದ್ದರೂ ವಯಸ್ಸು ಬಂದ ಹಾಗೆಲ್ಲ ಲೋಕೋತ್ತರವಾದ ಪ್ರಖ್ಯಾತಿಯನ್ನು ಪಡೆಯುವರು" ಎಂದು ಮುಂತಾಗಿ ಮಾತನಾಡಿಕೊಳ್ಳು ತ್ತಿದ್ದರು. ಕಲವರು ಸಂಘಿಲಕನ ವಿಷಯವಾಗಿ ಮರುಕಗೊಂಡರು. ಮತ್ತೆ ಹಲಬರು ಚಂಡಸಿಂಹನು ಸ್ಥೂಲಕಾಯನಾಗಿರುವ ಕಾರಣ ಇಂತಹ ಪಂತಗಳಲ್ಲಿ ತಾನು ತಲೆಹಾಕಬಾರದಿತ್ತು ಎಂದರು. ಇತರರು ಅವನ ದುರು ದುಂಬಿತನಕ್ಕೆ ತಕ್ಕ ಪ್ರಾಯಶ್ಚಿತ್ತವಾಯಿತೆಂದರು.

ಶೂದ್ರಕನ ಸೊಲ್ಲನ್ನೇ ಒಲ್ಲದಿದ್ದ ಚಂಡಸಿಂಹನೂ ಸಂಘಿಲಕನೂ ಹೇಗಾದರೂ ಮಾಡಿ ಅಂದಿನ ಪಂತದಲ್ಲಿ ಶೂದ್ರಕನನ್ನು ಹಿಮ್ಮೆಟ್ಟಿಸಬೇಕೆಂದು ಬಗೆದು, ಮುಂಬರಿದುದಕ್ಕೆ ಫಲವಾಗಿ ಹೆರರ ಕಣ್ಣನ್ನು ಚುಚ್ಚಹೋಗಿ ತಮ್ಮ ಕಣ್ಣುಗಳನ್ನೇ ಕೀಳಿಸಿಕೊಂಡಂತಾದರು. ಮುರಿದೆಲವುಗಳ ಒಡಲಿನ ನೋವಿನೊಂದಿಗೆ ಹೇಗೋ ಮನೆಗೆ ಬಂದು ಶೂದ್ರಕನ ಸಾಮರ್ಥ್ಯಕ್ಕೆ ಮೆಚ್ಚುವ ಬದಲಾಗಿ ಅಸೂಯಾಪರರಾಗಿ, ಹೇಗಾದರೂ ಶೂದ್ರಕನನ್ನು ಕೊನೆಗಾಣಿಸಬೇಕೆಂದು ಹಾರೈಸುತ್ತಿದ್ದರು. ಕಾಲಕ್ರಮವಾಗಿ ದ್ವೇಷಾಂಕು ರವು ಚಿಗಿತು ಸಸಿಯಾಗಿ ಮರವಾಯಿತು. ಈ ದ್ವೇಷವು ವೈರವಾಗಿಯೂ ವೈರವು ಮಾರಣಪ್ರಯತ್ನವಾಗಿಯೂ ಮಾರ್ಪಟ್ಟುವು. ಕಟ್ಟಕಡೆಗೆ ಹೇಗಾದರೂ ಶೂದ್ರಕನನ್ನು ಕೊಲೆಮಾಡಿದಲ್ಲದೆ ತಮ್ಮ ಕೀರ್ತಿಯು ಲೋಕದಲ್ಲಿ ಹರಡಲಾರದೆಂತಲೂ ಅದುವರೆಗೂ ಮನಸ್ಸಿಗೆ ಶಾಂತಿಯಾಗ

ಲಾರದೆಂತಲೂ ಬಗೆದು, ಬಲಶಾಲಿಯಾದ ಅವನನ್ನು ದ್ವಂದ್ವಯುದ್ಧ ಮೊದಲಾದ ಋಜುಮಾರ್ಗದಲ್ಲಿ ಸೋಲಿಸಲು ಸಾಧ್ಯವಲ್ಲದ ಕಾರಣ, ಸ್ನೇಹಿತರಂತೆಯೇ ವರ್ತಿಸುತ್ತ ಕಪಟೋಪಾಯದಿಂದ ಯಾವುದಾದ ರೊಂದು ಮಡುವಿನಲ್ಲಿ ತಳ್ಳಿಯಾಗಲಿ, ಪರ್ವತದ ತುದಿಯಿಂದ ಬೀಳಿಸಿ ಯಾಗಲಿ, ಬೆಂಕಿಯಲ್ಲಿ ಕಟ್ಟಿ ಬಿಸುಟಾಗಲಿ, ವಿಷವನ್ನು ಊಡಿಸಿಯಾಗಲಿ, ಕಾಳೋರಗನಿಂದ ಕಚ್ಚಿಸಿಯಾಗಲಿ, ಕೊನೆಗಾಣಿಸಬೇಕೆಂದು ನಿಶ್ಚಯಿಸಿ ಕೊಂಡರು.

ಪಂದ್ಯವು ಮುಗಿದ ಬಳಿಕ ಎಲ್ಲರೂ ತಮ್ಮ ತಮ್ಮ ನಿವಾಸಗಳನ್ನು ಸೇರಿದರೆಂಬುದಾಗಿ ಮೇಲೆಯೇ ಹೇಳಿರುವೆನು. ಆದರೆ ವಿನಯವತಿಯೂ ಅನಂಗಲೇಖೆಯೂ ಬಹಳ ಕಾಲದ ವರೆಗೆ ಅಂತಃಪುರದ ಉಪ್ಪರಿಗೆಯಿಂದ ಹೊರಡಲಿಲ್ಲ. ಹೋರಾಟದಲ್ಲಿ ಪರಾಜಿತರಾದವರ ತಿಳಿಗೇಡಿತನವನ್ನು ಬಣ್ಣಿಸಿ ಪರಿಹಾಸದಿಂದ ಗಟ್ಟಿಯಾಗಿ ನಗುತ್ತ, ಶೂದ್ರಕನ ಉದಾತ ಗಮನವನ್ನೂ, ಸಂಘಿಲಕನ ಆರಂಭಶೂರತ್ವವನ್ನೂ, ಚಂಡಸಿಂಹನ ಬೀಳು ವಿಕೆಯನ್ನೂ, ಬಂಧುದತ್ತನ ಹೆಡ್ಡತನವನ್ನೂ ನೆನೆನೆನೆದು ಕಡೆಗೆ ಶೂದ್ರಕನ ಧೈರ್ಯ ಸಾಹಸಗಳನ್ನು ವರ್ಣಿಸತೊಡಗಿದರು. ಸ್ವಲ್ಪ ಹೊತ್ತಿನಲ್ಲಿಯೇ ಅನಂಗಲೇಖೆಯೂ ವಿನಯವತಿಯೂ ತಮ್ಮ ಸಲ್ಲಾಪಗಳನ್ನು ಅಕಸ್ಮಾ ತ್ತಾಗಿ ಮುಗಿಸಿದರು. ಶೂದ್ರಕನನ್ನು ವಿಶೇಷವಾಗಿ ಬಣ್ಣಿಸಿದಲ್ಲಿ ತಮ್ಮ ಅನುರಾಗಾಂಕುರವು ಎಲ್ಲಿ ಹೊರ ಬೀಳುವುದೋ ಎಂಬ ಭಾವನೆಯೇ ಅವರ ಸಂಭಾಷಣೆಯ ವಿರಾಮಕ್ಕೆ ಮುಖ್ಯ ಕಾರಣವಾಯಿತು. ಹೀಗೆಯೇ ಅವ ರಿಬ್ಬರೂ ಕ್ಷಣಕಾಲ ಮೌನ ಮುದ್ರೆಯನ್ನು ತಳೆದಿದ್ದು, ಅಲ್ಲಿಂದ ಹೊರಟು ತಮ್ಮ ಅಂತಃಪುರವನ್ನು ಸೇರಿ, ಶೂದ್ರಕನ ಪ್ರತಿಬಿಂಬವನ್ನು ತಮ್ಮ ಅಂತ ರಂಗದಲ್ಲಿ ನೆಲೆಗೊಳಿಸಿ, ಆಹಾರಾದಿಗಳನ್ನು ಬಿಟ್ಟು ಕಂಟಕಿತ ಗಾತ್ರಿಯ ರಾಗಿ, ಸಂಕಲ್ಪಸಮುದ್ರದ ತರಂಗಪರಂಪರೆಗಳಲ್ಲಿ ಮುಳುಗಿ ತೇಲುತ್ತಿದ್ದರು.

ಹೀಗೆಯೇ ಕೆಲವು ದಿನಗಳು ಕಳೆದುವು. ಒಂದು ದಿನ ಮಧ್ಯಾ ಹ್ನಾನಂತರ ಅನಂಗಲೇಖೆಯು ವಿನಯವತಿಯ ಅಂತಃಪುರಕ್ಕೆ ಬಂದಳು. ಆಗ ವಿನಯವತಿಯು ಚಿತ್ರ ಬರೆಯುವುದರಲ್ಲಿ ಮಗ್ನಳಾಗಿದ್ದುದರಿಂದ ಅನಂಗಲೇಖೆಯು ಬಂದುದನ್ನು ಅವಳು ಗಮನಿಸಲೇ ಇಲ್ಲ. ಸ್ವಲ್ಪ

ಹೊತ್ತಿನ ಬಳಿಕ, ಅನಂಗಲೇಖೆಯನ್ನು ಕಂಡ ವಿನಯವತಿಯು ರಾಜ ಮರ್ಯಾದೆಯನ್ನು ಮೀರಿ, ಮುಂದಾಗಿ ತನ್ನ ಬರುವಿಕೆಯನ್ನು ತಿಳಿಸದೆಯೇ ಈ ರೀತಿ ಅಕಸ್ಮಾತ್ತಾಗಿ ಬಂದುದನ್ನು ಕುರಿತು ಮನಸ್ಸಿನಲ್ಲಿ ಕಳವಳಗೊಂಡು, ಒಡನೆಯೇ ಚಿತ್ರದ ಹಲಗೆಯನ್ನು ಬೈತಿಟ್ಟು, ತಮ್ಮ ಅತ್ತಿಗೆಯೊಂದಿಗೆ ಸರಸಸಲ್ಲಾಪಗಳಿಗೆ ಮೊದಲು ಮಾಡಿ ವಿಶ್ರಮಿಸಿಕೊಳ್ಳುವಂತೆ ಹೇಳಿ ಒಂದು ಆಸನವನ್ನು ತೋರಿದಳು. ಬಳಿಕ ಇಬ್ಬರೂ ಪೀಠಗಳನ್ನಲಂಕರಿಸಿ ಸಹೃದಯಭಾವವನ್ನು ನಟಿಸುತ್ತ, ಕ್ರಮವಾಗಿ ಹಿಂದೆ ನಡೆದ ಕುದುರೆಯ ಜೂಜಿನ ಸುದ್ದಿಯನ್ನು ಕುರಿತು ಮಾತನಾಡ ತೊಡಗಿದರು. ಸ್ವಲ್ಪ ಹೊತ್ತಿನ ಮೇಲೆ ಮಧುಸೇನೆಯೆಂಬ ಚೇಟಿಯು ಅಲ್ಲಿಗೆ ಬಂದು, ಹಿಂದಣ ದಿನ ಹುಟ್ಟಿದ ಜಿಂಕೆಯ ಮರಿಯು ಈಗಾಗಲೇ ಅಲ್ಲಿಂದಿಲ್ಲಿಗೆ ಕುಣಿಯುತ್ತ ಓಡುತ್ತಿರುವುದೆಂಬುದಾಗಿ ತಿಳಿಸಿದಳು. ಕೂಡಲೇ ಅತ್ತಿಗೆಯೂ ನಾದಿನಿಯೂ ಹೊರ ಬಂದು, ಕೈಸಾಲೆಯಲ್ಲಿ ನಿಂತು, ಹುಟ್ಟಿದ ಮರುದಿನವೇ ಹುಲ್ಲೆಯ ಕರುವು ಹಾರಾಡುವುದನ್ನು ಕಂಡು ಆಶ್ಚರ್ಯಪಟ್ಟರು. ಅನಂಗಲೇಖೆಯು ತಟ್ಟನೆ ಹಿಂದಿರುಗಿ "ಅಯ್ಯೋ! ನನ್ನ ಅಂಗುಳೀಯಕವು ಎಲ್ಲಿಯೋ ಬಿದ್ದು ಹೋಯಿತಲ್ಲಾ! ಇನ್ನೇನು ಗತಿ?" ಎಂಬುದಾಗಿ ಹಂಬಲಿಸುತ್ತ, ವಿನಯವತಿಯ ಭವನವನ್ನು ಹೊಕ್ಕು ತನ್ನ ಅಂಗುಳೀಯಕವನ್ನು ಅಲ್ಲಿಯೇ ನೆಲದ ಮೇಲೆ ಬಿಸುಟು. ತನ್ನ ನಾದಿನಿಯು ಬೈತಿಟ್ಟ ಚಿತ್ರದ ಹಲಗೆಯನ್ನು ತೆಗೆದು ನೋಡಿ, ಅಲ್ಲಿಯೇ ಇರಿಸಿ, "ಹಾ! ದೇವರೇ!" ಎಂಬುದಾಗಿ ಮೊರೆಯಿಟ್ಟು ಮಂಚದ ಮೇಲೆ ಬಿದ್ದಳು. ಈ ಶಬ್ದವನ್ನು ಕೇಳಿ ವಿನಯವತಿಯು ಒಳಹೊಕ್ಕು, ನೆಲದ ಮೇಲೆ ಬಿದ್ದಿದ್ದ ಅಂಗುಳೀಯಕವನ್ನು ಬೆರಳಿಗೆ ತೊಡಿಸಿ, ಮೈಮೇಲೆ ಸ್ಮರಣೆಯಿಲ್ಲದೆ ಬಿದ್ದಿದ್ದ ತನ್ನ ಅತ್ತಿಗೆಯನ್ನು ನೋಡಿ, ಈ ದುರವಸ್ಥೆಗೆ ಕಾರಣವೇನೆಂಬುದಾಗಿ ಪ್ರಶ್ನೆ ಮಾಡಿದಳು "ಅಯ್ಯೋ! ನಾನೇನೆಂದು ಹೇಳಲಿ! ಈ ಉಂಗುರವನ್ನು ನಿನ್ನ ಅಣ್ಣಂದಿರು ಪಾಣಿಗ್ರಹಣ ಕಾಲದಲ್ಲಿ ತಮ್ಮ ಪ್ರೇಮಸರ್ವಸ್ವವೆಂಬುದಾಗಿ ಹೇಳಿ ನನ್ನ ಬೆರಳಿನಲ್ಲಿ ತೊಡಿಸಿದ್ದರು. ಇದು ಎಲ್ಲಿಯಾದರೂ ಕೈಜಾರಿ ಬಿದ್ದಿತೆಂದರೆ ನನ್ನ ಸಕಲ ಸೌಭಾಗ್ಯವು ಕೊನೆಗಾಣುವುದೆಂಬ ಹೆದರಿಕೆಯು ಯಾವಾಗಲೂ ನನ್ನ ಮನಸ್ಸಿನಲ್ಲಿ ದೃಢವಾಗಿರುವ ಕಾರಣ, ಈಗ ಈ

ಉಂಗುರವು ಕಾಣದಿದ್ದುದರಿಂದ ಈ ರೀತಿಯಾಯಿತು" ಎಂಬುದಾಗಿ ಅನಂಗಲೇಖೆಯು ಹೇಳಿದಳು.

ಈ ಮಾತನ್ನು ಕೇಳಿದ ವಿನಯವತಿಯು "ಅರಸಿಯು ಅರಮನೆಯಲ್ಲಿಯೇ ತನ್ನ ಪ್ರಾಣಾಭರಣವನ್ನು ನೀಗಿಕೊಂಡಳೆಂದರೆ ಇನ್ನು ಈ ಅರಸುತನವೇತಕ್ಕೆ? ಇನ್ನು ಪ್ರಜೆಗಳು ತಮ್ಮ ಪ್ರಾಣವನ್ನೂ ಧನವನ್ನೂ ಕಾಪಾಡಿಕೊಳ್ಳುವ ಬಗೆಯಾದರೂ ಹೇಗೆ ? " ಎಂದಳು

ಆಗ ಅನಂಗಲೇಖೆಯು "ನೀನು ಹೇಳಿದುದು ದಿಟ ಆದರೆ ಮನಸ್ಸು ಮಹಾಚಪಲಸ್ವಭಾವವುಳ್ಳದು ನಮ್ಮ ಕಷ್ಟವು ಎಷ್ಟೇ ಅಲ್ಪವಾಗಿದ್ದರೂ ಇತರರ ಎಷ್ಟೋ ಮಹತ್ತರವಾದ ಕಷ್ಟಕ್ಕಿಂತ ಅದು ಸಾವಿರಪಾಲು ದೊಡ್ಡದಾಗಿ ಕಾಣುವುದು. ಇದು ಲೋಕಸ್ವಭಾವ" ಎಂಬುದಾಗಿ ಹೇಳಿ, ನಾದಿನಿಯನ್ನು ಬೀಳ್ಕೊಂಡು ಮೆಲ್ಲನೆ ಎದ್ದು, ತನ್ನ ಅಂತಃಪುರವನ್ನು ಸೇರಿದಳು.

ನಾಲ್ಕೈದು ದಿನಗಳು ಕಳೆದ ಬಳಿಕ ಅತ್ತಿಗೆ ನಾದಿನಿಯರಿಬ್ಬರೂ ತಮ್ಮ ಗೆಳತಿಯರೊಂದಿಗೆ ರಾಜೋದ್ಯಾನದಲ್ಲಿ ವಿಹರಿಸುತ್ತಿದ್ದರು ಆ ಪಟ್ಟಣದಲ್ಲಿ ಪ್ರಮದವನ, ಬಾಹ್ಯೋದ್ಯಾನ, ರಾಜೋದ್ಯಾನ ಮುಂತಾಗಿ ವಿಹಾರಯೋಗ್ಯವಾದ ಉಪವನಗಳು ಅನೇಕವಾಗಿದ್ದುವು ರಾಜೋದ್ಯಾನದಲ್ಲಿ ಸ್ತ್ರೀಯರಿಗೂ ಪುರುಷರಿಗೂ ಪ್ರತ್ಯೇಕವಾದ ವಿಹಾರಸ್ಥಾನಗಳಿದ್ದುವು ಇವೆರಡರಲ್ಲಿಯೂ ಕ್ರೀಡಾ ಸರೋವರಗಳೂ, ಪದ್ಮಸರಸ್ಸುಗಳೂ, ಪುಷ್ಪವಾಟಿಕೆಗಳೂ, ವಿಶಾಲವಾದ ಉಪ್ಪರಿಗೆಗಳೂ ಏಕಾಂತವಾದ ಶಿಲಾವೇದಿಕೆಗಳೂ, ಜೂಜು ಮೊದಲಾದುವುಗಳಿಗೆ ಉಚಿತವಾದ ಪ್ರದೇಶಗಳೂ, ಏಕಾಂತವಿಹಾರಯೋಗ್ಯವಾದ ಬಳ್ಳಿವನೆಗಳೂ, ಉಯ್ಯಾಲೆಗಳೂ, ಶಿಲ್ಪಿಶಿಲ್ಪ ಚಾತುರ್ಯವನ್ನು ಹೊರಪಡಿಸುವ ತಲ್ಪಗಳೂ, ಪ್ರತ್ಯೇಕವಾಗಿ ಇದ್ದುವು. ಆದರೆ ಮೊದಲ ಬಾರಿ ಎರಡನ್ನೂ ನೋಡಿದವರಿಗ ಯಾವ ಭೇದವೂ ತೋರುತ್ತಿರಲಿಲ್ಲ ಇಂತು ಅನಂಗಲೇಖೆಯೂ ವಿನಯವತಿಯೂ ಪ್ರಮದೋದ್ಯಾನದಲ್ಲಿ ಹೂಗಳನ್ನು ಬಿಡಿಸುತ್ತ, ಒತ್ತಾಗಿ ಒಂದೇ ಎತ್ತರಕ್ಕೆ ಬೆಳೆದಿದ್ದ ಹುಲ್ಲುಬಯಲಿನಲ್ಲಿ ಕುಳಿತು ಶುಕಪಿಕಶಾರಿಕಾದಿಗಳ ಇಂಚರವನ್ನು ಆಲಿಸುತ್ತ, ಅವುಗಳ ಸ್ವಚ್ಛಂದವರ್ತನವನ್ನು ಕಂಡು ಆನಂದಿಸುತ್ತ, ಕ್ರಮವಾಗಿ ನಡೆತಂದು ಚಿತ್ರಾಸನಾಲಂಕೃತವಾದ ಒಂದು ಪುಷ್ಪವಾಟಿಕೆಯ

ನಡುವೆ ಇದಿರುಬದಿರಾಗಿರುವ ಇಂದ್ರ ನೀಲಮಣಿಯ ಹಾಸುಗಲ್ಲಿನ ಮೇಲೆ ಕುಳಿತುಕೊಂಡರು. ಬಳಿಕ ಅನಂಗಲೇಖೆಯು ನಾದಿನಿಯೊಂದಿಗೆ ಹಾಸ್ಯಾಲಾಪಗಳಿಗೆ ಮೊದಲಿಟ್ಟಳು ಹೀಗೆ ಸ್ವಲ್ಪ ಹೊತ್ತು ಕಳೆದು ಹೋಯಿತು. ಬಳಿಕ ಅವರಿಬ್ಬರೂ ಒಂದು ಮಾಲತೀನಿಕುಂಜವನ್ನು ಹೊಕ್ಕು ಒಂದೇ ಆಸನದ ಮೇಲೆ ಕುಳಿತರು ಅನಂಗಲೇಖೆಯ ಅಪ್ಪಣೆಯ ಮೇರೆಗೆ ಮಧುಸೇನೆಯು ಬೆತ್ತದ ಬುಟ್ಟಿಯಲ್ಲಿ ಮಲ್ಲಿಗೆ, ಮಾಲತಿ, ಇರುವಂತಿಗೆ, ಗುಲಾಬಿಯ ಬಿರಿಮೊಗ್ಗೆಗಳನ್ನು ತಂದು ರಾಣಿಯ ಮುಂದೆ ಇಟ್ಟಳು ತರುವಾಯ ರಾಣಿಯು ತನ್ನ ನಾದಿನಿಯನ್ನು ಕರೆದು, "ವಿನಯವತೀ! ನೀನು ಇವುಗಳಲ್ಲಿ ಕೆಲವು ಹೂಗಳನ್ನು ಮುಡಿದುಕೊ. ನಾನೂ ನನ್ನ ಚೇಟಿಯರೂ ಮಿಕ್ಕವುಗಳನ್ನು ಮುಡಿದುಕೊಳ್ಳುವೆವು" ಎಂದಳು. ವಿನಯವತಿಯು ಹೂಬುಟ್ಟಿಯೊಳಗೆ ಕೈಹಾಕಿ ಹೂಗಳನ್ನು ತೆಗೆದುಕೊಳ್ಳುತ್ತಿದ್ದಂತೆಯೇ "ಅಯ್ಯೋ!" ಎಂಬುದಾಗಿ ಅರಚುತ್ತ ನೆಲದ ಮೇಲೆ ಬಿದ್ದು ಮೂರ್ಛೆ ಹೋದಳು ಹೂಬುಟ್ಟಿಯಿಂದ ಚಿಕ್ಕ ಕರಿಯ ನಾಗರಹಾವು ಕೆಳಕ್ಕೆ ಇಳಿದು ಬರುತ್ತಿದ್ದಿತು ಅಷ್ಟರಲ್ಲಿ ವಿನಯವತಿಯ ಸಖಿಯಾದ ಮಾಧವಿಯು ಒಂದು ಕಲ್ಲನ್ನು ತಂದು ಆ ನಾಗನ ಹೆಡೆಯ ಮೇಲೆ ಹಾಕಿ ಅದನ್ನು ಕೊಂದಳು. ವಿನಯವತಿಯು ಎಚ್ಚತ್ತು ಕುಳಿತುಕೊಂಡರೆ ವಿಷವು ಬೇಗನೆ ರಕ್ತನಾಡಿಗಳಲ್ಲಿ ಹರಡಿಕೊಳ್ಳಲಾರದೆಂದು ಮಾಧವಿಯು ಹೇಳಿದಳು. ಅವಳು ಮೇಲಕ್ಕೆ ಏಳದಿರುವುದೇ ಒಳ್ಳೆಯದೆಂಬುದಾಗಿ ಅನಂಗಲೇಖೆಯು ಹೇಳಿ, ವಿನಯವತಿಯನ್ನು ಅಲುಗದಂತೆ ಇದ್ದಲ್ಲಿಯೇ ಇರಬೇಕೆಂದಳು. ಮಂತ್ರವಾದಿಯನ್ನು ಕರೆತರಲು ಯಾರನ್ನಾದರೂ ಕಳುಹಬೇಕೆಂಬುದಾಗಿ ಮಾಧವಿಯು ಎಷ್ಟು ಹೇಳಿದರೂ ಅನಂಗಲೇಖೆಯು ಕಿವಿಯ ಮೇಲೆ ಹಾಕಿಕೊಳ್ಳದಿರುವುದನ್ನು ಕಂಡು, ಮಾಧವಿಯೇ ಪಕ್ಕದಲ್ಲಿದ್ದ ಪುರುಷೋದ್ಯಾನಕ್ಕೆ ವಾಯುವೇಗದಿಂದ ಓಡಿಹೋಗಿ, ದ್ಯೂತಾಸಕ್ತನಾಗಿದ್ದ ಜಯಸ್ವಾತಿಯ ಸನ್ನಿಧಾನದಲ್ಲಿ ವಿನಯವತಿಯ ಅವಸ್ಥೆಯನ್ನು ಅರಿಕೆ ಮಾಡಿದಳು. ಎಂದಿಗೂ ಮನೆಯನ್ನು ಬಿಟ್ಟು ಹೊರಹೋಗದ ಅರಸನು ಈ ವೇಳೆಯಲ್ಲಿ ಬೇಟೆಗೆ ಹೋಗಿದ್ದನು. ಶೂದ್ರಕನೂ, ಜಯಸ್ವಾತಿಯೂ, ಸಂಘಿಲಕನೂ, ಚಂಡಸಿಂಹನೂ, ಈ ನಾಲ್ವರು ಮಾತ್ರವೇ ಅಲ್ಲಿ ಪಗಡೆಯಾಡುತ್ತಿದ್ದರು. ಆಟದಲ್ಲಿ ಉತ್ಸಾಹವು ಮಿತಿಮೀರಿ ಜಯಾಪಜಯಗಳು

ಕೇವಲ ಸನ್ನಿಹಿತಗಳಾಗಿದ್ದುದರಿಂದ ಶೂದ್ರಕನು ಎವೆಯಿಕ್ಕದೆ ಉಸಿರಾಡದೆ ನೋಡುತ್ತ, ದಾಳಗಳನ್ನು ನೆಲದ ಮೇಲೆ ಎಸೆಯುತ್ತಿದ್ದನು. ಅಷ್ಟರಲ್ಲಿ ಮಾಧವಿಯು ವಿನಯವತಿಯ ವೃತ್ತಾಂತವನ್ನು ಬಿನ್ನಯಿಸಿದಳು. ಶಕಾರನು ಈ ಸಮಾಚಾರವನ್ನು ಕೇಳಿದೊಡನೆಯೇ "ಹಾ! ಪ್ರೇಯಸೀ!" ಎನ್ನುತ್ತ ಮೂರ್ಛೆಬಿದ್ದನು. "ಹಾ! ಸೋದರೀ! ನಿನ್ನನ್ನೂ ಕಳೆದುಕೊಂಡೆನಾದರೆ ನಾನು ಈ ಲೋಕದಲ್ಲಿ ಬದುಕುವುದೆಂತು?" ಎಂಬುದಾಗಿ ಯುವರಾಜನು ಹುಚ್ಚನಂತಾದನು ಶೂದ್ರಕನು ಸಂಘಿಲಕನನ್ನು ಕುರಿತು "ಆಟವನ್ನು ಕೆದರಬೇಡ. ಇದ್ದಂತೆಯೇ ಇರಲಿ. ನಾನೀಗಲೇ ಬರುವೆನು" ಎಂದು ಹೇಳಿ ಯುವರಾಜನೊಡನೆ ಬೇಗನೆ ಪ್ರಮದೋದ್ಯಾನದಲ್ಲಿ ವಿನಯವತಿಯ ಬಳಿಗೆ ಬಂದು ಸೇರಿದನು ಜಯಸ್ವಾತಿಯು ವಿಷವೈದ್ಯರನ್ನು ಕರೆತರುವಂತೆ ಆಜ್ಞಾಪಿಸುತ್ತಿದ್ದನು ಶೂದ್ರಕನು ಬಳಿಸಾರ್ದು ವಿನಯವತಿಯ ಮೂಗಿನ ಹತ್ತಿರ ತನ್ನ ಬೆರಳನ್ನಿಟ್ಟು ಪರೀಕ್ಷಿಸುವಲ್ಲಿ ಉಸಿರಾಡುತ್ತಿದ್ದುದನ್ನು ಕಂಡು, ಬೇಗನೆ ನಾಡಿಯನ್ನು ಪರೀಕ್ಷಿಸಿ ಬಹಳ ವೇಗವಾಗಿರುವುದನ್ನು ಅರಿತು, ಪ್ರಾಣವಿರುವುದೆಂಬುದಾಗಿ ನಿಶ್ಚಯಿಸಿ, ತನ್ನ ಬೆರಳಿನಲ್ಲಿದ್ದ ಉಂಗುರವನ್ನು ತೆಗೆದು, ಅನಂಗಲೇಖೆಯ ಮೂಲಕ ಹಾವು ಕಚ್ಚಿದ ಸ್ಥಳವನ್ನು ಗುರುತಿಸಿ, ಉಂಗುರದಲ್ಲಿದ್ದ ಮಣಿಯನ್ನು ಗಾಯಕ್ಕೆ ಸರಿಯಾಗಿ ಹಿಡಿದನು. ಸ್ವಲ್ಪ ಹೊತ್ತಿನ ಮೇಲೆ ವಿನಯವತಿಯ ಶರೀರದಿಂದ ಬೆವರು ಪ್ರವಾಹ ರೂಪವಾಗಿ ಹರಿಯ ತೊಡಗಿತು. ಅವಳು ಮೆಲ್ಲನೆ ಬೇರೊಂದು ಪಕ್ಕಕ್ಕೆ ಹೊರಳಿದಳು; ಇನ್ನೂ ಪ್ರಜ್ಞೆ ಮಾತ್ರ ಬಂದಿರಲಿಲ್ಲ. ಶೂದ್ರಕನು ಮಣಿಯನ್ನು ಇನ್ನೂ ಒತ್ತಿಟ್ಟಿದ್ದನು. ಕೆಲವು ನಿಮಿಷಗಳ ಬಳಿಕ ವಿನಯವತಿಯು ಕಣ್ದೆರೆದು ನಿಟ್ಟುಸಿರುಬಿಟ್ಟಳು. ಶೂದ್ರಕನು ಮರಳಿ ನಾಡಿಯನ್ನು ಪರೀಕ್ಷಿಸಿ, ಪ್ರಾಣಭಯವಿಲ್ಲವೆಂಬುದಾಗಿ ತಿಳಿದು, ಆ ಉಂಗುರವನ್ನು ಹಾವು ಕಚ್ಚಿದ ಬೆರಳಿನಲ್ಲಿ ತೊಡಿಸಿದನು.

ಬಳಿಕ ಅನಂಗಲೇಖೆಯೂ ಜಯಸ್ವಾತಿಯೂ ಮರವಿದ್ದಲ್ಲಿ ಹೋದರು. ಅಲ್ಲಿ ಶೂದ್ರಕನು ಅನಂಗಲೇಖೆಯನ್ನು ಕುರಿತು "ಹಾವು ಎಲ್ಲಿಂದ ಬಂದಿತು?" ಎಂಬುದಾಗಿ ಕೇಳಿದನು. ಅನಂಗಲೇಖೆಯು "ನಾನೊಂದನ್ನೂ ಅರಿಯೆನು. ಹಾವನ್ನು ನಾನು ತರಲೂ ಇಲ್ಲ, ತರಿಸಲೂ ಇಲ್ಲ. ಮಧುಸೇನೆಯು ಹೂಬುಟ್ಟಿಯಲ್ಲಿ ಹೂಗಳನ್ನು ಕೊಯ್ದು ತಂದು ನಮಗೆ ಇತ್ತಳು.

ವಿನಯವತಿಯು ಮುಡಿದುಕೊಳ್ಳುವ ಸಲುವಾಗಿ ಹೂಗಳನ್ನು ತೆಗೆಯಲು ಬುಟ್ಟಿಯೊಳಗೆ ಕೈಹಾಕಿದಳು. ಅದರಲ್ಲಿ ಹಾವು ಇದ್ದಿತೊ ಏನೊ ಗೊತ್ತಾಗಲಿಲ್ಲ. ಅದು ಇವಳನ್ನು ಕಚ್ಚಿರಬಹುದು. ಕರಿಯ ಎಳ ನಾಗವಾಗಿದ್ದರೆ ವಿನಯವತಿಯು ಬದುಕುತ್ತಲಿರಲಿಲ್ಲ. ನಮ್ಮ ಅದೃಷ್ಟವು ಒಳ್ಳೆಯದು" ಎಂದು ಕಂಬನಿಗರೆದಳು.

ಜಯಸ್ವಾತಿಯು ಹತವಾದ ಸರ್ಪವನ್ನು ನಿಂತು ನೋಡುತ್ತಿದ್ದಾಗ ಶೂದ್ರಕನು ಅಲ್ಲಿಗೆ ಬಂದು "ಅಬ್ಬಬ್ಬಾ, ಇದೆಲ್ಲಿಯ ಹಾವು? ಇದು ಸಾಮಾನ್ಯವಾದುದಲ್ಲ! ಇದು ಈ ದೇಶದಲ್ಲಿ ದೊರೆಯುವುದಿಲ್ಲ! ಇದು ಕಚ್ಚಿತೆಂದರೆ ಯಾವ ವಿಷವೈದ್ಯನಿಂದಲೂ ಬದುಕಿಸಲಳವಲ್ಲ ದೈವಯೋಗದಿಂದ ಈ ಗರುಡಪಚ್ಚೆಯಿಂದಲೇ ಈ ಹುಡುಗಿಯು ಬದುಕಿದಳೆಂಬುದರಲ್ಲಿ ಸಂದೇಹವಿಲ್ಲ" ಎಂದನು

ಅದಕ್ಕೆ ಅನಂಗಲೇಖೆಯು ಶೂದ್ರಕನ ಬಳಿಸಾರ್ದು, "ತಮ್ಮ ಅಂಗುಳೀಯಕದಲ್ಲಿರುವ ಮಣಿಯ ಹೆಸರೇನು?" ಎಂದಳು.

ಶೂದ್ರಕನು "ಇದು ಗರುಡಮಣಿ. ನಮ್ಮ ತಂದೆಯು ಒಮ್ಮೆ ಗಂಡಕೀತೀರದಲ್ಲಿ ಉತ್ತಮವಾದ ಸಾಲಗ್ರಾಮಗಳನ್ನು ಹುಡುಕುತ್ತಿದ್ದಾಗ ಈ ಮಣಿಯು ಸಿಕ್ಕಿತಂತೆ. ಅದನ್ನು ಅವರು ಅಂಗುಳೀಯಕದಲ್ಲಿ ಕಟ್ಟಿಸಿ ತಮ್ಮ ಬೆರಳಿನಲ್ಲಿ ಧರಿಸಿದ್ದರು. ಅವರ ಅವಸಾನಕಾಲದಲ್ಲಿ ಇದು ನನ್ನ ಕೈಸೇರಿತು" ಎಂದನು.

ಅನಂಗಲೇಖೆಯು ಅಂತರಂಗದಲ್ಲಿ ಈರ್ಷ್ಯೆಯಿಂದಲೂ ಆಶ್ಚರ್ಯದಿಂದಲೂ ಅನುರಾಗಾತಿಶಯದಿಂದಲೂ ತುಂಬಿದವಳಾಗಿ "ತಮ್ಮ ಮಹಿಮೆಯು ಅತ್ಯದ್ಭುತವಾದುದು. ಲಕ್ಷ್ಮಿಯು ಸರ್ವಗುಣಸಂಪನ್ನರಾದ ತಮ್ಮಂತಹವರನ್ನೇ ಒಲಿಯುವುದೊಂದು ಆಶ್ಚರ್ಯವಲ್ಲವಷ್ಟೆ?" ಎನ್ನುತ್ತ ತನ್ನ ಕೇಕರ ದೃಷ್ಟಿಯನ್ನು ಆತನ ಮೇಲೆ ಪಸರಗೊಳಿಸಿದಳು.

ಇಷ್ಟರಲ್ಲಿ ವಿನಯವತಿಯು ಚೇತರಿಸಿಕೊಂಡು ತನ್ನ ಅಣ್ಣನನ್ನೂ ಶೂದ್ರಕನನ್ನೂ ಎವೆಯಿಕ್ಕದೆ ನೋಡಿ ಕಂಬನಿದುಂಬಿದಳು. ಇವರಿಬ್ಬರೂ ಆಕೆಯನ್ನು ಸ್ವಲ್ಪ ಮಾತನಾಡಿಸಿದ ಬಳಿಕ ಶೂದ್ರಕನು ಯುವರಾಜನನ್ನು

ಕುರಿತು "ಈ ಕನ್ಯಾರತ್ನವು ಸುಕುಮಾರೋಪಚಾರಗಳನ್ನು ಬಯಸು ತ್ತಿರುವಳು ಈಕೆಯನ್ನು ಇನ್ನು ಇಲ್ಲಿಂದ ಕರೆದುಕೊಂಡು ಹೋಗಿ, ಮೆಲ್ಪಾಸಿನ ಮೇಲೆ ಮಲಗಿಸಿ, ಜಾಗರೂಕತೆಯಿಂದ ನೋಡಿಕೊಳ್ಳಬೇಕು" ಎಂದನು.

ಈ ಮಾತನ್ನು ಕೇಳಿ ಅನಂಗಲೇಖೆಯು ತನ್ನ ನಾದಿನಿಯನ್ನು ಎಬ್ಬಿಸ ಹೋದಳು. ವಿನಯವತಿಯು ಅವಳ ಬರುವಿಕೆಯನ್ನು ಅನುಮೋದಿಸಲಿಲ್ಲ ಆಗ ಮಾಧವಿಯು ಅಲ್ಲಿರಲಿಲ್ಲ ಬಿಸಿನೀರನ್ನೂ ಗಂಜಿಯನ್ನೂ ತರುವ ಸಲುವಾಗಿ ಹೋಗಿದ್ದಳು. ಇನ್ನೂ ಈ ರೀತಿ ವಿನಯವತಿಯನ್ನು ಇದೇ ಸ್ಥಳದಲ್ಲಿ ಬಿಟ್ಟಿರುವುದು ತರವಲ್ಲವೆನ್ನುತ್ತ ಶೂದ್ರಕನೂ ಜಯಸ್ವಾತಿಯೂ ತಿಳಿದು, ಆಕೆಯ ಎರಡೂ ತೋಳುಗಳನ್ನು ತಮ್ಮ ಕೊಂಕುಳಲ್ಲಿ ಇರುಕಿಸಿ ಅವಳನ್ನು ಮೆಲ್ಲನೆ ನಡೆಯಿಸಿಕೊಂಡು, ಅಂತಃಪುರಕ್ಕ ಕರೆತಂದು ಮೆಲ್ಪಾಸಿನ ಮೇಲೆ ಮಲಗಿಸಿದರು ಅನಂಗಲೇಖೆಯೂ ಮೊದಲೇ ಬಂದು ಸ್ವಲ್ಪ ದೂರ ನಿಂತಿದ್ದಳು ಶೂದ್ರಕನು ವಿನಯವತಿಯ ಕೈಹಿಡಿದು ನಾಡಿಯನ್ನು ಪರೀಕ್ಷಿಸಿ, ವಿಷವೇಗವು ಸಂಪೂರ್ಣವಾಗಿ ನಿಲ್ಲುವುದಕ್ಕೆ ಇನ್ನೂ ಸ್ವಲ್ಪಕಾಲ ಹಿಡಿಯುವುದೆಂಬುದನ್ನು ತಿಳಿದು, ಪ್ರಾಣಕ್ಕೆ ಯಾವ ಅಪಾ ಯವೂ ಇಲ್ಲವೆಂಬುದಾಗಿ ಜಯಸ್ವಾತಿಯೊಡನೆ ಹೇಳಿ, ಅವಳು ಚೇತರಿಸಿ ಕೊಂಡ ಬಳಿಕ ಆಹಾರಾದಿಗಳನ್ನು ಕೊಡುವಂತೆ ಪರಿವಾರದವರಿಗೆ ಹೇಳಿ, ಮರುದಿನ ಸಂಜೆಯ ವರೆಗೂ ಆ ಉಂಗುರವನ್ನು ಕೈಬೆರಳಿನಿಂದ ತೆಗೆಯ ಕೂಡದೆಂಬುದಾಗಿ ಸಾರಿಸಾರಿ ಹೇಳಿ, ಅನಂಗಲೇಖೆಯನ್ನು ಕುರಿತು, "ಈ ರಾಜಕುಮಾರಿಯನ್ನು ಜಾಗರೂಕತೆಯಿಂದ ನೋಡಿಕೊಳ್ಳುವ ಭಾರವು ಈಗ ನಿಮ್ಮ ಮೇಲೆ ಬಿದ್ದಿರುವುದು. ತಾಯಿತಂದೆಗಳಿಲ್ಲದ ಹುಡುಗಿ. ಮಹಾ ರಾಜನೂ ಪಟ್ಟಣದಲ್ಲಿಲ್ಲ ಈಗ ಸಕಲ ಭಾರವೂ ನಿಮ್ಮನ್ನೇ ಸೇರಿರುವುದು" ಎಂಬ ಉಪಚಾರದ ಮಾತನ್ನು ಹೇಳಿ, ಜಯಸ್ವಾತಿಯೊಡಗೂಡಿ ಹೊರಟು ಬರುತ್ತಿದ್ದನು. ವಿನಯವತಿಯು ಶೂದ್ರಕನ ನಿರ್ಗಮನವನ್ನು ಪ್ರತಿರೋಧಿ ಸುವಳಂತ ಕಂಬನಿದುಂಬಿ ಆತನ ಮೋರೆಯನ್ನೇ ನೋಡುತ್ತ ಚಿಂತಾ ಮ್ಲಾನವದನಳಾದಳು ಅವನು ಅದನ್ನು ಕಂಡು, ಆಕೆಯ ಬಳಿಸಾರ್ದು, "ರಾಜಪುತ್ರಿ! ಅಂಜ ಕೆಲಸವಿಲ್ಲ. ನಿನ್ನ ಆಪತ್ತು ತೊಲಗಿತು. ಇನ್ನು ಚಿಂತಿಸ ಬೇಡ. ಅವಶ್ಯವಿದ್ದರೆ ನಾನು ನಿನ್ನ ಬಳಿಯಲ್ಲಿಯೇ ಇರುವೆನೆಂಬುದಾಗಿ

ತಿಳಿ" ಎಂದು ಸಂತವಿಸಿ ಅಲ್ಲಿಂದ ಹೊರಡುವಷ್ಟರಲ್ಲಿ ಚಂಡಸಿಂಹನು ಮೇಲು ಬ್ಬಸದಿಂದ ಓಡಿಬಂದು ಗಟ್ಟಿಯಾಗಿ, "ಏನು? ಏನಾಯಿತು?" ಎಂಬುದಾಗಿ ಕಿರಿಚಿದನು. ಜಯಸ್ವಾತಿಯು ಶೂದ್ರಕನನ್ನು ಅಲ್ಲಿಯೇ ನಿಲ್ಲಿಸಿ, ಚಂಡ ಸಿಂಹನ ಬಳಿಗೆ ಬಂದು, "ಅರಚಬೇಡ ವಿಷವೇಗವು ಕಡಮೆಯಾಗು ತ್ತಿದೆ. ಪ್ರಾಣಕ್ಕೆ ಅಪಾಯವಿಲ್ಲ ಇಲ್ಲಿಯೇ ಇದ್ದು ನಾವು ಗಟ್ಟಿಯಾಗಿ ಮಾತನಾಡುತ್ತಿದ್ದರೆ ಮರಕಳಿಸಬಹುದು ನಾವಿನ್ನು ಹೊರಡುವ" ಎಂದು ಮೆಲ್ಲಗೆ ಹೇಳಿ ಅವನನ್ನು ಉಪಾಯವಾಗಿ ಅಲ್ಲಿಂದ ಹೊರಡಿ ಸಿದನು ಇಷ್ಟರಲ್ಲಿ ವಿನಯವತಿಯು ತನ್ನ ಕೈಗಳೆರಡನ್ನೂ ಜೋಡಿಸಿ ಶೂದ್ರಕನ ಅಂಗಯ್ಯಲ್ಲಿಟ್ಟು ಕಂಬನಿಗರೆದಳು. ಶೂದ್ರಕನು ಆಕೆಗೆ ಧೈರ್ಯ ಹೇಳುತ್ತ, ಅವಳ ಕಂಬನಿಯನ್ನೊರಸುವಂತೆ ಅನಂಗಲೇಖೆಗೆ ಸೂಚಿಸಿದನು. ಅದಕ್ಕೆ ಅವಳು "ಅಯ್ಯೋ! ನನ್ನ ಕೈಗಳು ಅದುರುತ್ತಿವೆ. ಈ ಹಾಳು ದುಃಖ ವನ್ನು ನೋಡುವುದು ನನ್ನ ಹಣೆಯಲ್ಲಿ ಬರೆಯ ಬೇಕೇ?" ಎನ್ನುತ್ತ ಮತ್ತೊಂದು ಕಡೆ ಮೋರೆಯನ್ನು ತಿರುಗಿಸಿ ನಿಂತಳು ಆಗ ಶೂದ್ರಕನು ಅನಂಗಲೇಖೆಯನ್ನು ಕುರಿತು "ಅಮ್ಮಾ! ಹಾಗೆ ಹೇಳಬಾರದು. ಆಪತ್ಕಾ ಲದಲ್ಲಿ ಪುರುಷರು ಸ್ತ್ರೀಯರನ್ನು ಉಪಚರಿಸಬಹುದಾದರೂ ನಾನು ರಾಜ ಕುಮಾರಿಯ ಕಂಬನಿಯನ್ನೊರಸುವುದು ಯುಕ್ತವಲ್ಲ ಇಲ್ಲಿ ಮತ್ತಾರೂ ಪರಿಚಾರಿಣಿಯರಿಲ್ಲದ ಕಾರಣ ಹೀಗೆ ಹೇಳಿದೆನು. ಮೆಲ್ಲಗೆ ಈಕೆಯ ಕಂಬನಿಯನ್ನು ಒರಸಿರಿ" ಎನ್ನುತ್ತ ಅಲ್ಲಿಂದ ಎದ್ದು ದೂರ ನಿಂತನು. ಅನಂಗಲೇಖೆಯು ವಿಧಿಯಿಲ್ಲದೆ ಬಳಿಸಾರ್ದು ಕಂಬನಿಯನ್ನೊರಸುತ್ತಿರಲು, ಜಯಸ್ವಾತಿಯು ತಂಗಿಯ ಪಕ್ಕದಲ್ಲಿ ಬಂದು ಕುಳಿತನು.

ಇಷ್ಟರಲ್ಲಿ ಪಾಕಶಾಲೆಯಿಂದ ಮುದುಕಿಯರಾದ ಪರಿಚಾರಿಣಿಯರೂ ಮಾಧವಿಯೂ ಪಥ್ಯಪಾನಾದಿಗಳನ್ನು ತಂದರು. ಬಳಿಕ ಶೂದ್ರಕನು ಅಲ್ಲಿಂದ ಬೀಳ್ಕೊಂಡು ಆಟದ ಸ್ಥಳಕ್ಕೆ ಬಂದು ಆಟವನ್ನು ಮುಗಿಸಿ, ಸಂಘಿ ಲಕನನ್ನೂ ಚಂಡಸಿಂಹನನ್ನೂ ಸೋಲಿಸಿದನು ಪರಾಜಿತನಾದ ಚಂಡ ಸಿಂಹನು "ಎಲೋ! ದುರುಳಾ! ರಾಜಪುತ್ರಿಯನ್ನು ನೋಡಿಬಂದೆನೆಂದು ನಿನಗೆ ಗರ್ವವು ತಲೆಗೇರಿದಂತಿದೆ. ನನ್ನ ಪ್ರೇಯಸಿಯನ್ನು ನಿರಾತಂಕವಾಗಿ

ನೋಡಿ ಬಂದೆಯಾಗಿ ನಿನ್ನ ಸಂತಸವು ಉಕ್ಕುತ್ತಿದೆಯಲ್ಲವೇ? ಅದರಿಂದಲೇ ನಿನಗೆ ಇಷ್ಟು ಹುಮ್ಮಸು? ನಿನ್ನನ್ನೇ ನೀನು ಮರೆತಂತಿದೆ ಎಚ್ಚರಿಕೆ! ನೀನಾರೆಂಬುದು ನೆನಪಿರಲಿ. ಇಷ್ಟರಿಂದಲೇ ಹಿಗ್ಗದಿರು. ಇದರ ಫಲವನ್ನು ಎರಡು ದಿನಗಳೊಳಗಾಗಿಯೇ ಅನುಭವಿಸುವೆಯಂತೆ" ಎಂಬುದಾಗಿ ಮೂದಲಿಸಿದನು.

ಆ ಮಾತಿಗೆ ಶೂದ್ರಕನು "ಎಲಾ! ಕ್ಷತ್ರಿಯಾಧಮಾ! ಅರಸನ ಮೈದುನನೆಂಬ ಹೆಮ್ಮೆಯಿಂದ ನೀನೀಪರಿ ಗಳಹುತ್ತಿರುವೆಯಲ್ಲವೇ? ಬ್ರಾಹ್ಮಣರಿಗೆ ಇಷ್ಟು ಹೆಮ್ಮೆಯನ್ನು ಹೆಚ್ಚಿಸಲು ಕ್ಷತ್ರಿಯರೇ ಕಾರಣರಲ್ಲವೇ? ಪರಶುರಾಮನ ಗರ್ವಾಗ್ನಿಗೆ ಕಾರ್ತವೀರ್ಯನೇ ಅರಣಿಯಲ್ಲವೇ?" ಎಂಬುದಾಗಿ ಪ್ರತ್ಯುತ್ತರವಿತ್ತನು.

ಆಗ ಚಂಡಸಿಂಹನು "ಎಲೋ, ಹಾರುವಾ! ಪರಶುರಾಮನಲ್ಲವೇ ಹರಿಶ್ಚಂದ್ರನಿಂದ ಸೋತು, ದುರ್ಯೋಧನನ ಅಡಿಯಾಳಾಗಿ, ರಾವಣನ ಸಭೆಯಲ್ಲಿ ಹೊಗಳುಭಟ್ಟನಂತೆ ಜೀವಿಸುತ್ತಿದ್ದು, ದ್ರೌಪದಿಯ ಪುರೋಹಿತನಾಗಿ, ಅಲ್ಲಿಯೂ ಹೊಟ್ಟೆತುಂಬದೆ, ವ್ಯಾಸಮಹರ್ಷಿಗೆ ಪುರಾಣಗಳನ್ನು ಹೊಸೆದು ಕೊಟ್ಟು, ಭಿಕ್ಷಾನ್ನದಿಂದ ಜೀವಿಸಿ, ಕೊನೆಗೆ ಅಭಿಮನ್ಯುವಿನಿಂದ ಪರಾಜಿತನಾದುದು? ಸಾಕು, ಸಾಕು. ಹಾರುವರ ಹೆಮ್ಮೆಯನ್ನು ನನ್ನಲ್ಲಿ ಬಿತ್ತರಿಸಬೇಡ. ನಾನು ಬಾಯ್ತೆರೆದರೆ ನಿಮ್ಮ ವಂಶದ ಪೂರ್ವೋತ್ತರಗಳನ್ನೆಲ್ಲಾ ಲೋಕದಲ್ಲಿ ಹರಡಿಸುವೆನು ನಿನ್ನ ಚೀಲವನ್ನು ಇಲ್ಲಿ ಬಿಚ್ಚಬೇಡ" ಎನ್ನುತ್ತ ಸಂಘಿಲಕನನ್ನು ಸಂಗಡ ಎಳಕೊಂಡು ಅಲ್ಲಿಂದ ಹೊರಟು ಹೋದನು.

ಮರುದಿನ ಸಾಯಂಕಾಲ ಸೂರ್ಯಾಸ್ತಮಯಕ್ಕೆ ಸ್ವಲ್ಪ ಮುಂಚಿತವಾಗಿ ಒಬ್ಬ ದೂತನು ಶೂದ್ರಕನ ಬಳಿಸಾರ್ದು, "ಅಯ್ಯಾ! ತಮ್ಮನ್ನು ಬೇಗನೆ ಕರೆತರುವಂತೆ ಯುವರಾಜನ ಅಪ್ಪಣೆಯಾಗಿದೆ" ಎಂದನು. ಕೂಡಲೇ ಶೂದ್ರಕನು ಅವನೊಂದಿಗೆ ಅರಮನೆಯ ಬಳಿಗೆ ಬಂದನು. ವಸಂತಕಾಲದ ಹುಣ್ಣಿಮೆಯಾದುದರಿಂದ ಸಂಧ್ಯಾಮಾರುತವು ತಂಪಾಗಿ ಬೀಸುತ್ತಿದ್ದಿತು. ಅಷ್ಟರಲ್ಲಿ ನಿಶಾಕಾಂತನು ಪೂರ್ವದಿಕ್ಕಿನಲ್ಲಿ ಮೂಡಿ ತನ್ನ ಪ್ರಭಾವವನ್ನು ತೋರತೊಡಗಿದನು. ಬೆಳ್ದಿಂಗಳ ಹಕ್ಕಿಗಳ ಕಲಕಲವು

ಯುವಕರ ಚಿತ್ತಸ್ಥೈರ್ಯವನ್ನು ಕ್ಷೋಭೆಗೊಳಿಸುತ್ತಿದ್ದಿತು. ಆಗ ತಾನೇ ಅರಳುತ್ತಿದ್ದ ಮಲ್ಲಿಕಾದಿ ಕುಸುಮ ಪರಿಮಳವು ಎಲ್ಲೆಲ್ಲಿಯೂ ಹರಡುತ್ತಿದ್ದಿತು ಸ್ವಲ್ಪ ಹೊತ್ತಿನಲ್ಲಿಯೇ ಲೋಕವೆಲ್ಲವೂ ಸುಧಾಲಿಪ್ತವಾದಂತೆ ಕಂಗೊಳಿಸಿತು. ಜಡಮಯವಾದ ಗಭೀರಸಮುದ್ರವನ್ನೇ ಕ್ಷೋಭೆಗೊಳಿಸುವಂತಹ ಶಕ್ತಿಯುಳ್ಳ ಚಂದ್ರಕಿರಣಗಳು ಚೇತನಾತ್ಮಕವಾದ ಪ್ರಪಂಚವನ್ನು ಕ್ಷೋಭೆಗೊಳಿಸುವುದೊಂದು ಆಶ್ಚರ್ಯವಲ್ಲವಷ್ಟೆ! ಶೂದ್ರಕನು ದೂತನ ಸಂಗಡ ಅರಮನೆಯನ್ನು ಹೊಕ್ಕನು. ಆದರೆ ಅವನು ಯುವರಾಜನ ಉಪ್ಪರಿಗೆಯ ಹಾದಿಯನ್ನು ಬಿಟ್ಟು ರಾಣಿಯ ಅಂತಃಪುರದ ಹಾದಿಯಲ್ಲಿ ನಡೆಯ ತೊಡಗಿದನು ಶೂದ್ರಕನಿಗೆ ಮನಸ್ಸಿನಲ್ಲಿ ಸಂಶಯವು ತಲೆದೋರಿತಾದರೂ ಒಂದು ವೇಳೆ ವಿನಯವತಿಯ ದೇಹಾಲಸ್ಯದ ನಿಮಿತ್ತ ಯುವರಾಜನೂ ಅಲ್ಲಿಯೇ ಇರಬಹುದೆಂದು ಭಾವಿಸಿ, ಮಾತನಾಡದೆಯೇ ಹಿಂದೆ ಹೋಗುತ್ತಿದ್ದನು. ಆದರೂ ಅವನ ಚಿತ್ತವೃತ್ತಿಯು ಮಾತ್ರ ಯಾವುದೋ ಒಂದು ಅಕಾರ್ಯವನ್ನು ಮಾಡುತ್ತಿರುವುದಾಗಿ ಹೇಳುವಂತಿದ್ದಿತು. ಅಷ್ಟರಲ್ಲಿ ವಿನಯವತಿಯ ಅಂತಃಪುರವು ಸಮೀಪಿಸಿದರೂ ಶೂದ್ರಕನು ಒಳಗಡೆ ಹೋಗದೆ ಅಲ್ಲಿಯೇ ನಿಂತನು. ಇಂದ್ರನ ಅರಮನೆಯನಿಸಿದ ವೈಜಯಂತದಂತೆ ಕಂಗೊಳಿಸುವ ಆ ರಾಜಗೃಹದ ಸೊಬಗು ಬೆಡಗುಗಳಾವುವೂ ಅವನ ಮನಸ್ಸಿಗೆ ಗೋಚರಿಸಲಿಲ್ಲ ರಾಜದೂತನು ಒಳಹೊಕ್ಕನು. ಶೂದ್ರಕನು ವಿಸ್ಮಯಾವಿಷ್ಟನಾಗಿ ಕೆಲಕಾಲ ಮರುಳನಂತೆ ದಿಕ್ಕು ತೋರದಿದ್ದು, ಬಳಿಕ ಧೈರ್ಯವನ್ನು ತಳೆದು ಅಲ್ಲಿಯೇ ತಿರುಗಾಡುತ್ತಿದ್ದನು ಅಷ್ಟರಲ್ಲಿ ರಾಣಿಯು ಸೇವಕನೊಂದಿಗೆ ಅಲ್ಲಿಗೆ ಬಂದು ನಿಂತಳು. ಆ ಕಾಲದಲ್ಲಿ ಆಕೆಯು ಅಲಂಕಾರದಿಂದ ವಸಂತಲಕ್ಷ್ಮಿಯನ್ನು ತಿರಸ್ಕರಿಸುವಂತಿದ್ದಳು; ಭುವನಮೋಹಿನಿಯಂತೆ ಬೆಳಗುತ್ತಿದ್ದಳು. ಕೂಡಲೇ ಆ ತರುಣಿಯು ಶೂದ್ರಕನ ಬಳಿಸಾರ್ದು ಪಿಕನಿನಾದವನ್ನೂ ಅಲ್ಲಗಳೆವ ಮಧುರ ಕಂಠದಿಂದ "ದಯೆಮಾಡಿಸಬೇಕು" ಎಂಬುದಾಗಿ ಹೇಳಿದಳು.

ಶೂದ್ರಕನು "ತಾಯೇ! ಶ್ರೀಮತಿಯಾದ ವಿನಯವತಿಯು ಸುಖವಾಗಿರುವಳೇ? ಆಕೆಯ ದೇಹಸ್ಥಿತಿಯು ಅನುಕೂಲವಾಗಿರುವುದೆಂದು ಭಾವಿಸುವೆನು" ಎಂದು ಕೇಳಿದನು.

ಅನಂಗಲೇಖೆಯು "ಅಮೃತ ಸ್ವರೂಪವಾದ ತಮ್ಮ ಹಸ್ತಸ್ಪರ್ಶದಿಂದ, ಎದ್ದು ಹೋಗುವ ಪ್ರಾಣಗಳಾದರೂ ಇದ್ದು ಕೊಳ್ಳಲಾರವೇ ?" ಎಂದು ಹೇಳಿ, ರಾಜಭಟನನ್ನು ಕುರಿತು, "ಇನ್ನು ನೀನು ನಿನ್ನ ಕೆಲಸಕ್ಕೆ ಹೋಗು" ಎಂದಳು. ಶೂದ್ರಕನು ರಾಜಭಟನನ್ನು ನೋಡಿ "ಯುವರಾಜನು ಎಲ್ಲಿರುವನು ? ನನ್ನನ್ನು ಇಲ್ಲಿಯೇ ಬಿಟ್ಟು ನೀನು ಎಲ್ಲಿಗೆ ಹೋಗುವೆ ?" ಎಂದು ಪ್ರಶ್ನೆಮಾಡಿದನು.

ಅನಂಗಲೇಖೆಯು "ಭೂಸುರೋತ್ತಮಾ ! ಅವನು ಹೋಗಲಿ ನಾನು ತಮಗೆ ಪ್ರತ್ಯುತ್ತರವನ್ನು ಹೇಳುತ್ತಿರುವೆನಲ್ಲವೇ ?" ಎನ್ನುತ್ತ ದೂತನನ್ನು ಹೋಗಹೇಳಿ, ಶೂದ್ರಕನನ್ನು ಒಳಕ್ಕೆ ದಯೆಮಾಡಿಸುವಂತೆ ಪಲತೆರನಾಗಿ ಬೇಡಿಕೊಂಡಳು ತರುಣವೀರನು ಅದಕ್ಕೆ ಸಮ್ಮತಿಸಲಿಲ್ಲ

ಶೂದ್ರಕ—"ಯುವರಾಜನು ನನ್ನನ್ನು ಕರೆಕಳುಹಿದನೆಂದು ಹೇಳಲಾಗಿ ಅಂತಃಪುರದಲ್ಲಿ ತನ್ನ ತಂಗಿಯು ದೇಹಸ್ಥಿತಿಯ ವಿಚಾರವಾಗಿ ಬರಮಾಡಿಸಿರಬಹುದೆಂದು ಇಲ್ಲಿಗೆ ಬಂದೆನು ಕ್ಷಮಿಸಬೇಕು ಅಪ್ಪಣೆಯಾದರೆ ಬರುವೆನು"

ಅನಂಗಲೇಖೆ—"ದೇವಪುರುಷರು ಸೌಂದರ್ಯನಿಧಿಗಳೆಂಬುದಾಗಿ ಪುರಾಣೇತಿಹಾಸಗಳಲ್ಲಿ ಕೇಳಿದ್ದೆನು. ಆದರೆ ತಮ್ಮ ಸೌಂದರ್ಯವನ್ನು ಕಂಡು ಮರುಳುಗೊಂಡ ನಾನು ಅದನ್ನು ಸುಳ್ಳೆಂತಲೇ ಭಾವಿಸಿದೆನು. ತಮ್ಮ ಅಪ್ರತಿಮ ಸಾಹಸವೂ ನನ್ನ ಮನಸ್ಸನ್ನು ಮರುಳುಗೊಳಿಸಿತು ಇಂತು ತಮ್ಮ ರೂಪಸಾಹಸಗಳೆರಡೂ ನನ್ನ ಮೂಲಕ ತಮ್ಮನ್ನು ಇಲ್ಲಿಗೆ ಬರಮಾಡಿಸಿದುವು. ಒಳಗೆ ದಯೆಮಾಡಿಸಬೇಕೆಂದು ಬೇಡುತ್ತಿರುವನಲ್ಲವೇ ?

ಶೂದ್ರ—ಜನನೀ ! ಅನುಗಾಲವೂ ನಿಮ್ಮ ಅಂಕೆಗೆ ಒಳಪಟ್ಟಿರುವ ನನ್ನಂತಹ ಪಾಮರರಲ್ಲಿ ಅತ್ಯಲ್ಪವಾದ ಗುಣಲೇಶವು ಯಾವುದಾದರೂ ಕಂಡುಬಂದಲ್ಲಿ, ಅದು ಆಶ್ರಯದಾತರಾದ ನಿಮ್ಮ ಮಹಿಮೆಯಲ್ಲದ ಬೇರೆಯಲ್ಲ ಸೂರ್ಯನು ಅರುಣನನ್ನು ತನ್ನ ರಥದ ಮುಂದೆ ಕುಳ್ಳಿರಿಸದಿದ್ದರೆ, ಅರುಣನು ಕತ್ತಲನ್ನು ದೂಡಬಲ್ಲವನಾಗುತ್ತಿದ್ದನೇ? "

ಅನಂ.—"ಹಾಗೆ ಅಪ್ಪಣೆಕೊಡಿಸಬಾರದು. ತಮ್ಮಂತಹ ಲೋಕೋತ್ತರ ಸೌಂದರ್ಯನಿಧಿಗಳು ನನ್ನಂತಹವರ ಅನುರಾಗವನ್ನು ಪ್ರತಿಫಲಿಸುವಂತ ಮಾಡಿದರೆ, ನಾನು ಸೌಭಾಗ್ಯವತಿಯೇ ಸರಿ!"

ಶೂದ್ರ—“ತಾಯೇ! ನಾನು ನಿಮ್ಮ ಭೃತ್ಯವರ್ಗಕ್ಕೆ ಸೇರಿದವನು. ಧರ್ಮಪಾಶವು ಯಾವಾಗಲೂ ನನ್ನನ್ನು ಬಂಧಿಸಿರುವುದು. ವಿಶುದ್ಧ ಕೀರ್ತಿಯೇ ನನ್ನ ಧ್ಯೇಯವು. ಮಿಂಚುಬಳ್ಳಿಯು ಕಾರ್ಮುಗಿಲಿನಲ್ಲಿ ಮಾರ್ಪೊಳೆವಂತೆ ಮಣ್ಣಿನ ಮುದ್ದೆಯಲ್ಲಿ ಪ್ರತಿಫಲಿಸಲಾರದಲ್ಲವೇ?”

ಆನಂ —“ನಿಮ್ಮ ಸೌಂದರ್ಯಾತಿಶಯವು ನನ್ನ ಅನುರಾಗವನ್ನು ಸಾವಿರ ಪಾಲು ಹೆಚ್ಚಿಸುತ್ತಿರುವುದು”

ಶೂದ್ರ—ಜನನೀ! ರೂಪಲಾವಣ್ಯಗಳು ಕ್ಷಣಭಂಗುರಗಳು. ಇವು ದೃಷ್ಟಿದೋಷಜನಿತವಾದುವು. ಒಬ್ಬನಿಗೆ ಅಂದವಾಗಿ ಕಾಣುವ ವಸ್ತುವೇ ಮತ್ತೊಬ್ಬನಿಗೆ ವಿಕಾರವಲ್ಲವೇ?”

ಆನಂ —“ತಾವು ಮಾತಿನಲ್ಲಿಯೂ ಸಾಹಸಗಾರರಾಗಿರುವಿರಿ”

ಶೂದ್ರ—“ಹದ್ದು ಮೀರಿ ರಾಜಮರ್ಯಾದೆಯನ್ನು ಉಲ್ಲಂಘಿಸಿದೆನಾದರೆ ಚಿತ್ರವಧೆಗೆ ಗುರಿಮಾಡಬಹುದು ನಾನು ಪ್ರಭುಶಕ್ತಿಗೆ ಒಳಪಡದವನಲ್ಲವಷ್ಟೆ!”

ಆನಂ.—“ನಿಮ್ಮಿಂದ ವಿದ್ಯಾಶಿಕ್ಷೆಯನ್ನು ಪಡೆದು ಸುಖಸಂತೋಷಗಳನ್ನು ಅನುಭವಿಸುವ ಸಲುವಾಗಿಯೇ ತಮ್ಮನ್ನು ಬರಮಾಡಿಸಿರುವೆನು.”

ಶೂದ್ರ—“ಕರ್ಣಶೂಲಪ್ರಾಯವಾದ ಈ ಮಾತುಗಳನ್ನು ಒತ್ತಟ್ಟು ಮಾಡಿ, ದಾರಿತೋರುವ ಸಲುವಾಗಿ ಯಾವನಾದರೂ ಒಬ್ಬ ದೂತನನ್ನು ಕಳುಹಲು ಬೇಡುವೆನು ಬೇಗನೆ ಅಪ್ಪಣೆಯನ್ನು ದಯೆಪಾಲಿಸೋಣಾಗಲಿ.”

ಆನಂ.—“ನಿಮ್ಮನ್ನು ಕರೆಕಳುಹಿದ ಕಾರ್ಯವು ಮುಗಿಯಲಿಲ್ಲವಲ್ಲಾ!”

ಶೂದ್ರ—“ಆದರೆ, ಬೇಗನೆ ಅಪ್ಪಣೆಯಾಗಲಿ”

ಆನಂ.—“ನೆನ್ನೆ ತಾವು ವಿನಯವತಿಯ ಬೆರಳಿನಲ್ಲಿ ತೊಡಿಸಿದ ಉಂಗುರವನ್ನು ಒಪ್ಪಿಸಬೇಡವೇ?”

ಶೂದ್ರ—“ಇದಕ್ಕಾಗಿ ತಮಗೆ ಇಷ್ಟೊಂದು ಶ್ರಮವು ಬೇಕಾಗಿರಲಿಲ್ಲ. ಯಾರ ಮೂಲಕವಾಗಿಯಾದರೂ ಕಳುಹಿಸಬಹುದಾಗಿದ್ದಿತಲ್ಲವೇ?”

ಆನಂ.—“ಮಹಾರ್ಘವಾದ ರತ್ನವು ಕೈಬಿಟ್ಟರ ಜೀವಿತವೆಲ್ಲವೂ ವ್ಯರ್ಥವಷ್ಟೆ!”

ಶೂದ್ರ—“ನಿಮ್ಮ ಅಂಕೆಯುನ್ನು ಮೀರಿ ಒಂದು ಹುಲ್ಲು ಕಡ್ಡಿಯುನ್ನಾದರೂ ಅಪಹರಿಸಬಲ್ಲವನು ನಿಮ್ಮ ರಾಜ್ಯದಲ್ಲಿಯೇ ಇಲ್ಲ.”

ಅನಂ.—“ಉತ್ತಮ ವಸ್ತುವನ್ನು ಕಂಡರೆ ಎಂತಹವರ ಮನಸ್ಸಾದರೂ ಚಲಿಸುವುದು”

ಶೂದ್ರ—“ಧರ್ಮಬದ್ಧನಾದರೆ ಎಂದಿಗೂ ಚಲಿಸಲಾರದು. ರಾಜ್ಯದಲ್ಲಿ ಧರ್ಮವನ್ನು ನೆಲೆಗೊಳಿಸದಿದ್ದರೆ, ಅಂತಹ ಅರಸುತನವಾದರೂ ಏತಕ್ಕೆ? ರಾಜಭಕ್ತಿಯು ಗುಟ್ಟಾದರೂ ಇಷ್ಟೇ ಸರಿ. ಅಂಗುಳೀಯುಕದ ಕಾರ್ಯವು ನೆರವೇರಿದ್ದರೆ ಇತ್ತ ದಯೆಪಾಲಿಸೋಣಾಗಲಿ. ಹೊತ್ತು ಮೀರುತ್ತಿರುವುದು.”

ಅನಂ.—“ಎರಡು ಗಳಿಗೆಗಳ ಕಾಲ ನನ್ನ ಬೆರಳಿಗೆ ಸೌಭಾಗ್ಯವನ್ನೊದಗಿಸಿದ ತಮ್ಮ ಅಂಗುಳೀಯುಕವನ್ನು ಪರಿಗ್ರಹಿಸಲು ಬೇಡುವೆನು.” ಹೀಗೆ ಹೇಳಿ ಆ ಉಂಗುರವನ್ನು ಆತನಿಗೆ ಕೊಡಲು ಹೋದಳು. ಅದನ್ನು ಕಂಡು ಶೂದ್ರಕನು “ತಾಯೇ! ಆ ತಟ್ಟೆಯಲ್ಲಿ ಇರಿಸೋಣಾಗಲಿ! ನಾನು ತೆಗೆದುಕೊಳ್ಳುವೆನು” ಎಂದನು.

ಅನಂ.—“ನಾನೇ ಅದನ್ನು ತಮ್ಮ ಬೆರಳಿಗೆ ತೊಡಿಸಿ ನನ್ನ ಜೀವಿತವನ್ನು ಸಾರ್ಥಕಗೊಳಿಸಬೇಕೆಂದಿರುವೆನು.”

ಶೂದ್ರ—ಜನನಿ! ಸೇವಕರ ವಿಷಯದಲ್ಲಿ ಅಂತಹ ಸಂಕಲ್ಪವು ಹೇಯವಾದುದಲ್ಲವೇ?

ಅನಂಗಲೇಖೆಯು ತಡೆಯದೆ ಬೇಗನೆ ಬಳಿಸಾರ್ದು ಶೂದ್ರಕನ ಕೈಬೆರಳಿನಲ್ಲಿ ಉಂಗುರವನ್ನು ತೊಡಿಸಿ, ಅವನ ಕೈಗಳನ್ನು ಹಿಡಿದು “ಆರ್ಯಾ! ನನ್ನ ಪ್ರಾರ್ಥನೆಯನ್ನು ಅಂಗೀಕರಿಸಿ, ದೀನೆಯಾದ ಈ ಅಬಲೆಯನ್ನು ಉದ್ಧರಿಸು” ಎಂದು ಬೇಡಿಕೊಂಡಳು.

ಶೂದ್ರಕನು ಬಲಾತ್ಕಾರದಿಂದ ಕೈಗಳನ್ನು ಬಿಡಿಸಿಕೊಂಡು ದೂರವಾಗಿ ನಿಂತು, “ಜನನೀ! ರಾಜಮರ್ಯಾದೆಯನ್ನು ಅತಿಕ್ರಮಿಸುವುದು ತರವಲ್ಲ. ರಾಜಪತ್ನಿಯು ಜನನಿಗಿಂತಲೂ ಪರದೇವತೆಗಿಂತಲೂ ಅತಿಶಯವಾಗಿ ಪೂಜನೀಯಳು. ಸೇವಕರು ಇರುವೆಗೆ ಸಮಾನರು ನಮ್ಮ ತನುಧನಗಳು ನಿಮ್ಮ ಅಧೀನ. ನೀವು ಈ ರೀತಿ ನಮ್ಮನ್ನು ಪರೀಕ್ಷಿಸತೊಡಗಿದರೆ ನಮ್ಮ ಗತಿಯೇನು?” ಎಂದು ಒಕ್ಕಣಿಸಿದನು.

ಅನಂ —“ಪರೀಕ್ಷೆಯುಲ್ಲ  ನಿನ್ನ ಸೌಂದರ್ಯಸಾಹಸ ವಾಕ್ಚಾತುರ್ಯಗಳು ನನ್ನನ್ನು ಮರುಳುಮಾಡಿರುವ ಕಾರಣ ನಾನು ದಿಕ್ಕಿಲ್ಲದವಳಾದೆನು ”

ಶೂದ್ರ—“ಸೌಂದರ್ಯ ಸಾಹಸಾದಿಗಳು ವಯೋದೋಷಗಳು  ಅವು ಮಿಂಚಿನಂತೆ ಮಿನುಗುತ್ತ ಉತ್ತರಕ್ಷಣದಲ್ಲಿಯೇ ಮಾಯವಾಗುವುವು. ನಿಷ್ಕಪಟವಾದ ಸದ್ವರ್ತನವು ಕೀರ್ತಿಲಕ್ಷ್ಮಿಗೆ ಅಮೃತ ಸಮುದ್ರದಂತಿರುವುದು. ಅಂತಹ ಸದ್ವರ್ತನವನ್ನು ಬಿಡದೆ ಕೀರ್ತಿಯನ್ನು ಕಾಪಾಡಿಕೊಂಡು ಬದುಕುವುದೇ ಸಾರ್ಥಕ ”

ಅನಂ.—“ನನ್ನ ಆಜ್ಞೆಯನ್ನು ಮೀರುತ್ತಿರುವೆ.”

ಶೂದ್ರ—“ರಾಜಾಜ್ಞೆಯು ಕೇವಲ ಧರ್ಮಬದ್ಧವಾದುದು; ಅಧರ್ಮವನ್ನು ಹತ್ತಿರ ಸುಳಿಯುಗೊಳಿಸುವುದಿಲ್ಲ.”

ಅನಂ.—“ನನ್ನ ಅಂಕೆಯನ್ನು ಮೀರಿದರೆ ಏನಾಗುವುದೆಂಬುದನ್ನು ಬಲ್ಲೆಯಾ ? ನನ್ನ ಶಕ್ತಿಯಾದರೂ ನಿನಗೆ ತಿಳಿದಿರುವುದೇ ? ”

ಶೂದ್ರ—“ತಾಯೆ ! ಅಕಾರ್ಯದಿಂದ ಹೆದರಿ ಪ್ರಾಣವನ್ನು ಸೂರೆಗೊಟ್ಟರೂ ಶ್ರೇಯಸ್ಕರವೇ ಸರಿ. ಇನ್ನು ನಿಮ್ಮ ಶಕ್ತಿಯು ಎಂತಹುದೆಂಬುದನ್ನೂ ನಾನು ಚೆನ್ನಾಗಿ ಬಲ್ಲೆನು.”

ಅನಂ.—“ ಹೇಗೆ ? ”

ಶೂದ್ರ—“ ನೆನ್ನೆ ರಾಜಪುತ್ರಿಗೆ ಹಾವು ಕಡಿದಾಗ.”

ಅನಂ.—“ ಏನೇನೋ ಗಳಹುತ್ತಿರುವೆ ! ಎಚ್ಚರಿಕೆ ”

ಶೂದ್ರ—“ ತಾಯೇ ! ತಾಳ್ಮೆಯಿರಲಿ. ನಾನು ಗಳಹುತ್ತಿಲ್ಲ  ಈ ಅಲ್ಪ ವಿಷಯವನ್ನು ತಿಳಿಯದಿದ್ದರೆ, ನಾನು ಇದು ವರೆಗೆ ವ್ಯಾಸಂಗ ಮಾಡಿದುದೆಲ್ಲಾ ವ್ಯರ್ಥವೇ ಸರಿ.”

ಅನಂ.—“ ನಿನ್ನ ಸಂಶಯಕ್ಕೆ ಮೂಲವಾದರೂ ಯಾವುದು? ಹೇಳು. ಕೇಳುವ.”

ಶೂದ್ರ—“ ಸಂಶಯವಲ್ಲ. ಸಿದ್ಧಾಂತವೇ ಸರಿ  ಆ ಸರ್ಪಜಾತಿಯು ಈ ದೇಶದಲ್ಲಿಯೇ ಕಾಣಬಾರದು. ಅದು ಮಂತ್ರದಿಂದಲಾಗಲಿ ಔಷಧದಿಂದಲಾಗಲಿ ಸಾಧ್ಯವಾಗ ತಕ್ಕ ಸಾಮಾನ್ಯ ವಿಷಜಂತುವಲ್ಲ. ಅದನ್ನು

ಸಂಪಾದಿಸುವುದೂ ಸುಲಭಸಾಧ್ಯವಲ್ಲ ಸಾವಿರಾರು ಮಂದಿ ವಿಷ ವೈದ್ಯರನ್ನು ಆಶ್ರಯದಲ್ಲಿಟ್ಟುಕೊಂಡಿರುವ ರಾಜಾಧಿರಾಜರಿಗಲ್ಲದೆ ಇತರರಿಗೆ ಅಂತಹ ಸರ್ಪವು ದೊರೆಯುವುದೆಂದರೇನು? "

ಅನಂ —"ಶೂದ್ರಕಾ! ಬ್ರಾಹ್ಮಣನ ಯಜ್ಞೋಪವೀತವೇ ಬ್ರಾಹ್ಮಣ ನಿಗೆ ಮುಪ್ಪು ಎಂಬಂತೆ ನಿನ್ನ ತಿಳಿವಳಿಕೆಯೇ ನಿನಗೆ ಉರುಲಾಗುವುದು"

ಶೂದ್ರ—"ಆಗಬಹುದು"

ಅನಂ.—"ಸುಖವಾಗಿ ಬದುಕಬಾರದೇ?"

ಶೂದ್ರ—"ಧರ್ಮವನ್ನು ಮಣ್ಣುಪಾಲುಮಾಡಿ, ಮರಣಕ್ಕಿಂತಲೂ ಭಯಂಕರವಾದ ದುಷ್ಕೀರ್ತಿಯ ಮಡುವಿನಲ್ಲಿ ನಿಮಿಷನಿಮಿಷಕ್ಕೂ ಹೆದರುತ್ತ ಮುಳುಗುವುದಕ್ಕಿಂತಲೂ ಪರಿಶುದ್ಧವಾದ ಸನಾತನ ಧರ್ಮವನ್ನು ಬಿಡದೆ, ಅಂತಹ ಧರ್ಮಸಾಧನೆಯಲ್ಲಿಯೇ ಈ ದೇಹವನ್ನು ಬಿಟ್ಟು ಶಾಶ್ವತ ವಾದ ಕೀರ್ತಿವಿಮಾನವನ್ನೇರಿ, ಆತ್ಮೋನ್ನತಿಯನ್ನು ಪಡೆಯುವುದು ಶ್ರೇಯಸ್ಕರವಲ್ಲವೇ?"

ಅನಂ.—"ನೀನು ಪರಮ ಸಾಹಸಿಕನಾಗಿರುವೆ"

ಶೂದ್ರ—"ಜನನಿ! ಅದು ತಮ್ಮ ಆಶೀರ್ವಾದದ ಪ್ರಭಾವ ಈ ಪ್ರಾಣಿಯು ಅನುಗಾಲವು ಇಂತೆಯೇ ಸಾಹಸಿಕನಾಗಿರುವಂತೆ ಆಶೀರ್ವಾದ ಬೇಡುವೆನು. ಇನ್ನು ನಾನು ಇಲ್ಲಿ ನಿಲ್ಲುವುದು ತರವಲ್ಲ ನೀವು ಮಾತ್ರ ಈ ವಿಷಯವನ್ನು ಇಲ್ಲಿಯೇ ಸಂಪೂರ್ಣವಾಗಿ ಮರೆತಲ್ಲದೆ ಇಬ್ಬರಿಗೂ ಸುಖವಿಲ್ಲ"

ಅನಂ.—"ಎಲೋ! ಹೆದರಿಸಬೇಡ ನಿನಗೆ ಬುದ್ಧಿಸಾಹಸಗಳಿದ್ದರೆ ನೀನು ಪಾರಾಗುವ ಉಪಾಯವನ್ನು ಹುಡುಕಿಕೊ. ನಿನಗೆ ಸಮರ್ಪಿಸಿದ ಈ ದೇಹದ ಶ್ರೇಯಸ್ಸನ್ನು ನೋಡಿಕೊಳ್ಳುವ ಭಾರವು ನನ್ನದಲ್ಲ ಈಗ ನೀನು ಈ ದೇಹವನ್ನು ತಿರಸ್ಕರಿಸಿರುವೆಯಾಗಿ ಇದರ ಶ್ರೇಯಸ್ಸಿನ ಸುದ್ದಿ ನಿನಗಾದರೂ ಏಕೆ?"

ಶೂದ್ರ—"ಈ ಮಾತುಗಳು ಮಹಾಕುಲಪ್ರಸೂತೆಯೂ, ವೀರಪತ್ನಿ ಯೂ, ಪಟ್ಟಮಹಿಷಿಯೂ ಎನಿಸಿದ ನಿಮ್ಮಂತಹ ಲಲನಾಮಣಿಗಳ ಬಾಯಲ್ಲಿ ಬರಲು ತಕ್ಕವುಗಳಲ್ಲ. ಇದೆಲ್ಲವೂ ಕಾಲದ ಮಹಿಮೆಯೇ ಸರಿ.

ಇನ್ನಾದರೂ ವಿವೇಕವನ್ನು ತಳೆದು, ಈ ಮಾತುಗಳನ್ನು ಒತ್ತಟ್ಟಿಗಿಟ್ಟು, ಧರ್ಮಮಾರ್ಗವನ್ನು ಅನುಸರಿಸು ಭಗವಂತನು ನಿಮಗೆ ಮೇಲ್ಮೆಯುನ್ನುಂಟು ಮಾಡುವನು. ನಮ್ಮಂತಹ ಭೃತ್ಯವರ್ಗದವರನ್ನು ಇಂತಹ ದುರ್ಮಾರ್ಗಕ್ಕೆ ಬೀಳಗೊಳಿಸದೆ ನಿಮ್ಮ ರಾಜ್ಯನೌಕೆಯುನ್ನು ನಿರಾತಂಕವಾಗಿ ನಡೆಯಿಸಲು ನಿಮ್ಮ ಪ್ರಾಣೇಶ್ವರನಿಗೆ ಕರ್ಣಧಾರಿಣಿಯಾಗಿರಿ."

ಅನಂಗಲೇಖೆಯು "ಎಲೋ! ಮರುಳೇ! ಧರ್ಮಧರ್ಮವೆನ್ನುತ್ತ ಎಲ್ಲಿಯೋ ಅಡವಿಯಲ್ಲಿ ಯಾವುದೋ ಹಾಳು ಬಾವಿಯಲ್ಲಿ ಬಿದ್ದು ಹಾಳಾಗ ಬೇಡ. ಈಗಲಾದರೂ ಯೋಚಿಸಿ ನೋಡು" ಎಂದು ಪರಿಹಾಸ್ಯಮಾಡಿದಳು.

ಶೂದ್ರ—"ಇಷ್ಟೇ ಅಲ್ಲವೇ ನಿಮ್ಮ ಉಪದೇಶ? ನಾನು ಧರ್ಮದೇವ ತೆಯ ಉಪಾಸಕನು ಧರ್ಮದೇವತೆಯು ಸಮುದ್ರದಲ್ಲಿ ಮುಳುಗಲಾರದು. ಕಾಳ್ಗಿಚ್ಚಿನಲ್ಲಿ ಸುಡಲಾರದು ಕಾಲಕೂಟವನ್ನಾದರೂ ಜೀರ್ಣಿಸಿಕೊಳ್ಳು ವುದು ಇಂತಹ ಧರ್ಮದೇವತೋಪಾಸಕರಿಗೆ ಯಾವ ಭಯವೂ ಇಲ್ಲ ಪ್ರತ್ಯಕ್ಷನರಕದಂತಿರುವ ಅಧರ್ಮವೆಂಬ ಕುಂಟೆಯಲ್ಲಿ ಮುಳುಗಿದರೆ ಪಾಪವೆಂಬ ಕೆಸರು ಬಳಿದುಕೊಳ್ಳುವುದು ಧರ್ಮನದಿಯ ಸ್ನಾನದಿಂದ ಶರೀರವು ನಿರ್ಮಲವಾಗುವುದು. ಇನ್ನು ನನಗೆ ಹೆದರಿಕೆಯಾದರೂ ಎಲ್ಲಿಯದು?"

ಅನಂ.—"ವಿವೇಕವಿಲ್ಲದವರಿಗೆ ಕಾರ್ಯಗೌರವವು ತಿಳಿಯುವುದೇ? ನಿನ್ನಲ್ಲಿ ಎಷ್ಟು ಹೇಳಿದರೂ ಫಲವಿಲ್ಲ"

ಶೂದ್ರ—"ಕಾರ್ಯಸ್ವಭಾವವನ್ನು ಚೆನ್ನಾಗಿ ತಿಳಿದಿರುವುದರಿಂದಲೇ ಈ ಕಾರ್ಯದಲ್ಲಿ ಮೂರ್ಖನಾದೆನು ಸಶರೀರವಾದ ನರಕಕ್ಕಿಂತಲೂ ಅಶರೀರ ವಾದ ಕೀರ್ತಿಯೇ ಮೇಲು! ಇನ್ನು ಈ ಸುದ್ದಿಯನ್ನು ಬಿಡುವುದೇ ಲೇಸು ಇನ್ನು ನಿಮ್ಮ ಸಂಗಡ ಮಾತನಾಡಿದೆನಾದರೆ ಪಾಪವು ತಪ್ಪಲಿಕ್ಕಿಲ್ಲ ಅಪ್ಪಣೆ ಯಾದರೆ ಹೊರಡುವೆನು"

ಹಾಗೆ ಹೇಳುತ್ತ ಶೂದ್ರಕನು ಮೆಲ್ಲನೆ ಅಲ್ಲಿಂದ ಸರಿದನು.

"ಆಗಲಿ ನಿನ್ನ ಧರ್ಮದೇವತೆಗೇ ನಿನ್ನನ್ನು ಬಲಿಕೊಡುವೆನು" ಎಂಬ ಮಾತುಗಳು ಕಿವಿಗೆ ಬಿದ್ದುವು. ಇದನ್ನು ಕೇಳಿ ಕ್ರೋಧವಿಷಾದಭರಿತನಾದ ಶೂದ್ರಕನು ಅಂತಃಪುರದಿಂದ ಹೊರಬೀಳಲು ದಾರಿ ತಿಳಿಯದೆ, ಹೇಗೋ

ಕಷ್ಟಪಟ್ಟು ಹೊರಬಿದ್ದು ರಾಜಭವನವನ್ನು ಹೊಕ್ಕು, ಸೇವಕರ ಮೂಲಕ ಮಾರ್ಗವನ್ನು ತಿಳಿದು, ರಾಜಬೀದಿಯನ್ನು ಸೇರಿ, ಮನೆಗೆ ಬಂದನು

ಆ ರಾತ್ರಿಯಲ್ಲಿ ಶೂದ್ರಕನಿಗೆ ನಿದ್ರೆಯೇ ಹತ್ತಲಿಲ್ಲ. "ಆಹಾ! ಎಂತಹ ಕಾಲವೈಪರೀತ್ಯವಿದು! ರಾಜಕುಟುಂಬದಲ್ಲಿ ಕಳಂಕವು ತಲೆದೋರಿದರೆ ರಾಜವಂಶವೇ ನಿರ್ಮೂಲವಾಗುವುದು ದಿಟ ಧರ್ಮಸೇತುವು ಮುರಿದು ಹೋಗುವುದರಿಂದ ನಿರಪರಾಧಿಗಳಾದ ಪ್ರಜೆಗಳು ಕಷ್ಟಗಳಿಗೆ ಗುರಿಯಾಗುವರು ಅಂತಹ ಸಮಯದಲ್ಲಿ ಲಕ್ಷ್ಮಿಯು ಕೋಡಿಯ ನೀರಿನಂತೆ ಹರಿದು ಹೋಗುವಳು. ಜೀರ್ಣವಾದ ಓಲಗರಿಯ ಮನೆಯಂತೆ ಮಂತ್ರಿಗಳ ಮಂತ್ರಶಕ್ತಿಯು ವಿಫಲವಾಗಿ, ಧರ್ಮವಿಮುಖತೆಯಿಂದ ಲೋಕದಲ್ಲಿ ಕ್ಷಾಮಡಾಮರಗಳು ಹೆಚ್ಚುವುವು ಸೇನಾನಾಯಕರು ಗೆದ್ದಲು ಹಿಡಿದ ಕಂಬದಂತೆ ಪ್ರಜೆಗಳ ಕಷ್ಟವನ್ನು ನಿಲ್ಲಿಸಲಾರದೆ, ರಾಜ್ಯದಲ್ಲಿ ಕಳ್ಳಕಾಕರ ದೊಂಬಿಗಳನ್ನೂ ಪರರಾಜರ ಹಾವಳಿಯನ್ನೂ ತಡಿಸಲಾರದೆ, ಕುಸಿದುಬೀಳುವರು ಸ್ವಾಮಿಭಕ್ತಿಸಂಪನ್ನರಾದ ಕೆಲವರು ಆಶ್ರಿತರು ನಂದಿಹೋಗುವ ದೀವಿಗೆಯಂತೆ ಕೆಲಕಾಲ ಶೌರ್ಯವನ್ನು ತೋರಿ ಶಾಂತರಾಗುವರು ತಲೆಕೆಳಗಾಗಿ ನಿಂತು ದುರ್ಗಂಧವನ್ನು ಪಸರಿಸುವ ಕಣ್ಣುಕಪಟಿಗಳಂತೆ ವಂಚಕರು ಹಾರಾಡತೊಡಗುವರು. ಹೊಗೆಯಿಂದ ಮುಸುಕಾದ ದಿವ್ಯಮಣಿಗಳಂತೆ ವಿದ್ಯಾವಂತರೂ ಧರ್ಮಾಧಿಕಾರಿಗಳೂ ತೇಜೋಹೀನರಾಗುವರು ಆಹಾ! ಇವಳ ದುರ್ವರ್ತನೆಯಿಂದ ಈ ರಾಜ್ಯವು ಎಂತಹ ಕಿರುಕುಳಕ್ಕೆ ಒಳಗಾಗಬೇಕಾಯಿತು! ಛೀ! ಛೀ! ಈ ಅಬಲೆಯು ತನ್ನ ಅಂತಸ್ತನ್ನೂ ರಾಜಮರ್ಯಾದೆಯನ್ನೂ ಲೆಕ್ಕಿಸದೆ ಹೋದಳಲ್ಲಾ! ನನ್ನನ್ನೂ ಜಗ್ಗಿಸಿದಳಲ್ಲವೇ! ಎಂತಹ ಸಾಹಸಗಾರ್ತಿ! ಎಷ್ಟರ ಕೆಚ್ಚು! ಸರ್ಪವು ವಿಷಭರಿತವಾಗಿದ್ದರೂ ತಲೆಯ ಮೇಲಣ ರತ್ನದ ಬೆಳಕಿನಿಂದ ಜನರನ್ನು ಮರುಳುಗೊಳಿಸುವಂತೆ ತನ್ನ ಸೌಂದರ್ಯದಿಂದಲೂ ಮಧುರಾಲಾಪದಿಂದಲೂ ನನ್ನನ್ನು ಪಾಪಕೂಪಕ್ಕೆ ತಳ್ಳತೊಡಗಿದಳಲ್ಲವೇ?" ಎಂದು ಮುಂತಾಗಿ ಪಲತೆರದಿಂದ ಚಿಂತಿಸುತ್ತ, ರಾತ್ರಿಯನ್ನೆಲ್ಲ ಕಳೆದು ಮರುದಿನ ಬೆಳಗಾಗುತ್ತಲೇ ತನ್ನ ನಿತ್ಯದ ಚರ್ಯೆಗಳನ್ನು ನೆರವೇರಿಸಿ, ಪ್ರಿಯಮಿತ್ರನಾದ ಬಂಧುಹತ್ತನ ಬಳಿಸಾರ್ದು, ಹಿಂದಣ ದಿನ ನಡೆದ ಸಮಾಚಾರವನ್ನೆಲ್ಲ ಆಮೂಲಾಗ್ರವಾಗಿ ತಿಳಿಸಿ, ಆತನ ಮೂಲಕ ತನ್ನ ಮುಂದಣ ಕರ್ತವ್ಯವೇನೆಂಬುದನ್ನು ಯೋಚಿಸತೊಡಗಿದನು.

ಬಂಧುದತ್ತನಾದರೋ ವಿವೇಕಶಾಲಿ, ಸ್ನೇಹಪಕ್ಷಪಾತಿ, ದೂರಾಲೋಚನಾಪರನು. ಲಕ್ಷಾಧಿಕಾರಿಯಾಗಿದ್ದರೂ ದುರಭಿಮಾನ ಗಂಧವು ಆತನನ್ನು ನೋಂಕಿರಲಿಲ್ಲ ಆತನು ಧರ್ಮಾಭಿಮಾನಿಯೂ, ವಿದ್ಯಾವಂತನೂ, ಸರಳ ಸ್ವಭಾವದವನೂ ಆದುದರಿಂದ ಶೂದ್ರಕನ ಮಾತನ್ನು ಕೇಳಿದೊಡನೆಯೇ ಸ್ವಲ್ಪ ಯೋಚಿಸಿ, ಶೂದ್ರಕನನ್ನು ಕುರಿತು, "ಮಿತ್ರನೆ! ಈಗ ನಮಗೆ ಗ್ರಹ ಗತಿಗಳು ಅನುಕೂಲವಾಗಿ ತೋರುವುದಿಲ್ಲ ಜಾಗರೂಕನಾಗಿರುವುದು ಮೇಲು" ಎಂಬುದಾಗಿ ಎಚ್ಚರಿಸಿದನು

ಅದಕ್ಕೆ ಶೂದ್ರಕನು 'ಮಿತ್ರವರ್ಯನೇ! ಇದರಲ್ಲಿ ಜಾಗರೂಕತೆಯೇನು? ಹೇಗೂ ಭವಿತವ್ಯತೆಯನ್ನು ಮೀರುವುದು ಶಕ್ಯವಲ್ಲ ಧರ್ಮ ಮಾರ್ಗವನ್ನು ಬಿಡದೆ ನಡೆದುಕೊಂಡರಾಯಿತು. ದೈವವು ನಮ್ಮ ಮನೋಧೈರ್ಯವನ್ನು ಪರೀಕ್ಷಿಸುವುದಾದರೆ ನಮ್ಮ ಜಾಗರೂಕತೆಯಿಂದ ಏನಾಗುವುದು? ರತ್ನದಲ್ಲಿ ಕಾಂತಿಯು ಹೆಚ್ಚಬೇಕಾದರೆ ಅದನ್ನು ಸಾಣೆಹಿಡಿದಲ್ಲದೆ ಬೇರೆ ಉಪಾಯವಿಲ್ಲ. ಹಾಗೆ ಸಾಣೆಹಿಡಿಯುವುದರಿಂದ ರತ್ನದ ಸ್ವಲ್ಪ ಭಾಗವು ವ್ಯರ್ಥವಾಗುವುದೇನೋ ನಿಜ ಆದರೆ ಕಾಂತಿಯು ಸೂರ್ಮಡಿಯಾಗುವುದಲ್ಲವೇ? ಸಾಣೆ ಹಿಡಿದ ರತ್ನವು ಲೋಕರಂಜಕವೆನಿಸದೇ? ದೈವವು ನಮಗೆ ಮೇಲ್ಮೆಯನ್ನುಂಟುಮಾಡಲಿ" ಎಂಬುದಾಗಿ ಉತ್ತರ ಕೊಟ್ಟನು.

ಹೀಗೆಯೇ ಸ್ವಲ್ಪ ಹೊತ್ತು ಅಲ್ಲಿಯೇ ಸಂಭಾಷಿಸುತ್ತಿದ್ದು, ಅಲ್ಲಿಂದ ಹೊರಟು ರಾತ್ರಿಯ ನಾಟಕವನ್ನು ನೋಡಿದ ನಿದ್ದೆಗೇಡಿಯಂತೆಯೂ, ಜನ್ಮಾಂತರ ಸ್ಮರಣೆಯನ್ನು ಪಡೆದ ಯೋಗಿಯಂತೆಯೂ ಮೈಮೇಲೆ ಸ್ಮರಣೆಯಿಲ್ಲದ ಉನ್ಮತ್ತನಂತೆಯೂ ಅತ್ತಿತ್ತ ನೋಡದೆ ಬೀದಿಯಲ್ಲಿ ಅಲೆದಾಡಿ, ಪಟ್ಟಣದ ಹೊರಕ್ಕೆ ಹೋಗಿ, ಹಿಂದೆ ತಾನು ಬಂಡೆಯನ್ನು ಉರುಳಿಸಿದ್ದ ಬೆಟ್ಟದ ಸ್ಥಳಕ್ಕೆ ಸ್ವಲ್ಪ ದೂರದಲ್ಲಿ ನಡೆದು ಬರುತ್ತಿದ್ದನು ಅದೇ ಬಂಡೆಯ ಮೇಲೆ ಕುಳಿತಿದ್ದು ಏಕಾಂತವಾಗಿ ಏನನ್ನೋ ಯೋಚಿಸುತ್ತಿದ್ದ ಚಂಡಸಿಂಹನೂ ಸಂಘಿಲಕನೂ ಶೂದ್ರಕನನ್ನು ನೋಡಿ, ಕೂಡಲೇ ತಮ್ಮ ಮುಖಭಾವವನ್ನು ಮಾರ್ಪಡಿಸಿಕೊಂಡು, ಮಿತ್ರರಂತೆ ನಟಿಸುತ್ತ, ಎದ್ದು ನಿಂತು ಶೂದ್ರಕನನ್ನು ಹತ್ತಿರ ಕರೆದು, "ಏನಯ್ಯಾ! ಎಷ್ಟು ಹೊತ್ತಿನಿಂದ ನಮ್ಮನ್ನು ಹುಡುಕುತ್ತಿರುವೆ? ನಾವು ನಿನ್ನ ಕಣ್ಣಿಗೆ ಮಣ್ಣೆರಚಿ ಅದೃಶ್ಯರಾಗಿ ಸಂಚರಿಸಬಲ್ಲೆವು" ಎಂಬುದಾಗಿ ಹೇಳಿದರು.

ಆಗ ಶೂದ್ರಕನು "ನಿಮಗೇನು? ಎಲ್ಲೆಲ್ಲಿಯೂ ನೀವೇ ಆದರೆ ನನಗೆ ನಿಮ್ಮನ್ನು ಹುಡುಕುವ ಅವಶ್ಯಕತೆಯೇ ಇಲ್ಲ. ಹೊಳಪಿನ ಮಣಿಯನ್ನು ಹುಡುಕುವರಲ್ಲದೆ ಬಳಪದ ಕಲ್ಲನ್ನು ಹುಡುಕುವರಾರು?" ಎಂದನು.

"ಎಲೋ! ನಾವು ಕಲ್ಲುಗಳಾದರೆ ನೀನು ಚೇಳು. ಕೊಂಡಿಯನ್ನೆತ್ತಿ ತಿರುಗುವ ಚೇಳಿನ ಮೇಲೆ ಕಲ್ಲು ಬಿದ್ದರೆ ಏನಾಗುವುದೆಂಬುದನ್ನು ಬಲ್ಲೆಯಾ?" ಎಂಬದಾಗಿ ಸಂಘಿಲಕನು ಮಾರ್ುತ್ತರವನ್ನು ಕೊಟ್ಟನು.

ಅದನ್ನು ಕೇಳಿ ಶೂದ್ರಕನು "ಕಲ್ಲು ಎತ್ತುವಷ್ಟು ಶಕ್ತಿ ಇದ್ದರಲ್ಲವೇ? ಜಡಪದಾರ್ಥವಾದ ಕಲ್ಲು ತಾನಾಗಿಯೇ ಕದಲ ಲಾರದಷ್ಟೆ! ಒಂದು ವೇಳೆ ಹಾಗೆ ಕೊಂದರೂ ಸತ್ತ ಚೇಳು ಸಾವಿರಾರು ಚೇಳುಗಳಾಗಿ ಕಲ್ಲಿನ ಅಡಿಯಲ್ಲಿಯೇ ಅಡಗಿದ್ದು ಸಮಯ ಬಂದಾಗ ತನ್ನ ಮುಳ್ಳಿನ ಮಹಿಮೆಯನ್ನು ತೋರುವುದು. ಚೇಳಾದರೇನು? ಸಾಮಾನ್ಯ ವೆನ್ನಬೇಡ. ನೀವು ಆ ಬಂಡೆಯಿಂದ ಬಂದವರಾದುದರಿಂದ ನೀವೂ ಆ ಜಾತಿಯವರೋ ಏನೋ ಎಂಬುದಾಗಿ ಭ್ರಾಂತಿಗೊಂಡಿದ್ದೆನು. ಆದರೆ ನೀವು—ಅಸಹಾಯ ಶೂರರು—ಅವತಾರ ಪುರುಷರು" ಎಂದನು.

ಆಗ ಶಕಾರನು ಅಟ್ಟಹಾಸ ಮಾಡುತ್ತ, "ಎಲೋ! ಚೆನ್ನಾಗಿ ಹೇಳಿದೆ. ನೀನೇ ಅವತಾರ ಪುರುಷನಾದುದರಿಂದ ನಿನ್ನನ್ನೇ ಮೆರೆವಣಿಗೆ ಮಾಡಬೇಕೆಂದಿರುವೆವು" ಎನ್ನಲು, ಸಂಘಿಲಕನು ಅಲ್ಲಿಗೆ ಬಂದು, ಶೂದ್ರಕನನ್ನು ಕುರಿತು "ಮಿತ್ರ! ಅದೆಲ್ಲಾ ಹಾಗಿರಲಿ ಹಿಂದೆ ನೀನು ಬಂಡೆಯನ್ನು ಉರುಳಿಸಿದೆಯಲ್ಲವೇ! ಅದರ ಅಡಿಯಲ್ಲಿ ಮನೋಹರವಾದ ಒಂದು ಬಿಲವಿರುವುದು. ಆದಿನ ಕತ್ತಲಾದ ಕಾರಣ ನಮಗೆ ಕಾಣಿಸಲಿಲ್ಲ; ಈಗ ಚೆನ್ನಾಗಿ ಕಾಣುತ್ತಿದೆ. ಬಾ, ನೋಡುವೆಯಂತೆ" ಎಂದು ಕರೆದನು. ಮೂವರೂ ಅಲ್ಲಿಗೆ ಹೋದರು. ಸಂಘಿಲಕನು ಮೊದಲು ಇಣಿಕಿ ನೋಡಿ ಇದರಲ್ಲಿ ದೊಡ್ಡ ನಿಧಿಯಿರಬಹುದೆಂದನು ಬಳಿಕ ಮೂವರೂ ಇಣಿಕಿ ನೋಡಿದರು. ಶೂದ್ರಕನು ಅದು ಬಹಳ ಆಳವಾಗಿರುವುದು! ಇದೇನು ಪಾತಾಳ ಲೋಕದ ದಾರಿಯೋ ನರಕದ ಬಿಲವೋ ತಿಳಿಯಲಳವಲ್ಲ" ಎಂದನು. ಬಳಿಕ ಮೂವರೂ ಮತ್ತಷ್ಟು ಕುತೂಹಲದಿಂದ ನೋಡತೊಡಗಿದರು. ಒಳಗಡೆ ಕಗ್ಗತ್ತಲೆಯು ಕವಿದಿದ್ದಿತು. ಪರಿಮಳವನ್ನು ಸೂಸುವ ಗಾಳಿಯು

ಹೊರಬರುತ್ತಿರುವುದೆಂಬುದಾಗಿ ಶೂದ್ರಕನು ಚೆನ್ನಾಗಿ ಪರೀಕ್ಷಿಸಿ ಹೇಳಿದನು. ಸಂಘಿಲಕನು ಪರಿಹಾಸ ಮಾಡುತ್ತ ಅದೆಲ್ಲವೂ ಬರಿಯ ಭ್ರಾಂತಿಯೆಂದನು. ಶೂದ್ರಕನು ಸಂಘಿಲಕನನ್ನು ಅದರ ಪಕ್ಕಕ್ಕೆ ಸೆಳೆದು ಚೆನ್ನಾಗಿ ಮೂಸಿ ನೋಡೆಂದು ಹೇಳಿ, ಅವನ ತಲೆಯನ್ನು ಕೆಳಕ್ಕ ಬಗ್ಗಿಸಿದನು. ಸಂಘಿಲಕನು ಹೆದರಿ, "ಅಯ್ಯೋ! ಸತ್ತೆ! ಇನ್ನೇನು ಗತಿ?" ಎಂದು ಕಿರಚುತ್ತ ಮೆಲ್ಲನೆ ಮೇಲಕ್ಕೆ ಎದ್ದು ನಿಂತು, ಚಂಡಸಿಂಹನಿಗೆ ಸಂಜ್ಞೆ ಮಾಡಲಾಗಿ "ಅಯ್ಯಾ! ನೀನೇ ಇಳಿದು ನೋಡಿ ಬಾ!" ಎನ್ನುತ್ತ ತಲೆಬಾಗಿಸಿ ಬಿಲದೊಳಗೆ ನೋಡುತ್ತಿದ್ದ ಶೂದ್ರಕನನ್ನು ಆ ಬಿಲದೊಳಗೆ ತಳ್ಳಿ, ಮರಳಿ ಹೊರಬಾರದಂತೆ ಮೇಲ್ಗಡೆಯಲ್ಲಿ ಒಂದು ದೊಡ್ಡ ಬಂಡೆಯನ್ನು ಉರುಳಿಸಿ ಬಿಲದ ಬಾಯಿಗೆ ಅಡ್ಡವಾಗಿರಿಸಿ, ತಮ್ಮ ಪ್ರತಿಭಟನು ಅನಾಯಾಸವಾಗಿ ಮಡಿದನೆಂಬ ಸಂತಸದಿಂದ ತಮ್ಮ ಕೀರ್ತಿಪ್ರತಾಪಗಳನ್ನು ಹೊಗಳಿಕೊಳ್ಳುತ್ತ, ಸಂಜೆಯಾಗಿದ್ದುದರಿಂದ ದೈವವು ತಮ್ಮ ಕಾರ್ಯಕ್ಕೆ ಅನುಕೂಲವಾಯಿತೆಂಬ ಸಂತೋಷದಿಂದ ಉಕ್ಕುತ್ತ, ಯಾರಿಗೂ ತಿಳಿಯದೆ ಮೆಲ್ಲನೆ ತಮ್ಮ ತಮ್ಮ ಮನೆಗಳನ್ನು ಸೇರಿಕೊಂಡರು

ಶೂದ್ರಕನು ಅಲ್ಲಿಂದ ಸುಮಾರು ೫೦ ಅಡಿಗಳಷ್ಟು ಕೆಳಗೆ ಧೊಪ್ಪನೆ ಬಿದ್ದನು ಬಿದ್ದವನು ತೇವವಾಗಿದ್ದ ಮರಳಿನ ಮೇಲೆ ಪ್ರಜ್ಞೆಯಿಲ್ಲದೆ ಬಿದ್ದನು. ಸ್ವಲ್ಪ ಹೊತ್ತಿನ ಮೇಲೆ ಅಲ್ಲಿಯ ಸುರಭಿಶೀತಲವಾದ ಮಂದಮಾರುತದಿಂದ ಚೇತರಿಸಿಕೊಂಡು ಸುತ್ತಲೂ ನೋಡಿದನು ಕಗ್ಗತ್ತಲು ಹೊರತು ಏನೂ ಕಾಣಿಸಲಿಲ್ಲ ಸಂಘಿಲಕಶಕಾರರ ದುರುಳತನವನ್ನು ನೆನೆನೆನೆದು ಅಸೂಯೆಯು ಧರ್ಮಪ್ರವಾಹವನ್ನು ಹೇಗೆ ಅಡ್ಡಗಟ್ಟುತ್ತದೆ, ಕುಟಿಲತನವು ಮಿಂಚಿನಂತೆ ಹೇಗೆ ಹರಡಿಕೊಳ್ಳುತ್ತದೆ ಎಂಬುದನ್ನು ಯೋಚಿಸುತ್ತ, ಬಾಲಮೈತ್ರಿಯು ಮರಣಾಂತದ ವರೆಗಿನ ಬಲವತ್ತರವಾದ ಪಾಶಬಂಧವೆಂಬ ಲೋಕೋಕ್ತಿಯು ಸುಳ್ಳಾಯಿತಲ್ಲಾ — ಎಂಬುದಾಗಿ ಚಿಂತಿಸುತ್ತ, ತನ್ನನ್ನು ಬಿಲದೊಳಗೆ ತಳ್ಳಿದ ಇವರ ಕಪಟೋಪಾಯವು ಇವರ ಕೃತ್ಯವೇ ಅಥವಾ ನಿರಾಶೆಯಿಂದ ವಿರಕ್ತಿಯನ್ನು ಪಡೆದ ಆ ಅಬಲೆಯ ಸಾಹಸಪ್ರಯುಕ್ತವೇ ಎಂಬುದಾಗಿ ಸಂಶಯಪಡುತ್ತ, ಬೇರಿಲ್ಲದ ಲೋಕಾಪವಾದವು ಆಲದ ಬೀಳಲಿನಂತೆ ಹರಡಿ ಭೂಮ್ಯಂತರಿಕ್ಷಗಳನ್ನು ವ್ಯಾಪಿಸಿದಲ್ಲಿ ಅಸೂಯೆಯೆಂಬ ಭೂತಗಳಿಗೂ, ವಂಚನೆಯೆಂಬ ಬೇತಾಳನಿಗೂ,

ಕಾಮವೆಂಬ ಪಿಶಾಚಕ್ಕೂ, ಲೋಭವೆಂಬ ಡಾಕಿನಿಗೂ ಆಶ್ರಯವೆನಿಸಿ, ಸಾಧುಜನಭಯಂಕರವಾಗುವುದೋ ಎಂಬುದಾಗಿ ಹಲುಬುತ್ತ, ಭಗವಂತನ ಮಾಯಾವಿಲಾಸವೆನಿಸಿದ ಜಗತ್ತಿನ ಸೃಷ್ಟಿ, ಸ್ಥಿತಿ, ಲಯಗಳು ಅಣುಮಾತ್ರವಾದ ಮನುಷ್ಯನ ಬುದ್ಧಿಗೆ ತಿಳಿಯು ಶಕ್ಯವಲ್ಲವೆಂಬುದಾಗಿ ಪರಿತಪಿಸುತ್ತ, ಮಿಂಚಿನ ಬಳ್ಳಿಯಂತೆ ನಿಮಿಷನಿಮಿಷಕ್ಕೂ ಹುಟ್ಟಿ ಮಾಯವಾಗುವ ಸಂಕಲ್ಪವಿಕಲ್ಪಗಳಿಂದ, ಎದ್ದು ನಿಂತು, ಕುರುಡನಂತೆ ಸುತ್ತಲೂ ತಡವರಿಸುತ್ತ, ಬುದ್ಧಿಶಾಲಿಯಾಗಿದ್ದರೂ ಶಕ್ತಿಹೀನನಂತೆಯೂ, ಸಾಹಸಿಕನಾಗಿದ್ದರೂ ಅಬಲಾಸಮಾನನಾಗಿಯೂ, ನಿರೋಗಿಯಾಗಿದ್ದರೂ ಚಲನಸಾಮರ್ಥ್ಯವಿಲ್ಲದವನಾಗಿಯೂ, ವಿದ್ಯಾವಂತನೆನಿಸಿದ್ದರೂ ಆತ್ಮಪರಭೇದಜ್ಞಾನಶೂನ್ಯನಾಗಿಯೂ, ಎಲ್ಲಿ ಕಾಲೂರಿದರೆ ಏನು ಗತಿಯೋ, ಯಾವ ಪಾತಾಳದಲ್ಲಿ ಬಿದ್ದು ಹೋಗುವೆನೋ, ಯಾವ ಮಹಾಸರ್ಪಗಳ ಫಣಾಮಣಿಗಳನ್ನು ತುಳಿಯುವೆನೋ ಎಂಬುದಾಗಿ ಹಂಬಲಿಸುತ್ತ, ಯಾವುದನ್ನೂ ತಿಳಿಯದೆ ಅತ್ತಿತ್ತ ಅಲುಗದೆ ಸ್ವಲ್ಪ ಹೊತ್ತು ಸುಮ್ಮನಿದ್ದನು ಬಳಿಕ ಧೈರ್ಯವನ್ನು ತಳೆದು ಎರಡು ತೋಳುಗಳನ್ನು ಚಾಚಿ ತಡವರಿಸುತ್ತ, ಕಯ್ಯಲ್ಲಿ ಒಂದು ಕೋಲಾದರೂ ಇಲ್ಲವಾಯಿತಲ್ಲಾ ಎಂಬುದಾಗಿ ತನ್ನ ಸ್ಥಿತಿಯನ್ನು ನಿಂದಿಸುತ್ತ, ಹೆಜ್ಜೆಯ ಮೇಲೆ ಹೆಜ್ಜೆಯನ್ನಿಡುತ್ತ ಮೆಲ್ಲಗೆ ನಡೆಯ ತೊಡಗಿದನು. ನೆಲದಲ್ಲಿ ಎಲ್ಲಿಯೂ ಕಲ್ಲುಗಳಿದ್ದಂತೆ ತೋರಲಿಲ್ಲ ಎಲ್ಲೆಲ್ಲಿಯೂ ಮರಳೇ ಕಾಲಿಗೆ ತಗಲುತ್ತಿದ್ದಿತು. ಶೀತಲವಾದ ಗಾಳಿಯೇ ಬೀಸುತ್ತಿದ್ದಿತು. ಅಂಧಕಾರಮಯವಾಗಿದ್ದರೂ ಹೆದರಿಕೆಯು ತಲೆದೋರಲಿಲ್ಲ. ಹೃದಯವು ಕ್ರಮವಾಗಿ ಪ್ರಸನ್ನವಾಗುತ್ತ ಬಂದಿತು ಇದರಿಂದ ಹೇಗಾದರೂ ಇದರ ಗುಟ್ಟನ್ನು ತಿಳಿಯದಿದ್ದರೆ ಮನುಷ್ಯನಾಗಿ ಹುಟ್ಟಿ ಫಲವೇನು? ವಿವೇಕವೆಂಬ ಬಾಣಕ್ಕೆ ಗುರಿಯಾವುದು? ವಿದ್ಯಾಪ್ರವಾಹಕ್ಕೆ ಪಾತ್ರವಾವುದು? ಭಗವಂತನ ವಿಚಿತ್ರಸಂವಿಧಾನ ಶಕ್ತಿಯನ್ನು ತಿಳಿಯುವ ಬಗೆ ಹೇಗೆ?—ಎಂಬುದಾಗಿ ಯೋಚಿಸುತ್ತ ಮೆಲ್ಲಗೆ ಸರಿಯತೊಡಗಿದನು. ಸ್ವಲ್ಪ ದೂರ ಹೀಗೆ ನಡೆದ ಬಳಿಕ, ಇದು ಮನುಷ್ಯನಿರ್ಮಿತವಾದ ಸುರಂಗಮಾರ್ಗವಲ್ಲದೆ ದೇವಕಲ್ಪಿತವಲ್ಲ ಈ ಹಾದಿಯು ಯಾವುದೋ ಒಂದು ಸರೋವರದ ಅಥವಾ ನದಿಯ, ಇಲ್ಲವೆ ಉದ್ಯಾನದ, ಅಥವಾ ಅರಮನೆಯ ಸಮೀಪಕ್ಕೆ ಹೋಗಿ ಸೇರುವುದೆಂಬುದಾಗಿ ನಿಶ್ಚಯಿಸಿ, ಪರ್ವತದಿಂದ ಒಸರುವ ನೀರಿನಿಂದಲೇ ನೆಲವು ತೇವವಾಗಿರ

ಬೇಕೆಂತಲೂ, ಇದೆಲ್ಲವೂ ಸಂಘಿಲಕಚಂಡಸಿಂಹರ ಈರ್ಷ್ಯಾಫಲವಾಗಿದ್ದರೂ ಅದೃಷ್ಟದ ಹಾದಿಯನ್ನು ತೋರುವ ಭಗವದ್ವಿಲಾಸವೆಂತಲೇ ಭಾವಿಸಿ, ಮುಂದೆ ಮುಂದೆ ನಡೆಯತೊಡಗಿದನು

ಸೃಷ್ಟಿಯ ವೈಚಿತ್ರ್ಯವನ್ನು ಬಣ್ಣಿಸುವುದು ಯಾರಿಗೂ ತರವಲ್ಲ ಮನುಷ್ಯನು ತನ್ನ ಅವಸ್ಥೆಗಳಿಗೆ ತಕ್ಕಂತೆಯೇ ಒಂದೊಂದು ಪ್ರತೀಕಾರವನ್ನು ಕಲ್ಪಿಸುತ್ತ ಸೃಷ್ಟಿ ವೈಚಿತ್ರ್ಯಕ್ಕೆ ತಕ್ಕಂತೆಯೇ ನಡೆದುಕೊಳ್ಳುವನಲ್ಲವೇ? ಅಂತಹ ಗಾಢಾಂಧಕಾರದಲ್ಲಿಯೂ ನಡೆದು ಬಂದ ಹಾಗೆಲ್ಲ ಕಣ್ಣುಗಳು ಕಾಣದಿದ್ದರೂ ಹಾವು, ಬೆಕ್ಕು, ಗೂಬೆಗಳಂತೆಯೇ ಶೂದ್ರಕನೂ ನಡೆಯುತ್ತ, ಸ್ವಲ್ಪ ಸ್ವಲ್ಪವಾಗಿ ಧೈರ್ಯವನ್ನು ತಳೆದು ನಿರ್ಭಯನಾಗಿ ಮುಂದರಿಸುತ್ತಿದ್ದನು. ಹೀಗೆಯೇ ಸುಮಾರು ಒಂದೆರಡು ಮೈಲಿಗಳಷ್ಟು ದೂರ ನಡೆದು ಬರುವಲ್ಲಿ ತನ್ನ ಮೇಲ್ಭಾಗದಲ್ಲಿ ಭೂಮಿಯ ಮೇಲೆ ರಥಗಳ ಸಂಚಾರದ ಚೀತ್ಕೃತಿಯೂ ಕುದುರೆಗಳ ಖುರಪುಟದ ರಭಸವೂ ಜನಗಳು ಮಾತನಾಡುವ ಅವ್ಯಕ್ತಧ್ವನಿಯೂ ಕೇಳಿಸಿತು. ಇದರಿಂದ ಅವನು ಆಗ ನಗರದ ಮಧ್ಯಭಾಗದಲ್ಲಿ ಯಾವುದೋ ಒಂದು ಬೀದಿಯ ಅಡಿಯಲ್ಲಿ ಇರುವುದಾಗಿ ತಿಳಿದನು ಇಂತೆಯೇ ಸ್ವಲ್ಪದೂರ ನಡೆಯಲಾಗಿ ಎಡಗಡೆ ಒಂದು ಬಾಗಿಲು ಇರುವಂತೆ ತೋರಿತು. ಕಯ್ಗಳಿಂದ ತಡವಿ ತೆರೆಯನೋಡಿದನು. ಅದು ಕಬ್ಬಿಣದ ಸಲಾಕೆಗಳಿಂದ ಬಿಗಿದಿರುವಂತೆ ತೋರಿ ಅವನು ವಿಫಲಪ್ರಯತ್ನನಾಗಿ ಇನ್ನೂ ಸ್ವಲ್ಪ ಮುಂದೆ ಹೋಗುವಾಗ ಸಣ್ಣ ಕಾಲು ಹಾದಿಯು ಬಲಗಡೆ ಕಾಣಿಸಿತು. ಎಲ್ಲಿಂದಲೋ ಬೆಳಕು ಕಾಣುತ್ತಿದ್ದಿತು. ತಂಗಾಳಿಯೂ ಬೀಸುತ್ತಿದ್ದಿತು. ಅಲ್ಲಿಯೇ ಸ್ವಲ್ಪಕಾಲ ನಿಂತು ಉಸಿರಾಡಿಸಿಕೊಂಡು ಯಾವ ಮಾರ್ಗದಲ್ಲಿ ಹೋಗುವುದು ಶ್ರೇಯಸ್ಕರವೆಂಬುದಾಗಿ ಯೋಚಿಸತೊಡಗಿ, ಕಾಲುಹಾದಿಯನ್ನು ಬಿಟ್ಟು ಮುಂದರಿಸಿದನು. ಅಲ್ಲಿ ಘನಸಾರಪರಿಮಳಮಿಳಿತವಾದ ಮಲ್ಲಿಕಾಕುಸುಮಗಳ ಸುವಾಸನೆಯು ತುಂಬಿದ್ದಿತು. ಯಾವುದಾದರೂ ಘಟಸರ್ಪವಿರುವುದೋ ಎಂಬುದಾಗಿ ಸಂದೇಹಪಟ್ಟು ನಿಂತುಬಿಟ್ಟನು. ಅಷ್ಟರಲ್ಲಿ ಘಂಟಾನಾದವು ಇವನ ಸಂದೇಹವನ್ನು ದೂರಮಾಡಿತು. ಮಹಾಕಾಳೇಶ್ವರನ ಸ್ಮರಣೆಯುಂಟಾಯಿತು. ಧೈರ್ಯದಿಂದ ಮುಂದೆ ನಡೆಯ ತೊಡಗಿದನು. ಅಗರು, ಧೂಪ, ಯಕ್ಷಕರ್ದಮಗಳ ಹೊಗೆಯ ವಾಸನೆಯು ಸ್ವಲ್ಪಸ್ವಲ್ಪವಾಗಿ

ಗಾಳಿಯಲ್ಲಿ ಹರಿಯುತ್ತಿದ್ದಿತು. ಇಂತೆಯೇ ಹತ್ತು ಮಾರು ದೂರ ನಡೆ ಯುವಷ್ಟರಲ್ಲಿ ಅಕಸ್ಮಾತ್ತಾಗಿ ದೊಡ್ಡ ಬೆಳಕು ತೋರಿತು ಇದೇನು? ಮಹಾಶೇಷನ ಫಣಾಮಣಿಗಳ ಕಾಂತಿಯೋ? ಇಲ್ಲವೇ ನಿಜವಾಗಿಯೂ ಬಿಲದಿಂದ ತೋರುವ ಬೆಳಕೋ? ಎಂಬುದಾಗಿ ದಿಗ್ಭ್ರಮೆ ಹಿಡಿದವನಂತೆ ಕೆಲಕಾಲ ಅಲ್ಲಿಯೇ ನಿಂತು ಯೋಚಿಸಿ, ತಾನು ಇರುವ ಪ್ರದೇಶವು ಯಾವು ದೆಂಬುದಾಗಿ ತಿಳಿಯದ ಕಾರಣ ಗೋಡೆಗೆ ಆತು ನಿಂತು, ಸುತ್ತಲೂ ನೋ ಡುವಲ್ಲಿ ಆ ಬೆಳಕು ದೀಪದ ಕಾಂತಿಯೆಂಬುದು ಸ್ಪಷ್ಟವಾಯಿತು ಬಳಿಕ ಧೈರ್ಯವನ್ನು ತಳೆದು ಸ್ವಲ್ಪವೂ ಅಡಿಯುಸಪ್ಪಳವಾಗದಂತೆ ಮುಂದೆ ನಡೆದು ಬರುವಲ್ಲಿ ಒಂದು ಗವಾಕ್ಷವು ಕಾಣಿಸಿತು. ಇದು ಯಾರ ನೆಲಮಾಳಿ ಗೆಯೋ, ತನ್ನನ್ನು ಕಂಡರಾದರೆ ಯಾವ ವಿಪತ್ತು ಸಂಭವಿಸುವುದೋ, ಎಂಬುದಾಗಿ ಭಯದಿಂದ ಎದೆಗುಂದಿದ್ದರೂ ಕುತೂಹಲದಿಂದ ಆ ಕಿಟಕಿಯು ಪಕ್ಷದಲ್ಲಿ ಓರೆಯಾಗಿ ನಿಂತು ಇಣಿಕಿನೋಡಿದನು ಒಡನೆಯೇ ಕಣ್ಮನಗಳೆ ರಡೂ ಆನಂದಸಾಗರದಲ್ಲಿ ಓಲಾಡತೊಡಗಿದುವು ಮಹಾಕಾಳಿಯ ಬಿಂಬವು ದೃಷ್ಟಿಗೋಚರವಾಯಿತು. ತನ್ನ ಶ್ರಮವು ಸಫಲವಾಯಿತೆಂದು ಹಿಗ್ಗಿ ದನಾದರೂ ಭಗವತಿಯ ಗರ್ಭಗೃಹದ ಹಿಂಭಾಗದಲ್ಲಿ ತಾನು ನಿಂತಿರುವ ಕಾರಣ ದೇವಿಯ ಮಂದಿರದ ಹೆಬ್ಬಾಗಿಲನ್ನು ಹೊಂದುವುದಕ್ಕೆ ದಾರಿ ತಿಳಿಯದೆ ಅಲ್ಲಿಯೇ ನಿಂತು, 'ಈಗ ನಾನು ಹೊರಬೀಳುವ ಬಗೆ ಹೇಗೆ? ಸುರಂಗಮಾರ್ಗವನ್ನು ನಿರ್ಮಿಸಿದವರು ಹೊರಗಡೆಗೆ ಹೋಗುವ ಹಾದಿ ಯನ್ನೂ ಮಾಡದಿರುವರೇ? ಒಂದು ವೇಳೆ ಇಲ್ಲಿಯೇ ಎಲ್ಲಿಯಾದರೂ ಗುಪ್ತ ಮಾರ್ಗವು ಇರುವುದೇ?' ಎಂದು ಮುಂತಾಗಿ ಯೋಚಿಸುತ್ತಿರುವಲ್ಲಿ ಧೇವೀ ಮಂದಿರದ ಘಂಟಾನಾದವು ಇನ್ನೂ ಸ್ಪಷ್ಟವಾಗಿ ಕೇಳಿಸಿತು. ಬೀದಿಗಳಲ್ಲಿ ಜನಗಳ ಸಂಚಾರವಾಗಲಿ, ರಥಚಕ್ರಗಳ ಸಪ್ಪಳವಾಗಲಿ ಮುಂಚಿನಂತೆ ಈಗ ಕೇಳಬರುತ್ತಿರಲಿಲ್ಲ. ಹತ್ತಾರು ನಿಮಿಷಗಳಿಗೊಮ್ಮೆ ಮಾತ್ರವೇ ಯಾರೋ ಒಬ್ಬರಿಬ್ಬರು ಮಾತನಾಡಿಕೊಂಡು ಮೇಲ್ಗಡೆ ನಡೆದುಹೋಗುವಂತೆ ಭಾಸ ವಾಗುತ್ತಿದ್ದಿತು. ಆಗ ಸುಮಾರು ಮಧ್ಯರಾತ್ರಿಯಾಗಿರಬಹುದೆಂದು ಊಹಿಸಿದನು. ಅದೂ ಒಂದು ಉಪಕಾರವೇ ಎಂಬುದಾಗಿ ಭಾವಿಸಿ, ಅಷ್ಟು ಹೊತ್ತಿನ ವರೆಗೂ ಆ ಗುಹೆಯಲ್ಲಿಯೇ ತೊಳಲಿಬಳಲಿದ್ದ ಕಾರಣ ಕಾಲುಗಳು ಕುಸಿಬೀಳಲು ಅಲ್ಲಿಯೇ ಕುಳಿತುಬಿಟ್ಟನು. ನಡುಗವಿಯಲ್ಲಿ

ಕಂಡುಬಂದ ಸೀಳುದಾರಿಯು ಎಲ್ಲಿಗೆ ಹೋಗುವುದು? ಅದಕ್ಕಿಂತ ಮುಂಚಿತವಾಗಿ ಕಾಣಿಸಿದ ಕಬ್ಬಿಣದ ಬಾಗಿಲನ್ನು ತೆರೆದರೆ ಅಲ್ಲಿ ಏನಿರ ಬಹುದು? ಬಲಾತ್ಕಾರದಿಂದ ಆ ಬಾಗಿಲನ್ನು ತೆರೆಯತೊಡಗಿದೆನಾದರೆ, ಸುಲಭವಾಗಿ ಬಂದರಂತೂ ಸರಿ, ಅರ್ಧರಾತ್ರಿಯಾಗಿರುವುದರಿಂದ ಎಷ್ಟೇ ಸ್ವಲ್ಪವಾದ ಸಪ್ಪಳವಾದರೂ ಪ್ರಮಾದವಲ್ಲವೇ? ಪುರಪಾಲಕಭಟರು ಯಮದೂತರಿಗಿಂತಲೂ ಜಾಗರೂಕರಾಗಿರುವರು. ಇಲ್ಲಿಯೇ ಕುಳಿತು ಕಾಲಹರಣ ಮಾಡಿದರೆ ಉಷಃಕಾಲದಲ್ಲಿಯೇ ಎದ್ದು ತಮ್ಮ ಸ್ನಾನಾದಿಗಳಿಗಾಗಿ ನದಿಗೆ ತಂಡತಂಡವಾಗಿ ತೆರಳುವ ಬ್ರಾಹ್ಮಣರ ಕಣ್ಣಿಗ ಬಿದ್ದರೆ ನಾನು ಆಗ ಮಾಡತಕ್ಕದ್ದೇನು?" ಎಂಬುದಾಗಿ ಯೋಚಿಸುತ್ತಿದ್ದನು.

ಅಷ್ಟರಲ್ಲಿ ದೇವೀಮಂದಿರದ ಹೆಬ್ಬಾಗಿಲಿನ ಕಿರು ಗಂಟೆಗಳ ಧ್ವನಿಯು ಕೇಳಿಸಿತು. ಅರ್ಚಕರು ಬೀಗ ಮುದ್ರೆಯನ್ನು ಹಾಕಿ ಮನೆಗೆ ಹೊರಡುವುದು ಗೊತ್ತಾಯಿತು ಈಗ ನಡು ರಾತ್ರಿಯೆಂದು ತಿಳಿದು ಧೈರ್ಯವಾಗಿ ಎದ್ದು ನಿಂತು ಗವಾಕ್ಷದ ಮಾರ್ಗವಾಗಿ ನೋಡಿದನು. ಗರ್ಭಗೃಹದಲ್ಲಿ ದೀಪವು ಜಾಜ್ವಲ್ಯಮಾನವಾಗಿದ್ದಿತು. ಪೂಜೋಪಕರಣಗಳ ಪರಿಮಳವು ತನ್ನನ್ನು ಒಳಗೆ ಬರಲು ಆತುರದಿಂದ ಆಹ್ವಾನಮಾಡುವಂತೆ ತೋರಿತು ಬೆಳಕು ಚೆನ್ನಾಗಿ ಬೀಳುತ್ತಿದ್ದ ಕಾರಣ ಧೈರ್ಯದಿಂದ ಸುತ್ತಲೂ ಪರಿಕಿಸಿದನು. ಒಂದು ಕಬ್ಬಿಣದ ಬಾಗಿಲು ಕಾಣಿಸಿತು. ಅದರ ಅಗಳಿಯನ್ನು ತೆಗೆದು ಕೂಡಲೇ ಗರ್ಭಗೃಹವನ್ನು ಹೊಕ್ಕನು. ಆನಂದಪರವಶನಾಗಿ ದೇವಿಯ ಇದಿರಿನಲ್ಲಿ ಸಾಷ್ಟಾಂಗವೆರಗಿ ನಿಂತು ಮನವಾರೆ ಹೊಗಳಿದನು ಭಗವತಿಯು ತನಗೆ ಅಭಯವಿತ್ತಂತೆಯೂ, ತನ್ನ ಹಗೆಗಳನ್ನೆಲ್ಲ ತಾನೇ ನಿರ್ಮೂಲಗೊಳಿಸಲು ವಾಗ್ದಾನವಿತ್ತಂತೆಯೂ, ತನ್ನ ಬಳಿಗೆ ಬಂದು ತನ್ನನ್ನು ಮೈದಡವಿ ಸಂತವಿಸಿದಂತೆಯೂ, ಧೈರ್ಯದಿಂದ ಗುಹೆಯನ್ನು ಆಮೂಲಾಗ್ರವಾಗಿ ಪರಿಶೋಧಿಸುವುದು ಮುಂದಣ ಕಾರ್ಯಕ್ಕೆ ಅತ್ಯುತ್ತಮವಾದ ಸಾಧನವೆಂಬುದಾಗಿ ಉಪದೇಶಿಸಿದಂತೆಯೂ ಭಾಸವಾಯಿತು. ಬೇಗನೆ ಅತ್ತಿತ್ತ ನೋಡುವಲ್ಲಿ ಒಂದು ಕಯ್ದೀವಟಿಗೆಯು ಒಂದು ಮೂಲೆಯಲ್ಲಿ ಕಾಣಿಸಿತು. ಅದನ್ನು ಹೊತ್ತಿಸಿದನು. ಅಷ್ಟರಲ್ಲಿ ದೇವಿಯ ಸನ್ನಿಧಾನದಲ್ಲಿ ನಿವೇದಿತವಾಗಿದ್ದ ಭಕ್ಷ್ಯಗಳನ್ನು ಸವಿದು ಮುಂದರಿಸುವಂತೆ ಭಗವತಿಯು ಅಣತಿಯಿತ್ತಂತೆ ಕೇಳಿಸಿತು ಕ್ಷುಧಿತನಾಗಿದ್ದರೂ ಭಯದಿಂದ ದೇವಿಯ ಬಳಿಸಾರ್ದು ಆಕೆಯ ಮೋರೆಯನ್ನೇ ನೋಡುತ್ತ,

ನೈವೇದ್ಯದ ಸ್ವಲ್ಪ ಭಾಗವನ್ನು ಎರಡು ಕಯ್ಗಳಲ್ಲಿಯೂ ತೆಗೆದುಕೊಂಡು ಹಿಂದೆ ಹಿಂದೆ ನಡೆದು ಬಂದು, ಇದಿರಾಗಿಯೇ ದೂರದಲ್ಲಿ ಕುಳಿತು ಆ ಪ್ರಸಾದವನ್ನು ಮೆದ್ದು, ಅಮೃತಸಿಕ್ತನಂತ ದ್ವಿಗುಣಿತವೀರ್ಯೋತ್ಸಾಹ ಬುದ್ಧಿಬಲಯುತನಾಗಿ, ಕಯ್ದೀವಟಿಗೆಯನ್ನು ಹಿಡಿದು ಬಂದ ದಾರಿ ಯಿಂದಲೇ ಹೊರಬಿದ್ದು, ಮುಂಚಿನಂತೆಯೇ ಅಗಳಿಯನ್ನು ಬಿಗಿದು ಹಿಂದಕ್ಕೆ ತೆರಳಿದನು.

ಸ್ವಲ್ಪ ದೂರ ನಡೆದು ಬರುವಲ್ಲಿ ಹಿಂದೆ ತಾನು ನೋಡಿದ್ದ ಸೀಳು ದಾರಿ ಈಗ ಕಾಣಿಸಿತು ಅದರಲ್ಲಿಯೇ ಸ್ವಲ್ಪದೂರ ನಡೆದನು. ಆದರೆ ಗಾಳಿಯು ಬಲವಾಗಿ ಬೀಸುತ್ತಿದ್ದುದರಿಂದ ಅಷ್ಟರಲ್ಲಿಯೇ ಹಿಂದಿರುಗಿ, ಮತ್ತೊಂದು ವೇಳೆ ಅದನ್ನು ನೋಡಿಕೊಳ್ಳಬಹುದೆಂಬುದಾಗಿ ಅಂದು ಕೊಂಡು, ಬಾಗಿಲ ಬಳಿ ಬಂದು ದೀವಟಿಗೆಯ ಬೆಳಕಿನಿಂದ ಚೆನ್ನಾಗಿ ಪರಿಕಿ ಸಿದನು. ಅದು ಕೋಟೆಯ ಬಾಗಿಲಿನಂತೆ ವಿಶಾಲವಾಗಿಯೂ ಎತ್ತರ ವಾಗಿಯೂ ಇದ್ದಿತು. ತೆರೆಯುವುದಕ್ಕೆ ಎಲ್ಲಿಯೂ ಅಗಳಿಯಾಗಲಿ, ಚಿಲ ಕವಾಗಲಿ ಕಾಣಿಸಲಿಲ್ಲ ತೆರೆಯಲು ಸಾಧನವೆಲ್ಲಿಯಾದರೂ ಇದ್ದೇ ತೀರ ಬೇಕೆಂದು ಯೋಚಿಸಿ, ಆ ದೀವಟಿಗೆಯನ್ನು ತೇವದ ಮರಳಿನಲ್ಲಿ ಹೂತು ನಿಲ್ಲಿಸಿ ತನ್ನ ಬಲವನ್ನೆಲ್ಲಾ ಉಪಯೋಗಿಸಿ ಎರಡು ಕಯ್ಗಳಿಂದಲೂ ಬಾಗಿಲನ್ನು ಎಳೆದು ನೋಡಿದನು. ಅದರಿಂದ ಏನೂ ಫಲವಾಗಲಿಲ್ಲ. ಮತ್ತೊಮ್ಮೆ ದೀಪದಿಂದ ಪರಿಕಿಸುವಲ್ಲಿ ಬಲಗಡೆ ಒಂದು ಕೀಲು ಇದ್ದಂತೆ ಕಾಣಿಸಿತು ಅದರ ಮೇಲೆ ಹಿಡಿದಿದ್ದ ಕಿಲುಬು ಇವನು ಮೊದಲು ಬಾರಿ ಎಳೆದಾಗ ಉದುರಿ ಹೋಗಿದ್ದಿತು. ಈಗ ಮರಳಿ ಬಲವಾಗಿ ಎಳೆಯಲು ಬಾಗಿಲು ಸುಲಭವಾಗಿ ತೆರೆಯಿತು ಶೂದ್ರಕನು ಒಳಹೊಕ್ಕು ಅದರ ಕೀಲುಗಳನ್ನು ಚೆನ್ನಾಗಿ ಪರೀಕ್ಷಿಸಿ, ಅದರ ಶಿಲ್ಪನೈಪುಣ್ಯಕ್ಕೆ ಬೆರಗಾಗಿ ಅದರ ಮರ್ಮಗಳನ್ನೆಲ್ಲಾ ಗುರುತಿಸುವಲ್ಲಿ, ಎರಡು ಬಾಗಿಲುಗಳ ಪಕ್ಕಗಳಲ್ಲಿಯೂ ಗರಗಸದಂತಿದ್ದ ಹಲ್ಲುಗಳು ಕಂಡು ಬಂದುವು ಅದರ ಪ್ರಯೋಜನವೇ ನೆಂಬುದಾಗಿ ತಿಳಿದುಕೊಂಡು ಮುಂದೆ ನಡೆಯುವಲ್ಲಿ ಎಡಗಡೆಗೆ ಮತ್ತೊಂದು ದ್ವಾರವು ಕಾಣಿಸಿತು. ಅದರ ಎರಡು ಪಕ್ಕಗಳಲ್ಲಿಯೂ ಚಂದ್ರಕಾಂತ ಶಿಲೆಯ ಜಗಲಿಗಳಿದ್ದುವು ಬಾಗಿಲನ್ನು ಸುಲಭವಾಗಿ ತೆರೆದು, ಭಯ ಸಂತೋಷಗಳು ಒಂದನ್ನೊಂದು ಒತ್ತರಿಸುತ್ತಿದ್ದರೂ ಕರ್ತವ್ಯಶೂನ್ಯನಾಗಿ

ವಿಧಿಯಿಲ್ಲದೆ ಒಳಹೊಕ್ಕನು. ಅದೊಂದು ವಿಶಾಲವಾದ ಭವನ. ಒಳಗಡೆ ನಡೆಯಲಾಗಿ ಇನ್ನೊಂದು ಬಾಗಿಲು ಅದನ್ನು ಸುಲಭವಾಗಿ ತೆರೆದು ನೋಡುವಲ್ಲಿ ಲಕ್ಷಗಟ್ಟಲೆಯ ಚಿತ್ರವಿಚಿತ್ರವಾದ ಆಯುಧಗಳು ಕಾಣ ಬಂದುವು. ಅವು ಆಗ ತಾನೇ ಸಾಣೆಹಿಡಿದುವುಗಳಂತೆ ಮಿನುಗುತ್ತಿದ್ದುವು. ರಾಮರಾವಣಯುದ್ಧದಲ್ಲಿ ಪಾತಾಳಹೋಮವನ್ನು ಮಾಡಿದ ಇಂದ್ರಜಿತ್ತಿನ ಆಯುಧಶಾಲೆಯು ನೆನಪಾಗುತ್ತಿದ್ದಿತು ತಾನು ಅದು ವರೆಗೂ ಕಂಡು ಕೇಳದಿದ್ದು, ಧನುರ್ವೇದದಲ್ಲಿ ವರ್ಣಿತವಾದ ಸಕಲ ಶಸ್ತ್ರಪ್ರಹರಣಗಳೂ ಕಾಣಬಂದುವು ಮತ್ತು ಒಳಹೊಕ್ಕು ನೋಡುವಲ್ಲಿ ಕೋಟ್ಯಂತರ ವೀರ ಭಟರಿಗೆ ಉಪಯುಕ್ತವಾಗುವಷ್ಟು ಉಡುಪುತೊಡುವುಗಳೂ ಯುದ್ಧಸಾಮ ಗ್ರಿಗಳೂ ಇದ್ದುವು ಭ್ರಾಂತಿಗೊಂಡ ಶೂದ್ರಕನು ಕೂಡಲೇ ಹೊರಬಂದು, ಎಂದಿನಂತೆ ಬಾಗಿಲನ್ನು ಮುಚ್ಚಿ ಹಿಂಭಾಗದ ಹಜಾರದಲ್ಲಿದ್ದ ಮತ್ತೊಂದು ಬಾಗಿಲನ್ನು ತೆರೆದನು ಅದರಲ್ಲಿ ನಾಲ್ಕಾರು ಹಂಸತೂಲಿಕಾತಲ್ಪ ಮಂಡಿತ ಗಳಾದ ಮಾಣಿಕದ ಮಂಚಗಳಿದ್ದುವು ಒಂದು ಗಳಿಗೆಯಾದರೂ ಅಲ್ಲಿ ಮಲಗಿಕೊಳ್ಳಬೇಕೆಂದು ಆಸೆಯಾಗಿ ಒಂದು ಮಂಚದ ಮೇಲೆ ಮಲಗಿದನು. ನಿದ್ರೆಯೂ ಬಹಳವಾಗಿ ಪೀಡಿಸುತ್ತಿದ್ದಿತು ಒಂದೆರಡು ನಿಮಿಷಗಳಲ್ಲಿಯೇ ಮೈಮರೆತು ನಿದ್ರಿಸಿದನು

ಒಂದು ಗಳಿಗೆಯಲ್ಲಿ "ನೀನು ಹೀಗೆ ಕರ್ತವ್ಯವಿಮುಖನಾಗಿ ಮೈ ಮರತು ನಿದ್ದೆಹೋಗುವುದಕ್ಕೆ ಇದೇ ಸಮಯವೋ? ನಿನ್ನ ಸ್ಥಿತಿಯೇನೆಂ ಬುದು ಮರೆತು ಹೋಯಿತೇ? ನೀನೀಗ ಇರುವುದೆಲ್ಲಿ? ಮುಂದೆ ಮಾಡ ಬೇಕಾದ ಕೆಲಸಗಳು ಎಷ್ಟಿವೆ? ಮಗನೆ' ಬೇಗನೆ ಎಚ್ಚತ್ತು ಕರ್ತವ್ಯತತ್ಪರ ನಾಗು" ಎಂಬುದಾಗಿ ಒಬ್ಬ ದಿವ್ಯಸುಂದರಿಯು ತನ್ನನ್ನು ಎಚ್ಚರಗೊಳಿಸಿ ದಂತೆ ಕನಸು ಕಂಡನು ಝುಗ್ಗನೆ ಎದ್ದು ಸುತ್ತಲೂ ನೋಡುವಲ್ಲಿ ಯಾರೂ ಕಾಣಬರಲಿಲ್ಲ. ತನ್ನನ್ನು ಭಗವತಿಯಾದ ಮಹಾಕಾಳಿಯೇ ಎಚ್ಚರಗೊಳಿಸಿ ದಳೆಂಬುದಾಗಿ ಭಾವಿಸಿ, ಮರಳಿ ತನ್ನ ಶೋಧೆಗೆ ಮೊದಲಿಟ್ಟನು ಆ ಕೊಟಡಿಯಿಂದ ಹೊರಬಂದು ಬಲಗಡೆ ತಿರುಗುವಲ್ಲಿ ಮತ್ತೊಂದು ಚಿಕ್ಕ ಕೋಣೆಯು ಕಾಣಿಸಿತು. ಅದರ ಬಾಗಿಲು ಸುಲಭವಾಗಿ ತೆರೆಯಲಾಗ ಲಿಲ್ಲ ಸುತ್ತಲೂ ನೋಡುವಲ್ಲಿ ಬೀಗದ ಕೈಗಳ ಗೊಂಚಲು ಪಕ್ಕದಲ್ಲಿಯೇ ಕಾಣಿಸಿತು ತನ್ನ ಭಾಗ್ಯಾಧಿದೇವತೆಯನ್ನು ಕೊಂಡಾಡುತ್ತ ಶೂದ್ರಕನು

ಅದರ ಬಾಗಿಲನ್ನು ತೆರೆದು ಒಳಹೋಗುವಷ್ಟರಲ್ಲಿಯೇ ಕೋಟಿ ಸೂರ್ಯರಂತೆ ಬೆಳಗುವ ಕಾಂತಿಯು ಇವನ ಕಣ್ಣುಗಳನ್ನು ಕುಕ್ಕಿಬಿಟ್ಟಿತು. ಶೂದ್ರಕನು ಒಳಹೊಕ್ಕು ನೋಡುವಲ್ಲಿ ರತ್ನಗಳ ಕಾಂತಿಯಿಂದ ತನಗೆ ಯಾವ ಅಪಾಯವೂ ಇಲ್ಲವೆಂಬುದಾಗಿ ಧೈರ್ಯಗೊಂಡು ಬಳಿಸಾರ್ದು ನೋಡುವಲ್ಲಿ, ರಾಜಸ್ತ್ರೀಯರು ಧರಿಸಲು ಯೋಗ್ಯವಾದ ಆಭರಣರಾಶಿಯು ಕಣ್ಣ ಮುಂದೆ ಇದ್ದಿತು. ಸುತ್ತಲೂ ಇರುವ ಇನ್ನೂ ಅನೇಕ ಪೆಟ್ಟಿಗೆಗಳನ್ನು ತೆರೆದು ನೋಡಿದನು ಸಕಲೇಂದ್ರಿಯಗಳನ್ನೂ ವ್ಯಾಮೋಹಗೊಳಿಸುವ ಸುಗಂಧ ದ್ರವ್ಯಗಳೂ ಅವುಗಳಲ್ಲಿ ಸಂಗೃಹೀತವಾಗಿರುವುದನ್ನು ಕಂಡು, ಶೂದ್ರಕನು ತಾನು ಆಗ ಎಲ್ಲಿರುವೆನೆಂಬುದನ್ನು ತಿಳಿಯದೆ, ಇದೇನು ಕನಸೋ? ಅಥವಾ ಕಣ್ಣುಕಟ್ಟೋ ಅಥವಾ ದಿಟವಾಗಿಯೂ ತಾನು ಅವುಗಳನ್ನು ನೋಡುತ್ತಿರುವೆನೋ ಎಂಬ ಸಂದೇಹವು ತಲೆದೋರಿತು; ಕುಬೇರನ ಕೋಶಾಗಾರದಂತಿರುವ ಈ ನಿಧಿಗಳನ್ನು ಇಲ್ಲಿ ಸಂಗ್ರಹಿಸಿದವರಾರು ? ಇಲ್ಲಿಯೇ ತಾನು ನೋಡುತ್ತ ನಿಂತರೆ ತನ್ನನ್ನು ಕಂಡವರು ಕಳ್ಳನೆಂಬ ಅಪವಾದವನ್ನು ಜನಗಳಲ್ಲಿ ಬೇರೂರಿದರೆ, ತನ್ನ ಜೀವಿತಕ್ಕೆ ಕಳಂಕ ಬರುವುದಲ್ಲವೇ ? ತನ್ನ ಗತಿಯೇನು? ಎಂಬ ಭಯವೂ ತಲೆದೋರಿತು. ಅವುಗಳನ್ನು ಬಿಟ್ಟು ಹೊರಬರುವುದಕ್ಕೆ ಇಷ್ಟವೂ ಇಲ್ಲ, ಅಲ್ಲಿಯೇ ನಿಲ್ಲಲು ಧೈರ್ಯವೂ ಇಲ್ಲ ಹೀಗೆ ತೂಗುತೂಟ್ಟಿಲಾದ ಮನಸ್ಸನ್ನು ಬಲಾತ್ಕಾರವಾಗಿ ಸ್ವಾಧೀನಪಡಿಸಿ ಅಲ್ಲಿಂದ ಹೊರಟು, ಆ ಮಂದಿರದ ಸಕಲಪ್ರದೇಶಗಳನ್ನೂ ಸಂಪೂರ್ಣವಾಗಿ ಸಂಚರಿಸಿ ನೋಡಿದನು. ಅದು ಒಂದು ರಾಜಭವನವೆಂತಲೂ, ಯಾವುದೋ ಕಾರಣದಿಂದ ಈಗ ಅಲ್ಲಿ ಯಾರೂ ವಾಸವಾಗಿಲ್ಲವೆಂತಲೂ ಬೋಧೆಯಾಯಿತು. ಇಲ್ಲಿಂದ ಪಟ್ಟಣದೊಳಕ್ಕೆ ಹೋಗುವದಾರಿಯೂ ಅಲ್ಲೆಲ್ಲಿಯೋ ಇರಬೇಕೆಂಬುದಾಗಿ ನಿಶ್ಚಯವಾಯಿತು ದಾರಿ ಎಷ್ಟು ಹುಡುಕಿದರೂ ಎಲ್ಲಿಯೂ ದೊರೆಯಲಿಲ್ಲ. ಇಷ್ಟರಲ್ಲಿ ಬೆಳಗಾಗುತ್ತ ಬಂದಿತು. ಜನಸಂಚಾರದ ಧ್ವನಿಯೂ ಮೆಲ್ಲಗೆ ಕೇಳಬರುವುದಕ್ಕೆ ಮೊದಲಾಯಿತು. ಇನ್ನು ಹುಡುಕುವುದು ಶ್ರೇಯಸ್ಕರವಲ್ಲವೆಂಬುದಾಗಿ ಭಾವಿಸಿ ಮರಳಿ ಶಯನಗೃಹವನ್ನು ಹೊಕ್ಕು, ಹಗಲೆಲ್ಲಾ ಅಲ್ಲಿಯೇ ಕಳೆಯಬೇಕೆಂಬುದಾಗಿ ನಿಶ್ಚಯಿಸಿ, ಒಂದು ಮಂಚದ ಮೇಲೆ ಕುಳಿತುಕೊಂಡನು ಬೆಟ್ಟದ ಮೇಲಿನಿಂದ ಬಿಲಮಾರ್ಗವಾಗಿ ನೆಲಕ್ಕೆ ಬಿದ್ದುದರಿಂದಲೂ ರಾತ್ರಿಯೆಲ್ಲಾ

ಬಿಡುಗಡೆಯಿಲ್ಲದೆ ಭಯವಿಸ್ಮಯಗಳಿಂದ ಆಲೆದುದರಿಂದಲೂ ಕೈಕಾಲುಗಳು ಸೆಳೆಯತೊಡಗಿದುವು. ದೇಹದಲ್ಲಿ ಆಲಸ್ಯವೂ ಬಹಳವಾಗಿದ್ದಿತು. ಹೀಗಾಗಿ ಅಲ್ಲಿಯೇ ಒರಗಿದನು.

ಆದರೆ ಹಿಂದಿನಂತೆ ಇಂದು ಸುಲಭ ನಿದ್ದೆ ಬರಲಿಲ್ಲ. "ಯಮರಾಜಧಾನಿಯಂತೆ ಭಯಂಕರವಾಗಿರುವ ಈ ಮನೆಯಲ್ಲಿ ನಾನು ಮಲಗುವುದು ತರವಲ್ಲ. ಹೇಗಾದರೂ ಮಾಡಿ ಸುರಂಗದಿಂದ ಹೊರಬೀಳುವ ಹಾದಿಯನ್ನು ಕಂಡು ಹಿಡಿಯಬೇಡವೇ ? ಇದರ ಗುಟ್ಟು ಏನಿರಬಹುದೆಂಬುದಾಗಿ ತಿಳಿಯದೆ ಎಂತಹ ಹೆಡ್ಡನಾದರೂ ನಿದ್ರಿಸುವನೇ ? ಹಿಂದೆ ಒಂದು ಕ್ಷಣಕಾಲ ಕಣ್ಣು ಮುಚ್ಚುವುದರೊಳಾಗಾಗಿಯೇ ಭಗವತಿಯು ಮಾಡಿದ ಶಾಸನವನ್ನು ನಾನೀಗಲೇ ಮರೆಯಬಹುದೇ ?" ಎಂದು ಮುಂತಾಗಿ ಯೋಚಿಸುತ್ತ ಮಲಗಿರುವಲ್ಲಿ, ತಲೆದಿಂಬಿನ ಕೆಳಗೆ ಯಾವುದೋ ಕಠಿನಪದಾರ್ಥವು ಇರುವಂತೆ ಭಾಸವಾಯಿತು. ಥಟ್ಟನೆ ಎದ್ದುನೋಡುವಲ್ಲಿ ಅಲ್ಲಿ ಬೀಗದ ಕೈಗಳ ಒಂದು ಗೊಂಚಲು ಕಾಣಿಸಿತು ಮತ್ತಷ್ಟು ಕುತೂಹಲದಿಂದ ಹಾಸಿಗೆಯನ್ನೆಲ್ಲಾ ಹೊರಗೆ ಎಳೆಯಲಾಗಿ ಮಂಚದ ಅಡಿಯಲ್ಲಿ ಎರಡು ಪೆಟ್ಟಿಗೆಗಳೂ ಕಂಡುಬಂದುವು. ಅವನ್ನು ತೆರೆದು ನೋಡಲಾಗಿ ಒಂದರಲ್ಲಿ ಚಿತ್ರಲೇಖನಕ್ಕೆ ಉಪಯುಕ್ತಗಳಾದ ಸಾಮಗ್ರಿಗಳೂ, ಮತ್ತೊಂದರಲ್ಲಿ ಆ ರಾಜಧಾನಿಯ ಪೂರ್ವಿಕರಾಜರ ಮತ್ತು ಅವರ ಮನೆತನದವರ ಭಾವಚಿತ್ರಗಳೂ ಅವರವರ ಜೀವಿತ ಚರಿತ್ರೆಯ ಕಾಲಮುಂತಾದುವುಗಳನ್ನು ತಿಳಿಸುವ ಪಟ್ಟಿಯೂ ಇದ್ದುವು ಅದರಲ್ಲಿಯೇ ಇನ್ನೊಂದು ಕಡೆ ಉಜ್ಜಯಿನೀ ಪಟ್ಟಣದ ನಕಾಶವೂ ಕಂಡುಬಂದಿತು. ಕುತೂಹಲಾವಿಷ್ಟನಾದ ನಮ್ಮ ಯುವಕನಿಗೆ ಚಿತ್ರಕಲೆಯಲ್ಲಿ ಅದ್ವಿತೀಯಪಾಂಡಿತ್ಯವಿದ್ದುದರಿಂದ ಅದನ್ನು ಅಗಲವಾಗಿ ನೆಲದ ಮೇಲೆ ಹರಡಿ ನೋಡುವಲ್ಲಿ, ಆ ಪಟ್ಟಣದೊಳಗಣ ಮುಖ್ಯಮುಖ್ಯವಾದ ಕಟ್ಟಡಗಳೂ, ಸರೋವರಗಳೂ, ಕ್ರೀಡಾರಾಮಗಳೂ ಪ್ರತ್ಯಕ್ಷವಾಗಿರುವಂತೆ ಕಾಣಬಂದುವು. ಕುತೂಹಲವು ಇಮ್ಮಡಿಯಾಗಲು ಎವೆಯಿಕ್ಕದೆ ಅದನ್ನೇ ನೋಡುತ್ತಿದ್ದು, ಶಿಲ್ಪಿಯ ಚಾತುರ್ಯಕ್ಕೆ ಮನಸೋತು, ಆ ಪೆಟ್ಟಿಗೆಯಲ್ಲಿ ಇನ್ನೂ ಏನೇನಿರುವುದೋ ಎಂಬುದಾಗಿ ಪರಿಕಿಸಿದನು. ಇನ್ನೂ ಕೆಲವು ದೊಡ್ಡದೊಡ್ಡ ಸುರುಳಿಗಳು ಕಂಡುಬಂದುವು. ಅವುಗಳನ್ನೆಲ್ಲಾ ತೆಗೆದು ಹೊರಹಾಕಿ ಕುಳಿತುಕೊಂಡು ಒಂದೊಂದಾಗಿ ತೆರೆದು

ನೋಡತೊಡಗಿದನು. ಅವುಗಳಲ್ಲಿ ತಾಮ್ರಲಿಪ್ತಿ, ವೈಶಾಲಿ, ಪಾಟಲೀಪುತ್ರ, ರಾಜಗೃಹ, ಅಯೋಧ್ಯಾ, ಕಾನ್ಯಕುಬ್ಜ, ಕಾಶಿ, ಕಾಂಪಿಲ್ಯ, ಮಧುರಾ, ಪಾಂಡ್ಯಕವಾಟ, ಉರಗಪುರ, ಕಾಂಚೀ, ಧಾನ್ಯಕಟಕ, ಕಳಿಂಗನಗರ, ಕಟಕಪುರಿ ಮೊದಲಾದ ಪುರಾತನ ಪಟ್ಟಣಗಳ ನಕಾಶಗಳಿದ್ದುವು. ಕಡೆಗೆ ಮತ್ತೊಂದು ಪಟವು ಅವನ ಕೈಗೆ ಸಿಕ್ಕಿತು ಬಿಚ್ಚಿನೋಡುವಲ್ಲಿ ಅದು ಉಜ್ಜಯಿನೀ ನಗರಿಯ ನಕ್ಷೆಯಾಗಿದ್ದಿತು. ಅದನ್ನು ವಿಶಾಲವಾಗಿ ತೆರೆದಿಟ್ಟು, ಅದರಲ್ಲಿರುವ ಒಂದೊಂದು ಭಾಗವನ್ನೂ ಹಿಂದೆ ತಾನು ನೋಡಿದ ಉಜ್ಜಯಿನಿಯ ಮತ್ತೊಂದು ನಕ್ಷೆಯೊಡನೆ ಹೋಲಿಸಿ ನೋಡುವಲ್ಲಿ, ಮೊದಲು ತಾನು ನೋಡಿದುದಕ್ಕಿಂತಲೂ ಇದರಲ್ಲಿ ಅನೇಕ ಭಾಗಗಳು ಹೊಸದಾಗಿ ಕಂಡು ಬಂದುವು. ಇದರಿಂದ ಆ ಚಿತ್ರವನ್ನು ಬಿಟ್ಟು ಇದನ್ನೇ ಎವೆಯಿಕ್ಕದೆ ನೋಡುತ್ತ, ಒಂದೊಂದು ಪ್ರದೇಶವನ್ನೂ ಗುರುತಿಸುತ್ತ, ಕ್ರಮವಾಗಿ ನಕಾಶದ ಪರಿಚಯವನ್ನು ಮಾಡುವಷ್ಟಕ್ಕೆ ತಾನು ಇರತಕ್ಕ ಸುರಂಗವೂ ಅದರ ವಿನ್ಯಾಸವೂ ಇಂತಹ ಕಡೆಯಲ್ಲಿವೆ ಎಂದು ನಿರ್ಣಯುವಮಾಡಿಕೊಂಡನು. ಒಡನೆಯೇ ದೇಹವೆಲ್ಲವೂ ಪುಳಕಿತವಾಯಿತು ಮೈಯೆಲ್ಲವೂ ಬೆವರತೊಡಗಿತು ಹೃಷ್ಟನಾದ ಶೂದ್ರಕನು ಅಕ್ಕರೆಯಿಂದ ಆ ಸುರಂಗದ ರಚನಾಕ್ರಮವನ್ನು ಪರಿಕಿಸತೊಡಗಿದನು.

ತನ್ನನ್ನು ಸಂಘಿಲಕನೂ ಚಂಡಸಿಂಹನೂ ತಳ್ಳಿದ ಸುರಂಗ ಮಾರ್ಗವು ಪಟ್ಟಣದ ಹೊರಗೆ ಬಹಳ ದೂರದಲ್ಲಿ ಒಂದು ನದೀತೀರಕ್ಕೆ ಹೋಗುವಂತೆಯೂ, ಹಿಂದಣ ರಾತ್ರಿ ತಾನು ತೆರೆಯಲಾರದೆ ಬಿಟ್ಟಿದ್ದ ಮಹಾದ್ವಾರವನ್ನು ತೆಗೆದರೆ ಅಲ್ಲಿಂದ ಮೂರು ದಾರಿಗಳು ಒಡೆಯುವಂತೆಯೂ, ಅವುಗಳಲ್ಲಿ ಒಂದು, ರಾಜನ ಆಸ್ಥಾನಮಂಟಪದಲ್ಲಿ ರಾಜಸಿಂಹಾಸನದ ಅಡಿಯಲ್ಲಿನ ಪ್ರದೇಶಕ್ಕೆ ಸೇರುತ್ತದೆಂದೂ, ಇನ್ನೊಂದು ಮಾರ್ಗವು ಕನ್ಯಾಂತಃಪುರಕ್ಕೆ ಹೋಗುತ್ತದೆಂದೂ, ಮತ್ತೊಂದು ಈಗ ವಿನಯವತಿಯು ವಾಸವಾಗಿರುವ ಉಪ್ಪರಿಗೆಗೆ ಒಯ್ಯುತ್ತದೆಂದೂ ವಿಶದವಾಯಿತು. ರಾಜಭವನದಲ್ಲಿ ಒಂದೊಂದು ಭಾಗಕ್ಕೆ ಒಂದೊಂದು ಹೆಸರು ಇದ್ದಿತು. ಲಕ್ಷ್ಮೀವಿಲಾಸವೆಂಬ ಭವನವು ಕನ್ಯೆಯರಿಗಾಗಿ ನಿರ್ಮಿಸಿದ್ದ ರಾಜಭವನವು. ಆದರೆ ಈಗ ಇದರಲ್ಲಿ ರಾಣಿಯಾದ ಅನಂಗಲೇಖೆಯು ವಾಸವಾಗಿದ್ದಳು. ಜ್ಯೋತಿರ್ವಿಲಾಸವೆಂಬುದು ಪಟ್ಟದ ರಾಣಿಯ ಅರಮನೆ. ಆ ಅರಮನೆಯಲ್ಲಿ

ಈಗ ಯಾರೂ ವಾಸಮಾಡುತ್ತಿರಲಿಲ್ಲ ಅದು ಜನಶೂನ್ಯವಾಗಿದ್ದಿತು. ಇದಕ್ಕೆ ಕಾರಣವನ್ನು ವಾಚಕರು ಮುಂದೆ ತಾವಾಗಿಯೇ ತಿಳಿಯ ಬಲ್ಲರು. ಧರ್ಮವಿಲಾಸವೆಂಬುದು ಅತಿಥಿಗಳಾಗಿ ಪರಿವಾರದೊಡನೆ ರಾಜಸನ್ನಿಧಿಗೆ ಬಂದ ರಾಜಕುಟುಂಬದವರು ವಾಸಮಾಡಲು ಕಟ್ಟಿಸಿದ ಅರಮನೆ. ಕನ್ಯಾಂತಃಪುರವನ್ನು ರಾಣಿಯು ಆಕ್ರಮಿಸಿದ ಕೂಡಲೇ ವಿನಯವತಿಯು ಇದರಲ್ಲಿ ವಾಸಮಾಡಬೇಕಾಗಿ ಬಂದಿತು. ಉಜ್ಜಯಿನೀ ನಗರದ ಅರಮನೆಯಲ್ಲಿ ತೊಂಭತ್ತಾರು ಭವನಗಳಿದ್ದುವು ಆದರೆ ಅವುಗಳಲ್ಲಿ ರಾಜಸ್ಥಾನ, ಧರ್ಮವಿಲಾಸ, ಲಕ್ಷ್ಮೀವಿಲಾಸ, ಜ್ಯೋತಿರ್ವಿಲಾಸಗಳೆಂಬ ನಾಲ್ಕು ಭಾಗಗಳಿಗ ಮಾತ್ರವೇ ಸುರಂಗಮಾರ್ಗಗಳಿದ್ದುವಲ್ಲದೆ, ಮಿಕ್ಕ ತೊಂಭತ್ತೆರಡು ಭವನಗಳಿಗೆ ಯಾವ ಮಾರ್ಗವೂ ನಕಾಶದಲ್ಲಿ ಕಾಣಬರದಿರಲು ಕಾರಣವೇನೆಂಬುದು ಶೂದ್ರಕನಿಗೆ ಗೊತ್ತಾಗಲಿಲ್ಲ ಇಂತು ಆಶ್ಚರ್ಯಭರಿತನಾದ ಶೂದ್ರಕನು ಮರಳಿ ಆ ಪೆಟ್ಟಿಗೆಯನ್ನು ಸಂಪೂರ್ಣವಾಗಿ ಶೋಧನಮಾಡುವಲ್ಲಿ ಮತ್ತೊಂದು ಪಟವು ಕಾಣಿಸಿತು ಅದರಲ್ಲಿ ಭೂಮಂಡಲದಲ್ಲಿರುವ ಸಕಲ ರಾಜಧಾನಿಗಳೂ ಅವುಗಳ ದುರ್ಗವಿನ್ಯಾಸಗಳೂ ಆ ದುರ್ಗಗಳ ಪ್ರಾಕಾರಗಳನ್ನು ಭೇದಿಸುವ ಉಪಾಯಗಳೂ, ಅವುಗಳಲ್ಲಿರುವ ಸುರಂಗಮಾರ್ಗಗಳೂ ವಿಶದವಾಗಿ ಚಿತ್ರಿತವಾಗಿದ್ದುವು. ಇವುಗಳನ್ನೆಲ್ಲ ಕ್ರಮವಾಗಿ ಓದಿ ನೋಡುತ್ತ ಉಜ್ಜಯಿನೀ ನಗರದ ದುರ್ಗವನ್ನು ಲಕ್ಷಿಸಲು—ಸಭಾಮಂದಿರದಲ್ಲಿರುವಾಗ ರಾಜನಿಗೆ ಯಾವುದೊಂದು ಅಪಾಯವು ತಲೆದೋರಿದರೆ ಸಿಂಹಾಸನದೊಳಗಡೆ ಇರುವ ಕೀಲನ್ನು ಒತ್ತಿದರೆ ಸಾಕು ಅರಸನು ಸಿಂಹಾಸನದೊಂದಿಗೆ ಇಳಿಯುಬಿದ್ದು, ಕೂಡಲೇ ಮೇಲ್ಭಾಗವು ಮುಚ್ಚಿಕೊಂಡು ಏನೂ ತಿಳಿಯದ ಹಾಗಾಗುವುದೆಂತಲೂ, ಧರ್ಮವಿಲಾಸದಲ್ಲಿ ಪರರಾಜರು ವಾಸಮಾಡುವ ಕಾರಣ ಅಂತಹ ಪರರಾಜರಲ್ಲಿ ಯಾರಾದರೂ ದ್ರೋಹಬುದ್ಧಿಗಳು ಕಪಟವರ್ತನದಿಂದ ನಡೆದರಾದರೆ ಅಂತಹವರಲ್ಲಿ ಸ್ನೇಹವನ್ನೇ ನಟಿಸುತ್ತ ಉಪಾಯವಾಗಿ ಕೊಲ್ಲುವ ಸಲುವಾಗಿ ಅದನ್ನು ನಿರ್ಮಿಸಿರುವಂತೆಯೂ, ಅದರ ಕೀಲು ಜ್ಯೋತಿರ್ವಿಲಾಸದಲ್ಲಿ ಅರಸನ ಮಂಚದ ಅಡಿಯಲ್ಲಿರುವುದಾಗಿಯೂ, ರಾಜವನಿತೆಯರು ಮಾನಸಂರಕ್ಷಣೆಮಾಡಿಕೊಳ್ಳುವ ಕಾಲವು ಒದಗಿದಲ್ಲಿ ಜ್ಯೋತಿರ್ವಿಲಾಸವನ್ನು ಸುರಂಗಕ್ಕೆ ಒಯ್ಯಲು ಅದರಲ್ಲಿಯೇ ಮತ್ತೊಂದು ಕೀಲು ಇರುವುದಾಗಿಯೂ ತಿಳಿದನು.

ಆದರೆ ಧರ್ಮವಿಲಾಸವೆಂಬ ಭವನದ ನಾಮಕರಣವು ಮಾತ್ರ ಅವನಿಗೆ ಮೆಚ್ಚುಗೆಯಾಗಲಿಲ್ಲ. ಅಯ್ಯೋ! ಧರ್ಮವಿಲಾಸವೆಂಬುದಾಗಿ ಹೆಸರಿಟ್ಟು ಅಧರ್ಮಕಾರ್ಯಗಳಿಗೆ ಅದನ್ನು ಗುರಿಮಾಡಿರುವರಲ್ಲಾ ಎಂಬುದಾಗಿ ಬಹಳ ಹೊತ್ತು ಯೋಚಿಸಿ, ಕಟ್ಟಕಡೆಗೆ—ಧರ್ಮಶಬ್ದಕ್ಕೆ ಯಮನೆಂಬ ಅರ್ಥವೂ ಉಂಟು, ಧರ್ಮವಿಲಾಸವೆಂದರೆ ಯಮವಿಲಾಸ, ಇದೀಗ ಇದಕ್ಕೆ ತಕ್ಕ ಹೆಸರು—ಎಂಬುದಾಗಿ ಸಮಾಧಾನ ಮಾಡಿಕೊಂಡನು. ಹೀಗೆಯೇ ಆ ಮನೆಯನ್ನೆಲ್ಲಾ ಸಂಪೂರ್ಣವಾಗಿ ಶೋಧಿಸಿ ಅನೇಕವಾದ ಅದ್ಭುತ ವಿಷಯಗಳನ್ನು ಕಂಡುಹಿಡಿದು, ಕಡೆಗೆ ಅಲಸನಾಗಿ ಮಂಚದ ಮೇಲೆಯೇ ಮಲಗಿ ನಿದ್ರಿಸಿದನು. ಎಚ್ಚರಗೊಳ್ಳುವಾಗ್ಗೆ ಮನುಷ್ಯ ಸಂಚಾರವು ಕಡಮೆಯಾಗಿರುವಂತೆಯೂ, ಸುರಂಗದಲ್ಲಿ ಹಬೆಯು ತಗ್ಗಿ ತಂಪಾಗಿರುವಂತೆಯೂ, ನೆಲವು ಆದುರದೆ ಇರುವುದೂ ಗೋಚರವಾಯಿತು ಆಗ ಶೂದ್ರಕನು ಹಸಿವಿನಿಂದ ಬಳಲಿದ್ದಂತೆ ತೋರಿತು. ಹಿಂದಣ ರಾತ್ರಿಯಂತೆಯೇ ದೇವಿಯ ಗರ್ಭಗೃಹದ ಹಾದಿಯನ್ನೇ ಹಿಡಿದನು. ಜನ ಸಮ್ಮರ್ದವು ಕಡಮೆಯಾಗಿರಲಿಲ್ಲ. ಕ್ಷುಧಾಪಿಶಾಚವನ್ನು ಬಲವಾಗಿ ನಿಗ್ರಹಿಸಿ, ತನ್ನ ಸಮಯವು ಇನ್ನೂ ಬರಲಿಲ್ಲವೆಂಬುದಾಗಿ ಭಾವಿಸಿ, ಅರ್ಚಕರು ಬಾಗಿಲನ್ನು ಮುಚ್ಚಿ ಬೀಗಹಾಕಿ ಹೊರಡುವ ವರೆಗೂ ಹಿಂದಿನ ದಿನದಂತೆಯೇ ಧ್ಯಾನಮಾಡುತ್ತ ಕುಳಿತನು. ಎರಡು ಗಳಿಗೆಯೊಳಗಾಗಿ ಎಲ್ಲರೂ ಹೊರಟುಹೋದರು. ಶೂದ್ರಕನು ತನ್ನ ಬಾಗಿಲನ್ನು ತೆರೆದು, ದೇವಿಗೆ ಸಾಷ್ಟಾಂಗವೆರಗಿ, ತನ್ನನ್ನು ಅಂತಹ ಆಪತ್ಕಾಲದಲ್ಲಿ ಪರಿಪಾಲಿಸಿದುದಕ್ಕಾಗಿ ಹೊಗಳುತ್ತ, ಮುಂದೆಯೂ ನಿರುಪಾಧಿಕವಾಗಿ ಕಾಪಾಡುವಂತೆ ಪ್ರಾರ್ಥಿಸಿ, ಉಪಹಾರವನ್ನು ಪ್ರಸಾದರೂಪವಾಗಿ ಪರಿಗ್ರಹಿಸಿ, ಒಂದೆರಡು ಹಣ್ಣುಗಳನ್ನು ಕಯ್ಯಲ್ಲಿ ತೆಗೆದುಕೊಂಡು, ಹಿಂದಣ ದಾರಿಯನ್ನು ಹಿಡಿದು ಹಗಲು ತಾನು ವಾಸವಾಗಿದ್ದ ಮನೆಗೆ ಬಂದು ಸೇರಿದನು. ಅಲ್ಲಿ ಒಂದು ವಿಶ್ರಾಂತಿಪೀಠದ ಮೇಲೆ ಕುಳಿತು ತನ್ನ ಮುಂದಣ ಕರ್ತವ್ಯವೇನೆಂಬುದಾಗಿ ಯೋಚಿಸುತ್ತ ಒಂದೆರಡು ಗಳಿಗೆಗಳ ಕಾಲ ವಿಶ್ರಮಿಸಿಕೊಂಡು, ಚಿಕ್ಕದೊಂದು ಖಡ್ಗವನ್ನು ಸೊಂಟದಲ್ಲಿ ತಗುಲಿಸಿ, ಸಮ್ಮೋಹಕರಣಿಯೆಂಬ ಉನ್ಮಾದಕ ಮೂಲಿಕೆಯನ್ನೂ ಸಂಜ್ಞಾನಕರಣಿಯೆಂಬ ಪರಿಹಾರಕ ಮೂಲಿಕೆಯನ್ನೂ ಒಂದು ಸೆರಗಿನಲ್ಲಿ ಗಂಟುಹಾಕಿಕೊಂಡು, ಹಿಂದಣ ರಾತ್ರಿಯ ದೀವಟಿಗೆಯನ್ನು ಕಯ್ಯಲ್ಲಿ ಹಿಡಿದು, ಆ ರಾತ್ರಿ ತನ್ನಿಂದ ತೆರೆಯಲಾಗದಿದ್ದ

ಹೆಬ್ಬಾಗಿಲನ್ನು ತೆರೆದು ಜ್ಯೋತಿರ್ವಿಲಾಸವನ್ನು ಹೊಕ್ಕು ಅಂತಃಪುರವನ್ನೆಲ್ಲ ಸಂಚರಿಸ ತೊಡಗಿದನು.

ಅಂತಃಪುರವಿಲಾಸಿನಿಯರನ್ನು ನೋಡುವುದು ಶುದ್ಧಚರಿತನೆನಿಸಿದ ನಮ್ಮ ನಾಯಕನ ಉದ್ದೇಶವಲ್ಲ ತನ್ನ ಪರಮಪ್ರೇಯಸಿಯಾದ ವಿನಯವತಿಯನ್ನು ಅಂದು ಸರ್ಪದಂಶವಾದ ದಿನದಲ್ಲಿ ನೋಡಿದ ಬಳಿಕ ಆತನು ಮರಳಿ ಆಕೆಯನ್ನು ನೋಡಿರಲಿಲ್ಲ ಈಗ ಮರಳಿ ಆ ಕನ್ಯಾರತ್ನವನ್ನು ಕಣ್ಣಾರೆ ನೋಡಬೇಕೆಂಬ ಅಭಿಪ್ರಾಯದಿಂದ ಧರ್ಮವಿಲಾಸವನ್ನು ಮೊತ್ತ ಮೊದಲು ಹೊಕ್ಕು, ಅದರ ಗುಟ್ಟನ್ನು ಚೆನ್ನಾಗಿ ತಿಳಿದುಕೊಂಡನು. ಅದಕ್ಕೂ ಜ್ಯೋತಿರ್ವಿಲಾಸಕ್ಕೂ ಇರುವ ಯಂತ್ರದ ಕೀಲನ್ನೂ ಗೂಢಮಾರ್ಗವನ್ನೂ ಧರ್ಮವಿಲಾಸದೊಳಗಡೆ ಇರುವ ಮುಖ್ಯ ಭವನವು ತಾನು ಒಳಗಡೆ ಸಂಚರಿಸುತ್ತಿರುವಾಗಲೇ ಎಲ್ಲಿ ಕುಸಿದು ಬೀಳುವುದೋ ಎಂಬುದಾಗಿ ಹೆದರಿ ಹೆದರಿ, ಕಟ್ಟಡದೊಳಗಣ ಗೂಢಮಾರ್ಗಗಳನ್ನೂ ಮನದಟ್ಟುಮಾಡಿಕೊಂಡು, ಮತ್ತೊಂದು ಸುರಂಗಮಾರ್ಗವಾಗಿ ವಿನಯವತಿಯು ನಿದ್ರಿಸುತ್ತಿದ್ದ ಭವನವನ್ನು ಹೊಕ್ಕನು ಆಗ ಅವನ ಶರೀರವೆಲ್ಲವೂ ನಡುಗತೊಡಗಿತು ಅಂತರಂಗದಲ್ಲಿ ಲಜ್ಜಾಭಯಗಳು ತಲೆದೋರಿದುವು. ಕನ್ಯೆಯಾಗಿದ್ದರೂ ಪರಾಂಗನೆ, ಅದರಲ್ಲಿಯೂ ರಾಜಪುತ್ರಿ, ಸ್ವೇಚ್ಛೆಯಿಂದ ಸುಖನಿದ್ರೆಯಲ್ಲಿರುವ ಸಮಯ. ಇಂತಹ ನಿಶೀಥ ಸಮಯದಲ್ಲಿ ರಾಜಾಶ್ರಿತನೂ, ಯುವಕನೂ, ಉದಾರಮನಸ್ಕನೂ ಎನಿಸಿದ ತನ್ನಂತಹ ವೀರನು ಆ ಪ್ರದೇಶವನ್ನು ಹೊಕ್ಕು ಕನ್ಯೆಯನ್ನು ನೋಡುವುದು ತರವಲ್ಲವೆಂತಲೂ, ತನ್ನ ಚರ್ಯೆಯು ಧರ್ಮಯುಕ್ತವಲ್ಲವೆಂತಲೂ, ಇಂತಹ ಅಧರ್ಮವು ತನ್ನ ಅಧಃಪತನಕ್ಕೆ ಕಾರಣವಾಗಬಹುದೆಂಬ ಭೀತಿಭಾವನೆಗಳು ಅವನ ಅಂತರಂಗದಲ್ಲಿ ದ್ವಂದ್ವಯುದ್ಧ ಮಾಡತೊಡಗಿದುವು. "ರಾಜ್ಯಕ್ಕೆ ಗಡಿ, ಸಮುದ್ರಕ್ಕೆ ದಡ, ಮನುಷ್ಯನಿಗೆ ಮರ್ಯಾದೆ, ಇವುಗಳಲ್ಲವೇ ಧರ್ಮದ ಗೆರೆಗಳು? ಗಾಢನಿದ್ರೆಯಲ್ಲಿ ಕಣ್ಣುಮುಚ್ಚಿಕೊಂಡು ಅಸ್ತವ್ಯಸ್ತಗಳಾದ ಕೇಶಾಂಬರ ಭೂಷಣಗಳುಳ್ಳ ಆ ಕನ್ಯೆಯು ನನ್ನ ಸಂಚಾರದಿಂದ ದೈವವಶಾತ್ ಎಚ್ಚತ್ತಳಾದರೆ ಆಗ ನನ್ನ ಗತಿಯೇನು? ನನ್ನನ್ನು ಏನೆಂಬುದಾಗಿ ಭಾವಿಸುವಳೋ ತಿಳಿಯದು. ಒಂದು ವೇಳೆ ನನ್ನನ್ನು ಕಂಡು ಲಜ್ಜಾಭಯಸಂಭ್ರಮಗಳಿಂದ ಉದ್ರಿಕ್ತೆಯಾಗಿ ಏನು ಮಾಡುವಳೋ ಹೇಳತೀರದು. ಅಥವಾ

ಕೃತಜ್ಞತೆಯಿಂದ ಮೌನವ್ರತವನ್ನು ಧರಿಸಿದರೂ ನನ್ನನ್ನು ನೀಚನೆಂಬು ದಾಗಿ ಭಾವಿಸದಿರಳು. ಮೂಢನೂ ಪುರುಕನೂ ಕಳ್ಳನೂ ಎನಿಸಿ ದವನಿಗೆ ಮಾತ್ರವೇ ಈ ವೃತ್ತಿಯು ಯುಕ್ತವಾಗಿ ತೋರುವುದಲ್ಲದೆ ನನ್ನಂತಹ ಸಾಹಸಗಾರನಾದ ವೀರನಿಗೆ ಇದು ಯೋಗ್ಯವಲ್ಲ ಅಥವಾ ಆಕೆ ನನ್ನನ್ನು ಹೀಯಾಳಿಸಿ ತಿರಸ್ಕಾರಭಾವನವನ್ನು ಸೂಚಿಸಿದರೆ ಈ ಹಾಳು ಮೋರೆಯನ್ನು ಪುನಃ ಎಲ್ಲಿ ಮರೆಮಾಡಿಕೊಳ್ಳಲಾದೀತು. ಅಂಧಕಾರವಾ ದರೂ ನನ್ನನ್ನು ಪರಿಹಾಸಮಾಡಲಾರದೇ?"

ಈ ಪ್ರಕಾರವಾಗಿ ಶೂದ್ರಕನು ತನ್ನ ನಡೆವಳಿಕೆಯನ್ನು ತಾನೇ ನಿಂದಿಸುತ್ತ, ಒಂದು ವೇಳೆ ತಾನು ಗುಪ್ತಮಾರ್ಗಗಳನ್ನೆಲ್ಲಾ ಪರೀಕ್ಷಿಸ ದಿದ್ದರೆ ರಾಜಪುತ್ರಿಯು ಯಾವ ಸಮಯದಲ್ಲಿ ಯಾವ ವಿಧವಾದ ಅಪಾಯಕ್ಕೆ ಈಡಾಗುವಳೋ, ಯಾರಿಂದ ಯಾವ ಬಗೆಯ ಕೇಡು ಸಂಭವಿಸುವುದೋ, ಒಂದು ವೇಳೆ ಅಂತಹ ಸಮಯದಲ್ಲಿ ತನಗೆ ಆ ರಾಜ ನಂದಿನಿಯ ಪ್ರಾಣಸಂರಕ್ಷಣ ಮಾಡುವ ಯೋಗವು ದೊರೆತುದಾದರೆ ಅದೇ ಈ ಅಧರ್ಮಾಚರಣೆಗೆ ನಿಷ್ಕೃತಿಯಾಗಬಹುದೆಂಬುದಾಗಿ ತನ್ನನ್ನು ತಾನೇ ಸಮಾಧಾನಪಡಿಸಿಕೊಳ್ಳುತ್ತ ಆ ಮಂದಿರವನ್ನು ಹೊಕ್ಕು ನುತ್ತಲು ಗಾಢನಿದ್ರಾಪರವಶೆಯರಾಗಿ ಮಲಗಿದ್ದ ಮುದಿದಾಸಿಯರನ್ನೂ ಚೇಟೀಸಖೀವರ್ಗವನ್ನೂ ಕಂಡು, ಅವರು ಎಚ್ಚರಗೊಳ್ಳದಂತೆ ಸಮ್ಮೋಹ ಕರಣಿಯನ್ನು ಉಪಯೋಗಿಸಿ, ಲಜ್ಜಾಭರದಿಂದ ಅವಕುಂಠನವನ್ನು ಧರಿಸದೆ, ಮಣಿಭೂಷಣಗಳ ಕಾಂತಿಯಿಂದ ಕೃತ್ರಿಮ ಶೋಭೆಯನ್ನು ಪಡೆಯದೆ, ಗಂಧಮಾಲ್ಯಾದಿ ಲಿಪ್ತಗಳಿಲ್ಲದೆ, ಲಾವಣ್ಯರಸಪ್ರವಾಹ ವನ್ನು ಸೂಸುತ್ತಿರುವ ಅವ್ಯಾಜಸುಂದರಿಯೆನಿಸಿದ ಆ ಕನ್ಯಾಮಣಿಯನ್ನು ಕಂಡು, ಮೈಮರೆತವನಾದನು. ಒಂದು ನಿಮಿಷದಲ್ಲಿಯೇ ಆತನು ಎಚ್ಚತ್ತು, "ನಾನೆಂತಹ ಮರುಳನಾದೆನು. ಈ ಕನ್ಯಾಮಣಿಯು ಎಚ್ಚರ ಗೊಂಡಳಾದರೆ ರಸಭಂಗವೂ ಧರ್ಮಭಂಗವೂ ಆಗುವುದರಲ್ಲಿ ಸಂದೇಹವಿಲ್ಲ" ಎಂಬುದಾಗಿ ಮನಸ್ಸನ್ನು ಬಿಗಿ ಹಿಡಿದು, ಆ ಮನೆಯನ್ನೆಲ್ಲಾ ಪರೀಕ್ಷಿಸಿ ನೋಡುತ್ತಿದ್ದನು ಒಂದು ಪೆಟ್ಟಿಗೆಯ ಮೇಲ್ಗಡೆಯಲ್ಲಿ ಚಿತ್ರಪಟ ವೊಂದಿದ್ದಿತು. ಅದನ್ನು ತೆಗೆದುಕೊಂಡು ನೋಡುವಲ್ಲಿ, ಅಂದು ಕುದುರೆಯ ಜೂಜಿನ ದಿನ ತಾನು ಉಚ್ಚೈಶ್ರವದಂತಿದ್ದ ಹಯರತ್ನವನ್ನು

ಏರಿ, ಜಯಾಭಿಲಾಷೆಯಿಂದ ಆ ಕುದುರೆಯನ್ನು ನಾಲ್ಕು ಕಾಲು ಗಳಿಂದಲೂ ವೇಗವಾಗಿ ಓಡಿಸುತ್ತಿದ್ದ ಚಿತ್ರವು ಲಿಖಿತವಾಗಿದ್ದಿತು. ಅದನ್ನು ಕಂಡ ಕೂಡಲೇ ಆನಂದಪರವಶನಾದ ಶೂದ್ರಕನು ಹರ್ಷಾಂ ಬುಧಿಯಲ್ಲಿ ಓಲಾಡುತ್ತ, ಧೈರ್ಯಸಾಹಸಗಳ ಪ್ರೇರಣೆಯಿಂದ ಅದೇ ಚಿತ್ರ ದಲ್ಲಿ ತನ್ನ ಮುಂದೆ, ಅದೇ ಕುದುರೆಯ ಮೇಲೆ ತಾನು ವಿನಯವತಿ ಯೊಂದಿಗೆ ಕುಳಿತಿರುವಂತೆ ಚಿತ್ರಿಸಿ, ಎಂದಿನಂತೆ ಚಿತ್ರಪಟವನ್ನು ಅಲ್ಲಿಯೇ ಇರಿಸಿ, ವಿನಯವತಿಯ ಬೆರಳಿನಲ್ಲಿ ತನ್ನ ಅಂಗುಳೀಯಕವನ್ನು ಮೆಲ್ಲನೆ ತೊಡಿಸಿ, ಆಕೆಯ ಸೌಂದರ್ಯರಸಪ್ರವಾಹವನ್ನು ಮತ್ತೊಮ್ಮೆ ಕಣ್ದಣಿಯೆ ನೋಡಿ, ಬಾಗಿಲನ್ನು ಮುಚ್ಚಿಕೊಂಡು, ಸುರಂಗ ಮಾರ್ಗವಾಗಿ ತನ್ನ ಗುಹಾಮಂದಿರವನ್ನು ಹೊಕ್ಕನು. ಸೂರ್ಯೋದಯವಾಗುವುದಕ್ಕೆ ಇನ್ನೂ ಒಂದರಡು ಗಳಿಗೆಗಳಿದ್ದುವು ಆ ಸಮಯದಲ್ಲಿ ನಿದ್ರಿಸುವುದು ಶ್ರೇಯಸ್ಕರ ವಲ್ಲವೆಂಬ ಭಾವನೆಯಿಂದ ಮಂಚದ ಮೇಲೆಯೇ ಸುಮ್ಮನೆ ಒರಗಿ, ತಾನು ಆ ರಾತ್ರಿ ನೋಡಿದ ಅದ್ಭುತಗಳನ್ನೂ, ಮಾಡಿದ ಸಾಹಸಕಾರ್ಯಗಳನ್ನೂ ಪರ್ಯಾಲೋಚಿಸುತ್ತಿದ್ದು, ಝುಗ್ಗನೆ ಎದ್ದು, ಒಂದೆರಡು ಜೀವರತ್ನಗಳನ್ನೂ ಅದ್ಭುತ ಶಕ್ತಿಯುಳ್ಳ ಕಲವು ಮೂಲಿಕೆಗಳನ್ನೂ ತೆಗೆದುಕೊಂಡು, ಆ ಭವನ ದಿಂದ ಹೊರಬಂದು ಅದರ ಬಾಗಿಲುಗಳನ್ನು ಎಂದಿನಂತೆ ಭದ್ರಪಡಿಸಿ, ತಾನು ಹಿಂದೆ ನೋಡಿದ್ದ ಸೀಳು ದಾರಿಯನ್ನು ಹಿಡಿದು ನಡೆಯ ತೊಡಗಿದನು. ಆದರೆ ಆ ಸಮಯದಲ್ಲಿ ತಾನು ಆ ಕಾರ್ಯವನ್ನು ಕೈಕೊಂಡುದು ಯುಕ್ತ ವಲ್ಲವೆಂದು ತೋರಿತು. ಆದರೂ ಮನಸ್ಸು ಹಿಂದಿರುಗಲು ಒಡಂಬಡಲಿಲ್ಲ.

ಸ್ವಲ್ಪದೂರ ಮುಂದೆ ನಡೆಯಲಾಗಿ ನಡುದಾರಿಯಲ್ಲಿ ಅರ್ಧ ಚಂದ್ರಾಕಾರವಾಗಿದ್ದ ದೊಡ್ಡ ಹಾಸುಗಲ್ಲು ಅಡ್ಡವಾಯಿತು. ಅಲ್ಲಿಂದ ಹಿಂದಿರುಗಿದಲ್ಲದೆ ಉಪಾಯಾಂತರವನ್ನು ಕಾಣದೆ, ನಗರಾಭಿಮುಖವಾಗಿ ತೆರಳುವ ಮಾರ್ಗವನ್ನು ಹಿಡಿದು, ಒಂದು ಹರಿದಾರಿಯಷ್ಟು ದೂರ ನಡೆಯ ಲಾಗಿ, ಆ ದಾರಿಯು ಸಿಪ್ರಾನದಿಯ ತೀರದ ಒಂದು ವಿಶಾಲವಾದ ಭೂಭಾಗಕ್ಕೆ ಬಂದು ಸೇರಿತು. ಅಲ್ಲಿ ಬಂದ ಕೂಡಲೇ ಆ ಭೂಸುರೋತ್ತಮನು, ಚಿರ ಕಾಲ ಪ್ರವಾಸ ಮಾಡಿ ಜನ್ಮದೇಶಕ್ಕೆ ಹಿಂದಿರುಗಿದವನಂತೆಯೂ, ಪಾತಾಳ ಲೋಕವಾಸದಿಂದ ಜುಗುಪ್ಸೆಪಟ್ಟು ವಿಶಾಲವಾದ ಭೂಭಾಗವನ್ನು ಸೇರಿದವ ನಂತೆಯೂ, ಆಶ್ಚರ್ಯಹರ್ಷಭರಿತನಾದನು. ಅಲ್ಲಿಂದ ಸ್ವಲ್ಪ ಮುಂದೆ ದಡದ

ಮೇಲೆಯೇ ನಡೆದು ಬಂದು ಸ್ನಾನ ಘಟ್ಟವನ್ನು ಸೇರಿ, ಹಿಂದೆ ತಾನು ಮೂರು ದಿನಗಳಲ್ಲಿಯೂ ಲೋಪಗೊಳಿಸಿದ್ದ ಸ್ನಾನಾಹ್ನಿಕಗಳನ್ನು ಯಥಾ ವಿಧಿಯಾಗಿ ನೆರವೇರಿಸಿ, ಆಹಾರವಿಲ್ಲದೆ ಬಸವಳಿದ ಕಾರಣ ಮಂದಗಮನ ದಿಂದ ನಡೆಯುತ್ತ, ಮೆಲ್ಲಗೆ ಪಟ್ಟಣವನ್ನು ಹೊಕ್ಕು, ಮುಂದೆ ನಡೆಯ ಲಾರದೆ ಒಬ್ಬ ಬ್ರಾಹ್ಮಣನ ಮನೆಯ ಜಗುಲಿಯ ಮೇಲೆ ವಿಶ್ರಮಿಸಿ, ಆ ಮನೆಯ ಯಜಮಾನನ ಆತಿಥ್ಯವನ್ನು ಸ್ವೀಕರಿಸಿ, ಸ್ವಲ್ಪ ಕಾಲ ಮರಳಿ ವಿಶ್ರಾಂತಿಗೊಂಡು, ಅಲ್ಲಿಯೇ ಸಂಜೆಯ ವರೆಗೆ ಮಲಗಿದ್ದು, ಸಂಧ್ಯಾ ಸಮಯದಲ್ಲಿ ಮರಳಿ ನದಿಯ ತೀರದಲ್ಲಿಯೇ ಸಂಧ್ಯಾನಿಯಮಗಳನ್ನು ನೆರ ವೇರಿಸಿ, ಮಹಾಕಾಳೇಶ್ವರನ ದೇವಾಲಯವನ್ನು ಹೊಕ್ಕು, ದೇವರನ್ನು ಸಂದರ್ಶಿಸಿ, ರಾತ್ರಿ ಸುಮಾರು ಹತ್ತು ಗಳಿಗೆಯ ಸಮಯಕ್ಕೆ ತನ್ನ ಮನೆ ಯನ್ನು ಸೇರಿದನು.

ಅತ್ತ ಧರ್ಮವಿಲಾಸದಲ್ಲಿ ಮರುದಿನ ಬೆಳಗಿನ ಜಾಮದಲ್ಲಿ ವಿನಯ ವತಿಯು ಎಚ್ಚತ್ತು ಕಣ್ಣುಗಳನ್ನು ಒರಸಿಕೊಳ್ಳುವಾಗ ತನ್ನ ಬೆರಳಿನಲ್ಲಿದ್ದ ಅಂಗುಳೀಯಕವನ್ನು ನೋಡಿ, 'ಹಿಂದೆ ತನಗೆ ಸರ್ಪದಂಶವಾಗಿದ್ದ ಸಮಯ ದಲ್ಲಿ ಶೂದ್ರಕನು ತನ್ನ ಬೆರಳಿನಲ್ಲಿ ತೊಡಿಸಿದ್ದ ಉಂಗುರವೇ ಇದು' ಎಂಬು ದಾಗಿ ನಿಶ್ಚಯಿಸಿ, ಮರಳಿ ತನಗೆ ಅಂತಹ ಆಪತ್ತು ಸಂಭವಿಸಿತೊ ಏನೋ ಎಂಬುದಾಗಿ ಕಳವಳಗೊಂಡು, "ಇದೆಲ್ಲವೂ ಹಾಳು ಕನಸು" ಎಂದು ಕೊಂಡು ಮರಳಿ ಮಲಗಿಕೊಂಡಳು. ಕಣ್ಣಿಗೆ ನಿದ್ರೆಯೇ ಬಾರದಿರಲು, ಎದ್ದು ಕುಳಿತು ಸುತ್ತಲೂ ನೋಡುವಲ್ಲಿ ಯಾವ ವಸ್ತುಗಳೂ ವ್ಯತ್ಯಸ್ತ ವಾಗಿರಲಿಲ್ಲ. ಆದರೆ ಚಿತ್ರಪಟವನ್ನು ನೋಡುವಾಗ ಅದರಲ್ಲಿ ತನ್ನ ಪ್ರತಿ ಬಿಂಬವು ಲಿಖಿತವಾಗಿದ್ದಂತೆಯೂ, ಬಣ್ಣದ ಬಟ್ಟಲಿನಲ್ಲಿ ಕುಂಚಿಕೆಯು ತೇವವಾಗಿದ್ದಂತೆಯೂ ಕಂಡು, ಅವಳ ಆಶ್ಚರ್ಯಕ್ಕೆ ಪಾರವೇ ಇಲ್ಲ ದಾಯಿತು. ಚಿತ್ರವಾದರೋ ಅತ್ಯದ್ಭುತವಾಗಿರುವುದು, ಯಾರು ಬರೆದಿರ ಬಹುದು ? ಒಂದು ವೇಳೆ ಅನಂಗಲೇಖೆಯೇ ಇದನ್ನು ಬರೆದಿದ್ದ ಪಕ್ಷದಲ್ಲಿ ಇದರಿಂದ ಏನೇನು ಅನರ್ಥವು ಸಂಭವಿಸುವುದೋ ಹೇಳಬಲ್ಲವರಾರು ? ಎಂಬುದಾಗಿ ತದೇಕ ದೃಷ್ಟಿಯಿಂದ ಚಿತ್ರವನ್ನೇ ನೋಡುತ್ತಿರಲು, ಅದರ ಅಡಿಯಲ್ಲಿ ಸಣ್ಣ ಅಕ್ಷರಗಳು ಕಂಡುಬಂದುವು ಕುತೂಹಲದಿಂದ ಓದಿ ನೋಡಿದಳು ದೇಹವೆಲ್ಲವೂ ಕಂಟಕಿತವಾಯಿತು. ಭೀತಿಯಿಂದ ಸುತ್ತಲೂ

ನೋಡಿದಳು. ಯಾರೂ ಎಚ್ಚತ್ತಿರಲಿಲ್ಲ ಇನ್ನೊಮ್ಮೆ ಓದಿದಳು. ಮತ್ತೊಮ್ಮೆ ಓದಿದಳು. ಅವಳ ಆನಂದಕ್ಕೆ ಪಾರವೇ ಇರಲಿಲ್ಲ. ಅವಳ ಮನಸ್ಸಿನಲ್ಲಿ ಸಾವಿರಾರು ಸೂಜಿಗಳನ್ನು ಒಮ್ಮೆಯೇ ಚುಚ್ಚಿದಂತೆ ಭಾಸವಾಯಿತು. “ಚಿತ್ರವನ್ನು ಬರೆದು ನನ್ನ ಬೆರಳಿನಲ್ಲಿ ತನ್ನ ಉಂಗುರವನ್ನು ತೊಡಿಸಿದವನು ಶೂದ್ರಕನೇ ಎಂಬುದಕ್ಕೆ ಸಂದೇಹವಿರಲಿಲ್ಲ. ಆದರೆ ಆತನು ಒಳಹೊಕ್ಕ ಬಗೆ ಯಾವುದು? ಮನೆಯ ಕದಗಳು ಮುಚ್ಚಿದಂತೆಯೇ ಇರುವುವಲ್ಲಾ! ತನ್ನನ್ನು ಏಕೆ ಎಚ್ಚರಗೊಳಿಸಲಿಲ್ಲ? ಒಂದು ವೇಳೆ ಆತನ ವಿರಹದಿಂದಲೇ ಕೃಶೆಯಾಗಿರುವ ನನ್ನನ್ನು ಕಂಡು ಮರುಕಗೊಂಡು ಎಚ್ಚರಗೊಳಿಸಲೊಲ್ಲದೆ ಹೊರಟು ಹೋಗಿರಬಹುದೇ? ಇಂತು ನಿರ್ದಯಭಾವವನ್ನು ತೋರಿದುದು ಆತನಿಗೆ ಯುಕ್ತವೇ? ಈತನನ್ನು ಕ್ರೂರಾತ್ಮನೆಂಬುದಾಗಿ ಹೇಳಬಾರದೇಕೆ? ಒಂದು ವೇಳೆ ಶಿಲ್ಪವಿದ್ಯಾವಿಶಾರದನಾದ ಆತನು ಈ ಮಂದಿರವನ್ನು ಹುಗುವುದೂ ಒಂದು ಆಶ್ಚರ್ಯವಲ್ಲ ಆತನಂತೆಯೇ ಮತ್ತಾರೂ ಬಾರದಿದ್ದರೆ ಅದೇ ಪರಮಭಾಗ್ಯವಲ್ಲವೇ? ಈ ಅಂತಃಪುರಗಳಲ್ಲಿ ಶಿಲ್ಪಚಾತುರ್ಯಗಳು ಹೇರಳವಾಗಿರುವುವೆಂಬುದಾಗಿ ನಮ್ಮ ಅತ್ತಿಗೆಯು ಹೇಳುತ್ತಿದ್ದಳು. ಮಂತ್ರಿಗಳೂ ಅದನ್ನೇ ಅನುವಾದಮಾಡಿದ್ದರು ಈಗ ಕಯ್ಮೀರಿ ಹೋಯಿತು. ಇನ್ನು ಯೋಚಿಸಿ ಫಲವೇನು? ಪಂಜರದಿಂದ ಹಾರಿಹೋದ ಗಿಣಿಯು ಮರಳಿ ಕಯ್ಗೆ ಸಿಕ್ಕಿದರೆ ಅದಕ್ಕೆ ತಕ್ಕ ಬುದ್ಧಿವಾದವನ್ನು ಹೇಳಿದರಾದರೂ ಫಲಿಸಬಹುದು” ಎಂಬುದಾಗಿ ಸಂಕಲ್ಪತರಂಗಗಳಲ್ಲಿ ತೇಲಾಡುತ್ತಿರಲು, ಪ್ರಾತಃಕಾಲದ ಘಂಟೆ ಕೇಳಿಸಿತು. ಕೂಡಲೇ ಪರಿವಾರದವರೆಲ್ಲರೂ ಒಬ್ಬೊಬ್ಬರಾಗಿ ಎಚ್ಚರಗೊಂಡರು.

ಬೆಳಗಾಗುತ್ತಲೇ ರಾಜಪುತ್ರಿಯು ತನ್ನ ಅಣ್ಣನಾದ ಯುವರಾಜ ಜಯಸ್ವಾತಿಯನ್ನು ಕರೆಕಳುಹಿ, ಹಿಂದಣ ರಾತ್ರಿ ನಾಲ್ಕನೆಯ ಜಾವದಲ್ಲಿ ತಾನು ಕೆಟ್ಟ ಕನಸನ್ನು ಕಂಡಂತೆಯೂ, ಧರ್ಮವಿಲಾಸದಲ್ಲಿ ಯಾವುದೋ ಹಾಳುಭೂತವು ನೆಲೆಗೊಂಡಿರುವುದೆಂತಲೂ, ಒಡನೆಯೇ ಧರ್ಮವಿಲಾಸವನ್ನು ಬಿಟ್ಟುಹೋಗದಿದ್ದರೆ ತಾನು ಬದುಕುವ ಸಂಭವವಿಲ್ಲವೆಂತಲೂ ಭಯಕಂಪಿತೆಯಾಗಿ ತಿಳಿಸಿದಳು. ಇದೆಲ್ಲವನ್ನೂ ಕೇಳಿದ ಜಯಸ್ವಾತಿಯು ಅವಳ ಹೆದರಿಕೆಯು ನಿರಾಧಾರವಾದುದೆಂತಲೂ, ಅಲ್ಲಿ ಯಾವ ಭೀತಿಗೂ ಅವಕಾಶವಿಲ್ಲವೆಂತಲೂ ಎಷ್ಟು ಬಗೆಯಿಂದ ತಿಳಿಯೆ ಹೇಳಿದರೂ ವಿನಯ

ವತಿಯು ಮಾತ್ರ ಅದಕ್ಕೆ ಸಮ್ಮತಿಸಲಿಲ್ಲ. ಜಯಸ್ವಾತಿಯು ಕರ್ತವ್ಯ ಶೂನ್ಯನಾಗಿ ಮಂತ್ರಿಯಾದ ಧರ್ಮಪಾಲನಿಗೆ ಸಭೆಗೆ ಬರಮಾಡಿ ಈ ಸಮಾಚಾರವನ್ನು ತಿಳಿಯಪಡಿಸಿದನು.

ಮಂತ್ರಿವರನು, ಮೊತ್ತಮೊದಲು ಜ್ಯೋತಿರ್ವಿಲಾಸವೇ ರಾಣೀವಾಸವೆಂತಲೂ, ಲಕ್ಷ್ಮೀವಿಲಾಸದಲ್ಲಿಯೇ ಕನ್ಯೆಯರು ವಾಸಮಾಡತಕ್ಕುದೆಂತಲೂ, ಧರ್ಮವಿಲಾಸವನ್ನು ಪರರಾಜರ ಬಿಡದಿಗಾಗಿಯೇ ಏರ್ಪಡಿಸಿದ್ದರೆಂತಲೂ, ಅದರ ಅರ್ಧಭಾಗವು ಅಂತಃಪುರಕ್ಕೆ ಸೇರಿರುವುದೆಂತಲೂ ಮಿಕ್ಕ ಅರ್ಧಭಾಗವು ಪ್ರತ್ಯೇಕವೆಂತಲೂ ಈ ಕಾರಣದಿಂದ ಪ್ರಕೃತದಲ್ಲಿ ರಾಜಪುತ್ರಿಯು ವಾಸವಾಗಿರುವ ಭವನವು ಪುರುಷನಿವಾಸಯೋಗ್ಯವೇ ಹೊರತು ಸ್ತ್ರೀವಾಸಾರ್ಹವಲ್ಲವೆಂತಲೂ ತಿಳಿಯಪಡಿಸಿದನು. ಅನಂಗಲೇಖೆಯು ಮಾತ್ರ ತನ್ನ ಅತ್ತೆಯಾದ ಮಹಾರಾಜ್ಞಿಯು ಲೋಕಾಂತರವನ್ನೈದಿದ ಬಳಿಕ, ಜ್ಯೋತಿರ್ವಿಲಾಸದಲ್ಲಿ ವಾಸಮಾಡಲು ಧೈರ್ಯಸಾಲದೆ, ಲಕ್ಷ್ಮೀವಿಲಾಸವನ್ನು ಬಲಾತ್ಕಾರದಿಂದ ಆಕ್ರಮಿಸಿಕೊಂಡ ಕಾರಣ ವಿಧಿಯಿಲ್ಲದೆ ವಿನಯವತಿಯು ಧರ್ಮವಿಲಾಸವನ್ನು ನೇರಬೇಕಾಯಿತು ಇನ್ನು ಆ ಕನ್ಯಾರತ್ನವನ್ನು ಧರ್ಮವಿಲಾಸದಲ್ಲಿಯೇ ನಿಲಗೊಳಿಸುವುದು ಎಷ್ಟು ಮಾತ್ರವೂ ತರವಲ್ಲವೆಂದು ಮಂತ್ರಿವರನು ಹೇಳುತ್ತಿದ್ದನು.

ಅಷ್ಟರಲ್ಲಿ ಬೇಟೆಯಿಂದ ಹಿಂದಣ ರಾತ್ರಿಯೇ ಹಿಂದಿರುಗಿದ್ದ ರಾಜನು ತನ್ನ ಗೆಳೆಯರೊಂದಿಗೂ ಪರಿವಾರದೊಂದಿಗೂ ಆಸ್ಥಾನಮಂಟಪಕ್ಕೆ ಬಂದು ಈ ವಿವರವನ್ನು ಕೇಳಿ, «ಲಕ್ಷ್ಮೀವಿಲಾಸವೆಂಬ ಹೆಸರು ಕಿವಿಗಳಿಗೆ ಆನಂದವನ್ನುಂಟು ಮಾಡುವುದು. ನಾನು ಲಕ್ಷ್ಮೀವಿಲಾಸವನ್ನು ಬಿಡಲಾರೆನು» ಎಂದನು. ಮಂತ್ರಿಯಾದ ಧರ್ಮಪಾಲನು ವಿನಯವತಿಯನ್ನು ಜ್ಯೋತಿರ್ವಿಲಾಸದಲ್ಲಿ ವಾಸಮಾಡುವಂತೆ ನಿಯಮಿಸಿ, ಅದಕ್ಕೆ ತಕ್ಕ ಏರ್ಪಾಡುಗಳನ್ನು ಮಾಡುವಂತೆ ಪರಿವಾರದವರಿಗೆ ಅಪ್ಪಣೆಕೊಟ್ಟು, ಆ ದಿನ ಸೂರ್ಯಾಸ್ತಮಯದೊಳಗಾಗಿ ವಿನಯವತಿಯು ಜ್ಯೋತಿರ್ವಿಲಾಸವನ್ನು ಸೇರುವ ಹಾಗೆ ಮಾಡುವ ಭಾರವು ತನ್ನದೆಂಬುದಾಗಿ ಹೇಳಿ, ಯುವರಾಜನಿಂದ ಬೀಳ್ಕೊಂಡು ಹೋದನು. ಇದೆಲ್ಲವನ್ನು ರಾಜನ ಮೂಲಕವಾಗಿ ತಿಳಿದ ಅನಂಗಲೇಖೆಯು ಒಡನೆಯೇ ವಿನಯವತಿಯು ವಾಸವಾಗಿದ್ದ ಧರ್ಮವಿಲಾಸಕ್ಕೆ ಬಂದು, ಆಕೆಯ ಮನಸ್ಸನ್ನು ಸಮಾಧಾನಗೊಳಿಸುವವಳಂತೆ ಬೆಡಗು

ಮಾತುಗಳನ್ನಾಡುತ್ತ, "ಪ್ರಿಯ ನಾದಿನಿ! ಹೆದರಬೇಡ. ಈ ರಾತ್ರಿ ನಿನ್ನನ್ನು ಖಂಡಿತವಾಗಿಯೂ ಇಲ್ಲಿರಗೊಳಿಸೆನು. ಈಗಲೇ ಜ್ಯೋತಿರ್ವಿಲಾಸಕ್ಕೆ ಹೋಗಿ ನಿನ್ನ ವಾಸಕ್ಕೆ ತಕ್ಕ ಸಲಕರಣೆಗಳನ್ನೆಲ್ಲಾ ಅಲ್ಲಿ ಸಜ್ಜುಗೊಳಿಸುವಂತೆ ಏರ್ಪಾಡು ಮಾಡುವೆನು" ಎಂದು ಹೇಳಿ ಅಲ್ಲಿಂದ ತನ್ನ ಅಂತಃಪುರವನ್ನು ಹೊಕ್ಕು, "ನನ್ನ ಪ್ರಯತ್ನಗಳೆಲ್ಲವೂ ಒಂದೊಂದು ಬಗೆಯಾಗಿ ವಿಫಲವಾಗುತ್ತಿರುವುವು. ಧರ್ಮವಿಲಾಸವನ್ನು ಬಿಟ್ಟು ವಿನಯವತಿಯು ಜ್ಯೋತಿರ್ವಿಲಾಸವನ್ನು ಹೊಕ್ಕಳಾದರೆ ನನ್ನ ಕೈವಿಾರುವುದು ದಿಟ ಈಗಲೇ ನನ್ನ ಕಾರ್ಯವನ್ನು ಹೇಗಾದರೂ ಸಾಧಿಸಲೇ ಬೇಕು" ಎಂಬುದಾಗಿ ಯೋಚಿಸುತ್ತಿದ್ದಳು. ಅಷ್ಟರಲ್ಲಿ ಭೋಜನಕಾಲದ ಘಂಟಾನಾದವು ಕೇಳಬಂತು. ಆಕೆ ಭೋಜನಶಾಲೆಯನ್ನು ಹೊಕ್ಕು, ಊಟದ ಶಾಸ್ತ್ರವನ್ನು ಮಾಡಿದಳು. ಅವಳ ಹೊಟ್ಟೆಯಲ್ಲಿ ವಿನಯವತಿಯ ನಿರ್ಮೂಲನೋಪಾಯತರಂಗಗಳು ಒಂದನ್ನೊಂದು ಬಡಿದುಕೊಳ್ಳುತ್ತಿದ್ದುದರಿಂದ ಮೃಷ್ಟಾನ್ನಕ್ಕೆ ಅಲ್ಲಿ ಎಡೆಯಿರಲಿಲ್ಲ ಭೋಜನಾನಂತರ ಮುಂಚಿನಂತೆಯೇ ಶಯನಗೃಹವನ್ನು ಹೊಕ್ಕು ಮಂಚದ ಮೇಲೆ ಮಲಗಿಕೊಂಡು, ಒಂದೊಂದು ನೆಪದಿಂದ ಒಬ್ಬೊಬ್ಬಳಂತೆ ಪರಿವಾರದವರನ್ನೆಲ್ಲಾ ಹೊರಗೆ ಕಳುಹಿಸುತ್ತ ಚೆನ್ನಾಗಿ ಪರೀಕ್ಷಿಸಿ ನೋಡಿ, ಯಾರೂ ಇಲ್ಲದಿರುವುದನ್ನು ಕಂಡು, ತನ್ನ ಸಾಹಸಕಾರ್ಯವನ್ನು ನೆರವೇರಿಸಲು ಅನುವಾದಳು

ಇತ್ತ ವಿನಯವತಿಯು ತನ್ನ ಅತ್ತಿಗೆಯು ಹೊರಟು ಹೋದ ಕೂಡಲೇ ತನ್ನ ಸ್ನಾನಪೂಜಾದಿಗಳನ್ನು ನೆರವೇರಿಸಿದಳು ಭೋಜನಕ್ಕಿಂತ ಮುಂಚೆ ಚಿತ್ರಗತವಾದ ತನ್ನ ಇಷ್ಟ ದೈವನಾದ ಶೂದ್ರಕನನ್ನು ಒಮ್ಮೆ ಸಂದರ್ಶಿಸಲು ತನ್ನ ಅಂತಃಪುರವನ್ನು ಹೊಕ್ಕಳು. ಶರೀರವೆಲ್ಲವೂ ಬೆವರತೊಡಗಿತು. ಮನಸ್ಸಿನಲ್ಲಿ ಭಯಕಂಪಗಳು ತಲೆದೋರಿದುವು. "ಇನ್ನು ಆರೆಗಳಿಗೆ ಇಲ್ಲಿಯೇ ಇದ್ದರೆ ನಿನ್ನ ಆಯುಷ್ಯವು ಮುಗಿಯುವುದು ಬೇಗನೆ ಇಲ್ಲಿಂದ ಪಾರಾಗುವ ಮಾರ್ಗವನ್ನು ನೋಡಿಕೊಳ್ಳು; ನಿನ್ನ ಬುದ್ಧಿಯು ನಿನ್ನ ಕಯ್ಯಲ್ಲಿರಲಿ. ಇತರರ ಬೇಳುವೆಯ ಮಾತುಗಳಿಗೆ ಮರುಳಾಗಬೇಡ. ನಿನ್ನ ಮನೋನಾಯಕನು ನಿನ್ನನ್ನು ಕೈಬಿಡಲಾರನು ಆತನಿಂದ ನಿನಗೆ ಮೇಲ್ಮೆಯುಂಟು. ಮೊದ್ದು ಹುಡುಗೀ! ಇನ್ನೂ ತಡಮಾಡುವೆಯಾ? ಹೊರಡು, ಬೇಗನೆ ಹೊರಡು, ದೇವರು ನಿನ್ನನ್ನು ಕಾಪಾಡುವನು"

ಎಂಬುದಾಗಿ ಸ್ವರ್ಗವಾಸಿನಿಯಾದ ಅವಳ ಜನನಿಯು ಇದಿರಾಗಿ ನಿಂತು ಮಾತನಾಡಿದಂತೆ ಕೇಳಿಸಿತು. ಆನಂದದುಃಖಭರಿತೆಯಾಗಿ ಸುತ್ತಲೂ ನೋಡಿದಳು ಯಾರೂ ಕಾಣಿಸಲಿಲ್ಲ. ಪರಲೋಕಗತೆಯಾದ ಜನನಿಯನ್ನು ಮನಸಾ ವಂದಿಸಿದಳು. ಕಣ್ಣುಗಳಲ್ಲಿ ಪ್ರವಾಹವು ಹರಿಯತೊಡಗಿತು. ಕೂಡಲೇ ಪರಿವಾರದವರನ್ನು ಕರೆದು ಅತ್ಯಾವಶ್ಯಕ ವಸ್ತುಗಳನ್ನು ಮಾತ್ರವೇ ತೆಗೆದುಕೊಂಡು ಹೊರಗೆ ಬಂದಳು ಉತ್ತರ ಕ್ಷಣದಲ್ಲಿಯೇ ಧರ್ಮವಿಲಾಸವು ಸಾವಿರ ಸಿಡಿಲುಗಳ ಶಬ್ದದೊಂದಿಗೆ ನೆಲಕ್ಕೆ ಓಗ್ಗುಡಿಸಿ ಬಿದ್ದಿತು. ಇಷ್ಟರಲ್ಲಿ ವಿನಯವತಿಯು ಲಕ್ಷ್ಮೀವಿಲಾಸದ ಹಜಾರದಲ್ಲಿ ನಡೆದು ಬರುತ್ತಿದ್ದಳು. ಭಯಂಕರವಾದ ಆ ಶಬ್ದವನ್ನು ಕೇಳಿ ಗಾಬರಿಯಿಂದ ಸುತ್ತಲೂ ನೋಡಿದಳು. ಧರ್ಮವಿಲಾಸದ ಪರಿಣಾಮವು ಮನಸ್ಸಿಗೆ ಗೋಚರವಾಗಿ ತನ್ನ ಜನನಿಯ ವಾತ್ಸಲ್ಯವನ್ನು ಮನಸ್ಸಿನಲ್ಲಿಯೇ ಕೊಂಡಾಡಿದಳು. ಕಣ್ಣುಗಳು ಕಾಣಲಿಲ್ಲ. ಮಂಕು ಹಿಡಿದವಳಂತೆ ಶೂನ್ಯ ದೃಷ್ಟಿಯಿಂದ ನಿಂತಲ್ಲಿಯೇ ನಿಂತು ಬಿಟ್ಟಳು

ಆ ಶಬ್ದವನ್ನು ಕೇಳಿ ಅರಸನೂ ಜಯಸ್ವಾತಿಯೂ ಧರ್ಮಪಾಲನೂ "ಹಾ! ಕೆಟ್ಟೆವು. ವಿನಯವತಿಯ ಪಾಡೇನು? ಎಂತಹ ಪ್ರಮಾದವು ಸಂಭವಿಸಿತು. ಅಯ್ಯೋ! ನನ್ನ ಮುದ್ದು ಮಗೂ!" ಎಂಬುದಾಗಿ ಪ್ರಲಾಪಿಸುತ್ತ ಬೇಗನೆ ಓಡಿಬಂದರು, ಮತ್ತು ಸುರಕ್ಷಿತೆಯಾಗಿ ಹೊರನಿಂತಿರುವ ವಿನಯವತಿಯುವನ್ನು ಕಂಡು ಆನಂದಭರಿತರಾದರು ಆದರೆ ಧರ್ಮವಿಲಾಸವು ಮಾತ್ರ ವಿನಯವತಿಯ ಮೂವರ ಅಂತಃಪುರಸೇವಕರ ಪ್ರಾಣಗಳನ್ನು ಬಲಿಗೊಳ್ಳದೆ ಬಿಡಲಿಲ್ಲ. ಎಷ್ಟು ಪ್ರಯತ್ನಮಾಡಿದರೂ ಅವರ ಎಲುಬುಗಳು ಕೂಡ ದೊರೆಯಲಿಲ್ಲ. ಇದರಿಂದ ಧರ್ಮಪಾಲನೂ ವಿನಯವತಿಯೂ ಯುವರಾಜನೂ ಬಹಳವಾಗಿ ವಿಷಣ್ಣರಾದರು. ಇಷ್ಟರಲ್ಲಿ ಅನಂಗಲೇಖೆಯು ಆಗ ತಾನೇ ಸುಖನಿದ್ದೆಯಿಂದ ಎಚ್ಚರಗೊಂಡವಳಂತೆ ಕಣ್ಣುಗಳನ್ನು ಉಜ್ಜಿಕೊಳ್ಳುತ್ತ, ಏನೂ ತಿಳಿಯದವಳಂತೆ ಹೊರಗೆ ಬಂದು ಅಂತರಂಗದಲ್ಲಿ ಸಂತೋಷವು ಉಕ್ಕಿ ಬರುತ್ತಿರಲು ಹೊರಗಡೆಗೆ ಕಪಟ ದುಃಖವನ್ನು ನಟಿಸುತ್ತ, "ಅಯ್ಯೋ! ವಿನಯವತಿಯ ಗತಿಯೇನು?" ಎಂಬುದಾಗಿ ಕೂಗಿಕೊಳ್ಳುತ್ತ, "ಕೂದಲಿನಷ್ಟು ತಪ್ಪಿತು. ಇಲ್ಲವಾದರೆ ರಾಜಪುತ್ರಿಯು ಧರ್ಮವಿಲಾಸಕ್ಕೆ ಬಲಿಯಾಗಬೇಕಾಗುತ್ತಿದ್ದಿತು. ದೇವರೇ

ಕಾಪಾಡಿದನು” ಎಂಬುದಾಗಿ ವಿನಯವತಿಯ ಪರಿವಾರದವರೊಡನೆ ಮಾತ ನಾಡುತ್ತ, ಸಿಡಿಲು ಬಡಿದಂತೆ ಮನಸ್ಸಿನಲ್ಲಿ ಮರುಗುತ್ತ, ವಿನಯವತಿಯು ಬಳಿಗೆ ಬಂದಳು.

ಅಷ್ಟರಲ್ಲಿ ಅಂತಃಪುರದ ವೃದ್ಧಸುವಾಸಿನಿಯರು ವಿನಯವತಿಗೆ ಪೀಡಾಪರಿಹಾರಾರ್ಥವಾಗಿ ಕಿಸುರುನೀರನ್ನು ನಿವಾಳಿಸುತ್ತಿದ್ದರು ಅನಂಗ ಲೇಖೆಯು ಅಲ್ಲಿಗೆ ಬಂದು, “ಅಯ್ಯೋ? ನನ್ನ ಮುದ್ದು ಕಂದಾ! ನಿನಗೆ ಎಂತಹ ಆಪತ್ತು ಸಂಭವಿಸುತ್ತಿದ್ದಿತು! ಎಲ್ಲಿಯಾದರೂ ಪೆಟ್ಟು ತಗುಲಿತೇ? ಬಾ. ಈಗ ಸದ್ಯಕ್ಕೆ ನನ್ನ ಅಂತಃಪುರದಲ್ಲಿಯೇ ಇರು ಸುಮುಹೂರ್ತ ದಲ್ಲಿ ಜ್ಯೋತಿರ್ವಿಲಾಸವನ್ನು ಪ್ರವೇಶಿಸುವುದು ಕ್ಷೇಮಕರ” ಎಂದು ಹೇಳಿ, ಸಂಜೆಯ ವರೆಗೂ ತನ್ನ ಸಮೀಪದಲ್ಲಿಯೇ ಅವಳನ್ನು ಇರಿಸಿಕೊಂಡಿದ್ದು, ಸಾಯಂಕಾಲ ಗೋಧೂಳಿಲಗ್ನದಲ್ಲಿ ದಿವ್ಯಮಂಗಳತೂರ್ಯಧ್ವನಿಗಳೊಂದಿಗೆ ಜ್ಯೋತಿರ್ವಿಲಾಸವನ್ನು ಹೊಕ್ಕು, ತಾನೂ ಆ ರಾತ್ರಿ ಅಲ್ಲಿಯೇ ಇದ್ದು, ಆಕೆಯನ್ನು ಸಮಾಧಾನಪಡಿಸಿದಳು

ಧರ್ಮವಿಲಾಸವು ಕುಸಿದು ಬಿದ್ದ ವರ್ತಮಾನವು ಊರಲ್ಲೆಲ್ಲಾ ಮೊದಲೇ ಹರಡಿಕೊಂಡಿದ್ದಿತು ಆದರೆ ಯಾರೊಬ್ಬರೂ ಧರ್ಮವಿಲಾಸವು ಕುಸಿದು ಬೀಳಲು ಕಾರಣವೇನೆಂಬುದಾಗಿ ಪ್ರಶ್ನೆಮಾಡಲಿಲ್ಲ. ಧರ್ಮಪಾಲನು ಮಾತ್ರ ಈ ವಿಷಯವನ್ನು ಕುರಿತು ಅರಸನನ್ನು ಅನೇಕ ಬಾರಿ ಪ್ರಶ್ನೆಮಾಡಿದನು. ಅರಸನಿಗೆ ಇದರ ಗುಟ್ಟು ಒಂದೂ ತಿಳಿಯದ ಕಾರಣ ಯಾವ ಪ್ರತ್ಯುತ್ತರ ವನ್ನೂ ಕೊಡಲಾರದೆ ಸುಮ್ಮನಿದ್ದನು. ಧರ್ಮವಿಲಾಸವು ಕುಸಿದು ಬಿದ್ದಾಗ ಅನಂಗಲೇಖೆಯು ಎಲ್ಲಿದ್ದಳೆಂಬ ಸಂಗತಿಯನ್ನು ಧರ್ಮಪಾಲನು ಅಂತಃಪುರ ಪರಿಚಾರಿಕೆಯರಿಂದ ತಿಳಿದುಕೊಂಡನು. ಆದರೆ ರಾಣಿಯ ಮೇಲೆ ಅಪ ವಾದವನ್ನು ಹೊರಿಸುವುದು ಯಾರಿಗಾದರೂ ಸಾಧ್ಯವೇ? ಹೇಗೋ ರಾಜ ಪುತ್ರಿಯು ಬದುಕಿದಳಲ್ಲವೇ? ಎಂಬುದಾಗಿ ಸಂತೋಷಪಡುತ್ತ, ದೈವವನ್ನು ಕೊಂಡಾಡುತ್ತ, ತನ್ನ ಕರ್ತವ್ಯವನ್ನು ಜಾಗರೂಕತೆಯಿಂದ ನಡೆಯಿಸುತ್ತ, ರಾಜಪುತ್ರಿಯ ಯೋಗಕ್ಷೇಮಗಳನ್ನು ನೋಡಿಕೊಳ್ಳುವ ವಿಷಯದಲ್ಲಿ ಮೊದಲಿಗಿಂತ ಇಮ್ಮಡಿಯಾಗಿ ಜಾಗರೂಕನಾಗಿರತೊಡಗಿದನು.

ಇತ್ತ ಶೂದ್ರಕನಾದರೋ, ವಿನಯವತಿಯು ಧರ್ಮವಿಲಾಸವನ್ನು ಬಿಟ್ಟುಹೋಗುವ ಸಮಾಚಾರವನ್ನು ಕೇಳಿ ಈ ಅನರ್ಥಕಾರ್ಯವನ್ನು

ಅನಂಗಲೇಖೆಯೇ ನಡೆಯಿಸಿರಬೇಕೆಂಬುದಾಗಿ ತನ್ನ ಬುದ್ಧಿಬಲದಿಂದ ನಿಶ್ಚಯಿಸಿ, ವಿನಯವತಿಯು ಪಾರಾದುದಕ್ಕೆ ಸಂತಸಗೊಂಡು, ಅನಂಗಲೇಖೆಯ ಸಾಹಸವನ್ನು ನಿಂದಿಸುತ್ತಿದ್ದನು

ಮರುದಿನ ಸಂಘಿಲಕನು ಚಂಡಸೇನಾದಿಗಳೊಂದಿಗೆ ದ್ಯೂತಸಭೆಯಲ್ಲಿದ್ದಾಗ ಶೂದ್ರಕನು ಅದೇ ಮಾರ್ಗವಾಗಿ ಬೀದಿಯಲ್ಲಿ ಹೋಗುತ್ತಿದ್ದನು. ಇವನನ್ನು ನೋಡಿದ ಕೂಡಲೇ ಭಯ, ವಿಷಾದ, ವಿಸ್ಮಯಗಳು ಒಮ್ಮೆಯೇ ಸಂಘಿಲಕನನ್ನು ಆವರಿಸಿದುವು ಆಟವನ್ನು ನಿಲ್ಲಿಸಿ ಒಂದೆರಡು ನಿಮಿಷ ಸುಮ್ಮನೆ ಕುಳಿತು ಬಳಿಕ ಧೈರ್ಯವನ್ನು ತಳೆದು, ಹೊರಗೆ ಬಂದು, "ಏನಯ್ಯಾ! ಯಾವಾಗ ಬಂದೆ? ಆ ಗುಹೆಯು ಹೇಗಿದೆ? ನಮಗೂ ಸ್ವಲ್ಪ ಅದರ ವಿವರವನ್ನು ಹೇಳುವೆಯಂತೆ! ಇತ್ತಬಾ, ಕುಳಿತುಕೊ" ಎಂಬುದಾಗಿ ಶೂದ್ರಕನನ್ನು ಒಳಗೆ ಕರೆದುಯ್ದನು

ಆಗ ಈ ತರುಣವೀರನು ಅವರ ನಡೆವಳಿಯನ್ನು ಕುರಿತು ಮನಸ್ಸಿನಲ್ಲಿ ಜುಗುಪ್ಸೆಪಟ್ಟರೂ "ನೆನ್ನೆ ತಾನೆ ಬಂದೆನು ಸುರಂಗವು ವಾಸಕ್ಕೆ ಶ್ಲಾಘ್ಯವಾಗಿದೆ. ಒಳಗಡೆ ಅನೇಕ ಸೌಕರ್ಯಗಳುಂಟು ಅಲ್ಲಿ ಅನೇಕ ಮಂದಿ ಋಷಿಶ್ರೇಷ್ಠರು ತಪಸ್ಸುಮಾಡುತ್ತಿರುವರು ನಿಮ್ಮಂತಹ ಬಹಳ ಮಂದಿ ಶಿಷ್ಯರು ಅವರನ್ನು ಶುಶ್ರೂಷೆ ಮಾಡಿಕೊಂಡು ಅಲ್ಲಿಯೇ ಇರುತ್ತಾರೆ. ಅವರಿಗೆ ಇನ್ನೂ ಇಬ್ಬರು ಶಿಷ್ಯರ ಅವಶ್ಯಕತೆ ಇರುವುದಂತೆ. ನಿಮ್ಮಿಬ್ಬರನ್ನು ಕೂಡಲೇ ಕಳುಹಿಸ ಬೇಕಾಗಿ ನನ್ನ ಸಂಗಡ ಹೇಳಿದರು" ಎಂದು ಉತ್ತರಕೊಟ್ಟನು

"ಬಹಳ ದಿನಗಳಿಂದಲೂ ಆ ಗುಹೆಯೊಳಗೆ ಏನಿರಬಹುದೆಂಬುದನ್ನು ಪರೀಕ್ಷಿಸುವ ಕುತೂಹಲವಿದ್ದಿತು. ನೂತನವಸ್ತು ಪರೀಕ್ಷೆಯಲ್ಲಿ ನೀನೇ ಸಮರ್ಥನೆಂಬ ಭಾವನೆಯಿಂದ ನಿನ್ನನ್ನು ಕಳುಹಿಸಿದೆವು" ಎಂಬುದಾಗಿ ಸಂಘಿಲಕನು ಹೇಳಿದನು

ಆ ಮಾತಿಗೆ ಶೂದ್ರಕನು "ಜೂಜನ್ನು ನಿಲ್ಲಿಸಿ ಮಾತನಾಡುತ್ತಿರುವೆ. ನಿನ್ನ ಒಡನಾಡಿಗಳೆಲ್ಲರೂ ನಿನಗಾಗಿ ಕಾದಿರುವರು ನಡೆಯಲಿ, ನಿಮ್ಮ ಉತ್ಸಾಹವನ್ನು ನಾನೇಕೆ ಭಂಗಗೊಳಿಸಲಿ? ನಿನ್ನ ಶಿಷ್ಯನನ್ನು ಎಷ್ಟರ ಮಟ್ಟಿಗೆ ನಿಪುಣನನ್ನಾಗಿ ಮಾಡಿರುವೆ?" ಎಂದನು.

ಸಂಘಿಲಕನು "ಶಿಷ್ಯನಾರು?" ಎಂದನು.

ಶೂದ್ರಕನು "ಮತ್ತಾರು ? ನಿನ್ನ ವಿದ್ಯಾನೈಪುಣ್ಯವನ್ನೆಲ್ಲ ಕಲಿತಿರುವ ಶಕಾರನು ಅಯ್ಯೋ ! ಪಾಪ ! ಅವನಿಗೂ ಜೂಜಿನಲ್ಲಿ ಪಾಂಡಿತ್ಯವನ್ನು ಕಲಿಸಲಾರೆಯಾ ? " ಎಂದನು.

ಸಂಫಿಲಕನಿಗೆ ರೇಗಿತು "ರುಚಿಯನ್ನರಿಯದ ಮೂರ್ಖರೆಲ್ಲರೂ ನಿನ್ನಂತೆಯೇ ಜೂಜನ್ನು ದೂಷಿಸುವರು" ಎಂದನು

ಸಂಫಿಲಕನ ಮಾತನ್ನು ಕೇಳಿ, ಶೂದ್ರಕನು "ನಿನಗೆ ಯುದ್ಧವೆಂದರೆ ಎಷ್ಟು ಭಯವೋ ನನಗೆ ದಾಳಗಳೆಂದರೆ ಅಷ್ಟು ಅಂಜಿಕೆ" ಎಂಬುದಾಗಿ ಉತ್ತರ ಕೊಟ್ಟನು.

"ನೀನು ಸುಮ್ಮನೆ ಹೆದರಿಕೊಳ್ಳುವೆ. ಜೂಜೆಂಬುದು ರಣಕ್ಕಿಂತಲೂ ಎಷ್ಟೋ ಕಷ್ಟಸಾಧ್ಯವಾದುದು. ಜೂಜಾಡುವುದರಲ್ಲಿ ನೈಪುಣ್ಯವನ್ನು ಸಂಪಾದಿಸಲಾರದವನು ಯುದ್ಧದಿಂದ ತನ್ನ ರಣಕಂಡೂತಿಯನ್ನು ಶಮನಮಾಡಿಕೊಳ್ಳುವನು ಜಯಲಕ್ಷ್ಮಿಯನ್ನು ಸಾಧಿಸಬೇಕಾದರೆ ದ್ಯೂತಕ್ಕಿಂತಲೂ ಸುಲಭವಾದ ಮಾರ್ಗವಿಲ್ಲ" ಎಂದು ಸಂಫಿಲಕನು ಉಪನ್ಯಸಿಸಿದನು

ಶೂದ್ರಕನು "ಯುದ್ಧವನ್ನು ಜೂಜಿಗೆ ಹೋಲಿಸುವುದು ನಗೆಗೇಡು ಎರಡರಲ್ಲಿಯೂ ಸೋಲುಗೆಲುವುಗಳು ಸಮಾನವಾಗಿರುವುದರಿಂದ ಇದು ಔಪಚಾರಿಕವಲ್ಲದೆ ಅವೆರಡು ಎಂದಿಗೂ ಸಮಾನಗಳೆನಿಸಲಾರವು ರಣಾಂಗಣದಲ್ಲಿ ನಿಂತು ಚತುರಂಗಸೇನೆಯನ್ನು ಇದಿರಿಸಲಾರದ ಗಂಡಸರೂ, ಮುದುಕರೂ, ಹುಡುಗರೂ ಈ ರೀತಿ ಚದುರಂಗದಾಟದಿಂದ ಕಾಲಕಳೆಯುವರು" ಎಂದು ಅವನ ಬಾಯಿಮುಚ್ಚಿಸಿದನು.

ಸಭಾಧ್ಯಕ್ಷನು ಈ ಮಾತುಗಳನ್ನೆಲ್ಲ ಕೇಳಿ ಎದ್ದುಬಂದು, "ನಿನಗೆ ಅಷ್ಟರ ಮಟ್ಟಿನ ಸಾಹಸವಿರುವುದಾದರೆ, ನಮ್ಮಲ್ಲಿ ಯಾವನೊಂದಿಗಾದರೂ ದ್ವಂದ್ವ ಯುದ್ಧ ಮಾಡು ನಿನ್ನ ಸಾಹಸವನ್ನಾದರೂ ನೋದಿಬಿಡುವ" ಎಂದು ಹಂಗಿಸಿ ಮಾತನಾಡಿದನು.

"ಯಾರಾದರೂ ಸರಿಯೇ ಆಗಬಹುದು ಪೌರುಷವಿದ್ದರಾಯಿತು. ಸ್ಥಳವನ್ನೂ ಕಾಲವನ್ನೂ ಗೊತ್ತುಮಾಡು" ಎಂಬುದಾಗಿ ಶೂದ್ರಕನು ಹೇಳಿದನು.

ಸಂಘಿಲಕನು "ನಾಳೆಯ ಸಂಜೆ ದೇವೀವನದಲ್ಲಿ ನಮ್ಮ ಶೌರ್ಯ ಸಾಹಸಗಳನ್ನು ಒರೆಸಿನೋಡುವ" ಎನಲು, ಶೂದ್ರಕನು ಅದಕ್ಕೆ ಸಮ್ಮತಿಸಿ ಅಲ್ಲಿಂದ ಹೊರಟು ತನ್ನ ಪರಮಮಿತ್ರನಾದ ಬಂಧುದತ್ತನ ಮನೆಗೆ ಹೋಗಿ, ನಡೆದ ಸಮಾಚಾರವನ್ನೆಲ್ಲ ವಿಶದಗೊಳಿಸಿದನು

ಆಗ ಬಂಧುದತ್ತನು "ನೀಚರ ಸಹವಾಸವು ಅಪಾಯಕರವು. ಅಲ್ಪರೊಂದಿಗೆ ಇಂತಹ ಪಣವನ್ನು ಕಟ್ಟಿದರೆ ಕ್ಷೇಮವು ದೊರೆಯಲಾರದು ಅಂತಹವರನ್ನು ಗೆದ್ದು ನಾವು ಸಾಧಿಸಬೇಕಾಗಿರುವ ದೇಶಕೋಶಗಳಾದರೂ ಯಾವುವು ? ಎಂದಿಗೂ ಋಜುಮಾರ್ಗದಲ್ಲಿ ನಡೆಯಲಾರದವರನ್ನು ನಾವು ಸೋಲಿಸಿದರೂ ಕೀರ್ತಿಯಿಲ್ಲ; ಸೋತರೆ ಅಪಮಾನವು ದಿಗಂತವನ್ನು ವ್ಯಾಪಿಸುವುದು. ಒಂದು ವೇಳೆ ಯಾವುದಾದರೊಂದು ರೀತಿಯಿಂದ ನಾವು ಮೋಸಹೋದರೆ ನಮ್ಮ ಮುಂದಣ ಮಹತ್ತರವಾದ ಪ್ರಯತ್ನಗಳೆಲ್ಲವೂ ಭಗ್ನವಾಗುವುವಲ್ಲವೇ ? ನರಿಯು ದೂರದಲ್ಲಿ ನಿಂತು ಕೂಗಿಕೊಳ್ಳುತ್ತ ಬಾಲವನ್ನು ಅಲ್ಲಾಡಿಸಿದರೇನಾಯಿತು ? ಸಿಂಹವು ಅದನ್ನು ಸರಕು ಮಾಡುವುದೇ ? ಜೂಜುಗಾರರು, ಚಾಡಿಕೋರರು, ಹೆಂಡಕುಡುಕರು, ಮಾಟಗಾರರು, ಜಗಳಗಂಟರು, — ಇಂತಹವರ ಸಲುಗೆಯು ನಮ್ಮ ಗೌರವಕ್ಕೆ ಹಾನಿಕರವೇ ಹೊರತು ಶ್ರೇಯಸ್ಕರವಲ್ಲ ಈ ದ್ವಂದ್ವಯುದ್ಧವು ನನಗೆ ಸುತರಾಂ ಸಮ್ಮತವಿಲ್ಲ ದೈವಬಲವಿಲ್ಲದಿರುವಾಗ ಒಂದು ಹುಲ್ಲುಕಡ್ಡಿಯಿಂದ ಪ್ರಾಣಾಂತಕರವಾದ ಆಪತ್ತು ಒಡ್ಡಿ ಬಂದು, ಮನುಷ್ಯನ ಜೀವಿತವೇ ಹಾಳಾಗುವುದು ಆದುದರಿಂದ ಜಾಗರೂಕನಾಗಿರುವುದು ಲೇಸು" ಎಂಬುದಾಗಿ ಒಕ್ಕಣಿಸಿದನು ಶೂದ್ರಕನು ಸ್ವಲ್ಪಕಾಲ ಯೋಚಿಸಿ "ನಾನು ಮಾತು ಕೊಟ್ಟಾಯಿತು ಅವರಿಗಾದರೂ ಅಂತಹ ಮಹತ್ವವೆತ್ತಣದು ? ಅಟ್ಟಕ್ಕೆ ಹಾರದ ಗುಬ್ಬಿಯು ಆಕಾಶಕ್ಕೆ ಹಾರಬಲ್ಲುದೇ ?" ಎನ್ನುತ್ತ ಆತನ ಸ್ನೇಹಾಭಿಮಾನಗಳಿಗೆ ತಲೆದೂಗುತ್ತ ಅಲ್ಲಿಂದ ಹೊರಟನು.

ಮರುದಿನ ಇಳೀ ಹೊತ್ತಿನ ಸಮಯಕ್ಕೆ ಶೂದ್ರಕನು ದೇವೀವನವನ್ನು ಸೇರಿದನು. ಶಕಾರ, ಸಂಘಿಲಕ, ಬಂಧುದತ್ತ ಮುಂತಾದವರೂ ತಮ್ಮ ತಮ್ಮ ವೈಭವಗಳೊಂದಿಗೆ ಅಲ್ಲಿ ಮೊದಲೇ ಬಂದು ಸೇರಿದ್ದರು. ಒಡನೆಯೇ ಸಂಘಿಲಕನೂ ಶೂದ್ರಕನೂ ಕವಚಖೇಟಕಗಳನ್ನು ಧರಿಸಿ, ಯುದ್ಧಸನ್ನದ್ಧ

ರಾದರು ಶೂದ್ರಕನು ಸಂಘಿಲಕನ ಖಡ್ಗಪ್ರಹಾರಗಳನ್ನು ಲೀಲಾಮಾತ್ರ ದಿಂದ ತಪ್ಪಿಸಿಕೊಳ್ಳುತ್ತ ಪ್ರೇಕ್ಷಕವರ್ಗದ ಮೆಚ್ಚುಗೆಗೆ ಈಡಾದನು ತನ್ನ ಖಡ್ಗವನ್ನು ಚಿತ್ರವಿಚಿತ್ರಗಳಾದ ವಲನಕ್ರಮಗಳಿಂದ ತಿರುಗಿಸುತ್ತ ಸಮಯ ವರಿತು ಪ್ರತಿಭಟನ ಕವಚವನ್ನು ಭೇದಿಸಿದನು ಸಂಘಿಲಕನ ಕರವಾಲವು ಅನೂಪವೆಂಬ ದೇಶದ ಕಬ್ಬಿಣದಿಂದ ನಿರ್ಮಿತವಾಗಿ ಜಲಮಾರ್ಗದೋಷ ಯುಕ್ತವಾಗಿದ್ದಿತು ಶೂದ್ರಕನು ಕಳಿಂಗಪರ್ವತಜನ್ಯವಾದ ಸುವರ್ಣಪಿಂಜರ ವೆಂಬ ಲೋಹದಿಂದ ನಿರ್ಮಿತವಾಗಿದ್ದ, ಶಂಖ, ಚಕ್ರ, ಪ್ರಾಕಾರರೇಖೆಗಳಿಂದ ಯುಕ್ತವಾದ ಚಂದ್ರಹಾಸವನ್ನು ಹಿಡಿದಿದ್ದನು ಸಂಘಿಲಕನು ತನ್ನ ಖಡ್ಗ ವನ್ನು ವತ್ಸನಾಭಿಯೆಂಬ ವಿಷದಿಂದ ಲೇಪಿಸಿದ್ದನು. ಶೂದ್ರಕನು ಕದಳೀ ರಸವನ್ನು ತನ್ನ ಖಡ್ಗಕ್ಕೆ ಕುದಿಸಿದ್ದನು ಇವರಿಬ್ಬರೂ ಪ್ರತಿ ನಿಮಿಷದಲ್ಲಿಯೂ ಪ್ರೇಕ್ಷಕವರ್ಗಕ್ಕೆ ವಿಸ್ಮಯಭಯಗಳನ್ನುಂಟುಮಾಡುವಂತೆ ಹೋರಾಡುತ್ತಿರು ನಲ್ಲಿ, ಶೂದ್ರಕನ ಕರವಾಲದ ಹಿಡಿಯು ಕಳಚಿ ಹೋದ ಕಾರಣ ಖಡ್ಗವು ಕೆಳಗೆ ಬಿದ್ದಿತು ಅದನ್ನು ಹೆಕ್ಕಿಕೊಳ್ಳುವಷ್ಟರಲ್ಲಿ ಸಂಘಿಲಕನು ಮೇಲೆ ಬಿದ್ದು ಆತನನ್ನು ಹೊಡೆಯಬಂದನು. ಇಷ್ಟರಲ್ಲಿ ಶೂದ್ರಕನು ತನ್ನ ಖಡ್ಗ ವನ್ನು ಅಡ್ಡ ಹಿಡಿದು ಸಂಘಿಲಕನ ಪೆಟ್ಟನ್ನು ತಪ್ಪಿಸಿಕೊಂಡನು ಸಂಘಿ ಲಕನ ಖಡ್ಗವು ಎರಡು ಚೂರಾಗಿ ಕೆಳಗೆ ಬಿದ್ದಿತು ಬೀಳುವಾಗ ಅದರ ಒಂದು ಮೊನೆ ಸಂಘಿಲಕನ ದೇಹದಲ್ಲಿ ನಾಟಿಕೊಂಡಿತು ಒಡನೆ ಅವನು ಮೂರ್ಛಾಕ್ರಾಂತನಾಗಿ ನೆಲದ ಮೇಲೆ ಬಿದ್ದನು "ಓ! ಖಡ್ಗವು ವಿಷ ಪಾಯಿತ" ಎಂದು ಶೂದ್ರಕನು ತಟ್ಟನೆ ನಿಶ್ಚಯಿಸಿ, ಬಂಧುದತ್ತ ಶಕಾರ ರೊಂದಿಗೆ "ಇವನನ್ನು ಕೂಡಲೇ ವಿಷವೈದ್ಯರಲ್ಲಿಗೆ ಕರೆದುಯ್ದು ಚಿಕಿತ್ಸೆ ಮಾಡಿಸಿದಲ್ಲದೆ ಬದುಕುವುದು ಹೇಗೋ! ಬೇಗನೆ ಜಾಂಗಲಿಕರನ್ನು ಕರೆ ಕಳುಹಿಸುವುದು ಲೇಸು" ಎಂದನು.

ಒಂದು ಗಳಿಗೆಯಲ್ಲಿ ವಿಷವೈದ್ಯರು ಬಂದು ಪರೀಕ್ಷಿಸಿ ಆ ಖಡ್ಗವು ವಿಷಪಾಯಿತವೆಂದು ನಿರ್ಧರಿಸಿ, ಸಂಘಿಲಕನಿಗೆ ಮಾಡತಕ್ಕ ಚಿಕಿತ್ಸೆಯನ್ನು ಹೇಳಿ, ಅವನು ಮೂರು ರಾತ್ರಿಗಳ ವರೆಗೆ ಕದಲದೆ ಮಲಗಿರ ಬೇಕೆಂಬು ದಾಗಿ ಸೂಚಿಸಿದರು

ಶಕಾರನು, ಆ ಖಡ್ಗವನ್ನು ಶೂದ್ರಕನೇ ತಂದನೆಂಬುದಾಗಿ ಸಾರ ತೊಡಗಿದನು. ಅಲ್ಲಿ ನೆರದಿದ್ದವರೆಲ್ಲರೂ "ಅಲ್ಲ ಸಂಘಿಲಕನೇ ಅದನ್ನು

ತಂದಿದ್ದನು. ಎಂತಹ ಕಟುಕನಾದರೂ ವಿಷಧಾರಾಪಾಯಿತವಾದ ಖಡ್ಗ ವನ್ನು ತನ್ನ ಇದಿರಾಳಿಗೆ ಕೊಟ್ಟು ಆ ಕರವಾಲವನ್ನು ತನ್ನ ಮೇಲೆ ಪ್ರಯೋಗಿಸಲು ಸಮ್ಮತಿಸುವನೇ ? " ಎಂಬುದಾಗಿ ಎಷ್ಟು ವಾದಿಸಿದರೂ ಕೇಳದೆ, ಆಸ್ಥಾನದಲ್ಲಿಯೂ ಅರಮನೆಯಲ್ಲಿಯೂ ಅಂತೆಯೇ ಗಳಹತೊಡಗಿ ದನು. ಕೇಳಿದವರೆಲ್ಲರೂ ತಮತಮಗೆ ಬೇಕಾದ ಪಕ್ಷವನ್ನು ಹಿಡಿದು ಮಾತನಾಡ ತೊಡಗಿದರು.

ಅರಸನು ಧರ್ಮಪಾಲಮಂತ್ರಿಯೊಂದಿಗೆ ಆಸ್ಥಾನದಲ್ಲಿದ್ದಾಗ ಶಕಾರನು ಈ ವರದಿಯನ್ನು ಬಿನ್ನಯಿಸಿದನು. "ಸಂಘಿಲಕನು ಬದುಕುವ ಹಾಗಿಲ್ಲ. ಈ ಶೂದ್ರಕನ ದುರುದುಂಬಿತನವು ತಡೆಯಲಾಗದು. ಇಂತಹ ದುರುಳ ನನ್ನು ಆಸ್ಥಾನದಲ್ಲಿಟ್ಟುಕೊಂಡಿರುವುದು ಶುದ್ಧ ಮೌಢ್ಯವೇ ಸರಿ" ಎಂದು ಮುಂತಾಗಿ ಮೇಲ್ಮೇಲೆ ಒಕ್ಕಣಿಸಿದನು

ಇಷ್ಟರಲ್ಲಿ ಮಂತ್ರಿಯಾದ ಚಕೋರನು ಅಲ್ಲಿಗೆ ಬಂದು "ಶೂದ್ರಕನು ಹೆಮ್ಮೆಯ ಮೂಟೆ. ಅರಸನು ಮಾಡಿದ ಅಭಿಮಾನವು ಅವನಿಗೆ ತಲೆಗೇರಿದೆ. ಈ ರೀತಿ ಕಾಡ ಹತ್ತಿದರೆ ಪ್ರಜೆಗಳ ಗತಿಯೇನು ?" ಎನ್ನಲು, ರಾಜನು ಕೂಡಲೇ ಶೂದ್ರಕನನ್ನು ಕರೆಕಳುಹಿದನು. ತನ್ನ ಶೌರ್ಯವು ವಿಪರೀತಫಲ ಪ್ರದವಾಗಿ ಪರಿಣಮಿಸಿದುದನ್ನು ಕಂಡು ಶಂಕಿತನಾದರೂ ಶೂದ್ರಕನು ಎದೆ ಗುಂದದೆ ರಾಜನ ಸನ್ನಿಧಾನವನ್ನು ಸೇರಿದನು

ರಾಜನು "ನೀನು ಸಂಘಿಲಕನೊಂದಿಗೆ ದ್ವಂದ್ವಯುದ್ಧಮಾಡಿದಾಗ ಪ್ರಾಣಾಪಾಯಕರವಾದ ಪೆಟ್ಟು ಅವನಿಗೆ ತಗಲಿತೇ ? ಇಲ್ಲವೇ ?" ಎಂದು ಪ್ರಶ್ನೆಮಾಡಿದನು.

ಆದಕ್ಕೆ ಶೂದ್ರಕನು "ಇಂತಹ ಹೋರಾಟಕ್ಕೆ ಅವನೇ ಕಾರಣನು, ಏಟು ಅವನ ಖಡ್ಗದೋಷದಿಂದಲೇ ಸಂಭವಿಸಿತು; ನನ್ನ ದೋಷ ಇಲ್ಲ, ಉದ್ದೇಶ ಪೂರ್ವಕವಾಗಿಯೇ ಅವನು ಆ ಖಡ್ಗಕ್ಕೆ ವಿಷ ಕುಡಿಸಿದ್ದನು" ಎಂದು ಪ್ರತ್ಯುತ್ತರಕೊಟ್ಟನು.

ಆಗ ಶಕಾರನು "ವಿಷಯುಕ್ತವಾದ ಖಡ್ಗವನ್ನು ಸಂಘಿಲಕನಿಗೆ ಶೂದ್ರಕನೇ ತಂದು ಕೊಟ್ಟನು. ಅವನನ್ನು ಹೊರಗೆಡಹದಿದ್ದರೆ ಕ್ಷೇಮವಿಲ್ಲ. ವಿಷಖಡ್ಗವನ್ನು ತಂದವರಾರೆಂಬುದನ್ನು ತಿಳಿದಲ್ಲದೆ ನಿರ್ಣಯಿಸಲಾಗದು" ಎಂದು ಪುಷ್ಟೀಕರಿಸಿದನು.

"ಅದನ್ನು ಯಾರು ತಂದಿದ್ದರೂ ಸಂಘಿಲಕನನ್ನು ಅದರಿಂದ ಚುಚ್ಚಿ ಸುದು ಮಾತ್ರ ನಿಶ್ಚಯವಷ್ಟೆ?" ಎಂಬುದಾಗಿ ಚಕೋರನು ವಾದಿಸಿದನು

ಅರಸನಿಗೆ ಕೋಪವು ತಲೆಗೇರಿತು. ಅವನು ಶೂದ್ರಕನನ್ನು ಕುರಿತು 'ನಿನ್ನ ತಂದೆಯ ಮೇಲಣ ಗೌರವಾಭಿಮಾನಗಳಿಂದ ಇದುವರೆಗೂ ನಿನ್ನ ದೌರಾತ್ಮ್ಯವನ್ನು ಸಹಿಸಿದೆನು ಇನ್ನು ತಡೆಯಲಶಕ್ಯ. ನಾಳೆ ಬೆಳಗಾಗು ವುದರೊಳಗಾಗಿ ನೀನು ನಮ್ಮ ರಾಜ್ಯವನ್ನು ಬಿಟ್ಟು ಎಲ್ಲಿಯಾದರೂ ಹೋಗ ಬೇಕು. ನಮ್ಮ ರಾಜ್ಯದ ಗಡಿಯಲ್ಲಿ ಕಾಲೂರಿದೆಯಾದರೆ ಘೋರವಾದ ಶಿಕ್ಷೆಗೆ ಗುರಿಯಾಗುವೆ. ನಿನ್ನ ಘೋರಾಪರಾಧಕ್ಕೆ ಈ ಶಿಕ್ಷೆಯು ಸಾಲದು. ಆದರೆ ನಮ್ಮ ಪ್ರಿಯ ಸೋದರಿಯನ್ನು ಸರ್ಪದಂಶಕಾಲದಲ್ಲಿ ನೀನು ಕಾಪಾ ಡಿರುವೆಯಾಗಿ, ನಿನಗೆ ಈ ವಿಧವಾದ ಪ್ರವಾಸಶಿಕ್ಷೆಯನ್ನು ಮಾತ್ರ ವಿಧಿಸಿರು ವೆನು" ಎಂಬುದಾಗಿ ಶಾಸನಮಾಡಿದನು.

ಆಗ ಶೂದ್ರಕನು "ರಾಜಾಧಿರಾಜನೇ! ನನ್ನ ಗುಣದೋಷಗಳನ್ನು ಚೆನ್ನಾಗಿ ವಿಮರ್ಶೆಮಾಡಿ ನ್ಯಾಯಾನ್ಯಾಯಗಳನ್ನು ಕಂಡುಹಿಡಿದು, ನಿಷ್ಪಕ್ಷ ಪಾತ ಬುದ್ಧಿಯಿಂದ ಪರಿಶೋಧಿಸಿದಲ್ಲಿ, ನನಗೆ ಇಂತಹ ಶಿಕ್ಷೆಯನ್ನು ವಿಧಿಸು ತ್ತಿರಲಿಲ್ಲ. ನನ್ನಲ್ಲಿ ತುಸವಾದರೂ ದೋಷವಿಲ್ಲ" ಎಂಬುದಾಗಿ ಬಿನ್ನ ಯಿಸಿದನು.

ಅರಸನು "ಎಲಾ! ನಮಗೆ ನೀತಿಯನ್ನು ಉಪದೇಶಿಸಬಂದೆಯಾ? ಬಾಯಿಂದ ಹೇಳಲಾರೆವು ನೀನು ನಮ್ಮ ಅಂತಃಪುರ ದ್ರೋಹಿಯೆಂಬದನ್ನು ನಾವು ಅರಿಯೆವೆಂದು ತಿಳಿದಿರುವೆಯಾ? ಅಂದು ರಾತ್ರಿಯ ವೇಳೆ ಏಕಾಂತ ವಾಗಿ ನೀನು ನಮ್ಮ ಅಂತಃಪುರವನ್ನು ಹೊಕ್ಕು, ದೇವಿಯೊಂದಿಗೆ ಮಾತ ನಾಡಲಿಲ್ಲವೇ?" ಎಂಬುದಾಗಿ ಪ್ರಶ್ನೆ ಮಾಡಿದನು.

ಶೂದ್ರಕನು "ನಾನು ಅಂತಃಪುರ ದ್ರೋಹಿಯೂ ಅಲ್ಲ, ಧರ ಪರಾಙ್ಮುಖನೂ ಅಲ್ಲ" ಎಂದನು

ಹಾಗಾದರೆ "ನೀನು ರಾಣಿಯೊಡನೆ ಮಾತನಾಡಲಿಲ್ಲವೇ?" ಎಂದು ಅರಸನು ಒದರಿದನು ಶೂದ್ರಕನು "ದೇವಿಯವರು ಕರೆಕಳುಹಿದಕಾರಣ—" ಎನ್ನುತ್ತಿರುವಷ್ಟರಲ್ಲಿಯೇ "ಸಾಕು, ನಿನ್ನ ಅಸಂಬದ್ಧಪ್ರಲಾಪವನ್ನು ನಿಲ್ಲಿಸು. ದೇವಿಯೊಡನೆ ಮಾತನಾಡಿದೆಯೇ? ಇಲ್ಲವೇ?—" ಎಂಬುದಾಗಿ ರಾಜನು ಗುಡುಗುಡಿಸಿ ಕೇಳಿದನು.

ಶೂದ್ರಕನು ಒಪ್ಪಿಕೊಂಡನು. ಇಷ್ಟರಲ್ಲಿ ಶಕಾರನು "ವಿನಯವತಿಗೆ ಹಾವು ಕಚ್ಚಿದ ಸಮಾಚಾರವೇ ಸುಳ್ಳು ಹೇಗಾದರೂ ರಾಜಪುತ್ರಿಯನ್ನು ಒಲಿಸಿಕೊಳ್ಳಬೇಕೆಂಬ ದುರಭಿಸಂಧಿಯಿಂದ ಶೂದ್ರಕನೇ ಹೂಡಿದ ತಂತ್ರ ಗಳಿವು" ಎಂದು ಹೇಳಿ, ಬೆಂಕಿಯ ಮೇಲೆ ತುಪ್ಪವನ್ನು ಹೊಯ್ದನು.

ಧರ್ಮಪಾಲಮಂತ್ರಿಯು "ಮಹಾರಾಜನೆ! ಸತ್ಯವನ್ನು ಶೋಧಿಸಿದಲ್ಲದೆ ಶಿಕ್ಷಿಸುವುದು ಧರ್ಮವಲ್ಲ" ಎಂದನು.

ಶಕಾರನು "ಈ ಮುದುಕನು ಎಂತಹ ಉರಿಯನ್ನಾದರೂ ಆರಿಸಲು ಪ್ರಯತ್ನಿಸುತ್ತಿರುವನು" ಎಂದನು.

ಆಗ ಶೂದ್ರಕನು "ಮೊನ್ನೆ ಸಂಘಿಲಕನೂ ಚಂಡಸಿಂಹನೂ ಊರ ಹೊರಗಡೆ—" ಎನ್ನುತ್ತಿರುವಷ್ಟರಲ್ಲಿಯೇ "ಎಲಾ! ಸಾಕು. ಬಾಯಿ ಮುಚ್ಚು. ಇದು ರಾಜಸಭೆ ಮೈಮೇಲೆ ಪ್ರಜ್ಞೆಯಿರಲಿ" ಎಂದು ಶಕಾರನು ಗರ್ಜಿಸಿದನು.

ಕಡೆಗೆ ಅರಸನು "ಶೂದ್ರಕಾ! ನಿನ್ನ ನಡೆವಳಿಯು ಸಹಿಸಲಶಕ್ಯ ವಾಯಿತು. ಇದನ್ನು ನೀನೇನೂ ಇಲ್ಲಿ ಸಮರ್ಥನ ಮಾಡಬೇಕಾದುದಿಲ್ಲ. ಇನ್ನು ಬಾಯ್ದೆರೆದೆಯಾದರೆ ಕಠಿನ ಶಿಕ್ಷೆಗೆ ಗುರಿಯಾಗಬೇಕಾದೀತು" ಎನ್ನುತ್ತ, ರಾಜಭಟರನ್ನು ಕರೆದು ಶೂದ್ರಕನನ್ನು ಹೊರಗೆ ತಳ್ಳುವಂತೆ ಆಣತಿಯಿತ್ತನು.

ಧರ್ಮಪಾಲನು ಅರಸನನ್ನು ಕುರಿತು "ಪ್ರಭುವು ಶಾಂತಿಯನ್ನು ವಹಿಸುವುದು ಶ್ರೇಯಸ್ಕರವು ಶೂದ್ರಕನು ಆತ್ಮಗೌರವವುಳ್ಳವನು. ಕೆಟ್ಟ ಹಾದಿಯನ್ನು ತುಳಿಯತಕ್ಕವನಲ್ಲ. ಅಪರಾಧವೂ ಅವನ ಮೇಲೆ ಋಜು ವಾಗಿ ಸ್ಥಿರಪಡಲಿಲ್ಲ. ಶಿಕ್ಷೆಯಾದರೋ ಅತ್ಯುಗ್ರವಾಗಿರುವುದು ವಿದ್ಯೆ, ವಿನಯ, ತೇಜಸ್ಸು, ಸಾಹಸ, ಪರಾಕ್ರಮಗಳಿಗೆ ಗಣಿಯಂತಿರುವ ಈತನ ಮುಖಭಾವದಲ್ಲಿ ಕಳಂಕು ಕಾಣುವುದಿಲ್ಲ. ಧರ್ಮಾಸನವನ್ನೇರಿದ ಪ್ರಭುಗಳು ಈ ರೀತಿ ಏಕಪಕ್ಷಶ್ರವಣಮಾತ್ರದಿಂದ ತೀರ್ಮಾನಗೊಳಿಸು ವುದು ನ್ಯಾಯವಲ್ಲ ಧರ್ಮಾಧಿಕಾರಿಯು ಯಾವಾಗಲೂ ಅಪರಾಧಿಯ ಪಕ್ಷವನ್ನೇ ವಹಿಸಿರಬೇಕೆಂಬುದಾಗಿ ಅರ್ಥಶಾಸ್ತ್ರಕಾರರು ಅಭಿಪ್ರಾಯಪಡು ವರು. ಇಂತಿರಲು ನಾವು ಶೂದ್ರಕನಿಗೆ ಇಂತಹ ಪ್ರವಾಸಶಿಕ್ಷೆಯನ್ನು ವಿಧಿಸುವುದು ಶ್ರೇಯಸ್ಕರವೆಂದು ಭಾವಿಸಲಾರೆನು. ಪ್ರವಾಸಶಿಕ್ಷೆಯಿಂದ ಪರಿತಪ್ತನಾದ ಈತನು ಆತ್ಮಗೌರವವನ್ನು ಕಾಪಾಡಿಕೊಳ್ಳುವ ಸಲುವಾಗಿ

ಕ್ರೋಧವನ್ನು ತಾಳಿ, ಪರರಾಜರ ವಶವಾದನಾದರೆ ಧರ್ಮಾಸನದ ಭಂಗಕ್ಕೆ ಕಾರಣವಾಗಬಹುದು ಮತ್ತು ವಿದ್ಯೆ, ಆಭಿಜಾತ್ಯ, ಶೌರ್ಯ, ರೂಪ, ಸಂಪತ್ತಿಗಳಿಂದೊಪ್ಪುವ ಮಾನನಿಧಿಯಾದ ಈತನನ್ನು ನಾವು ತಿರಸ್ಕರಿಸಿದಲ್ಲಿ ನ್ಯಾಯಪಕ್ಷಪಾತಿಗಳಾದ ಪ್ರಜೆಗಳೆಲ್ಲರೂ ಆತನ ಕಡೆ ಪಕ್ಷಪಾತವನ್ನು ವಹಿಸುವರು. ಇದರಿಂದ ಪ್ರಜೆಗಳಲ್ಲಿ ರಾಜಭಕ್ತಿಯು ಕಡಮೆಯಾಗಿ ರಾಜ್ಯದ ಬಿಗಿಯು ಸಡಿಲವಾಗುವುದು. ಇಷ್ಟರ ಮೇಲೆ ಪ್ರಭುಚಿತ್ತ" ಎಂಬುದಾಗಿ ಅರಿಕೆಮಾಡಿದನು.

ಆಗ ಚಕೋರನು ಎದ್ದು, "ಮಹಾಪ್ರಭು! ಅಪರಾಧಿಗಳನ್ನು ಶಿಕ್ಷಿಸುವುದು ರಾಜಕರ್ತವ್ಯ ಉದಾಸೀನಭಾವವನ್ನು ತಳೆದರೆ ಪ್ರಜೆಗಳು ಉದ್ಧತರಾಗಿ ದುರ್ಮಾರ್ಗಗಾಮಿಗಳಾಗುವರು. ದುಷ್ಟರನ್ನು ದಂಡಿಸುವುದೇ ಶ್ರೇಯಸ್ಕರವಲ್ಲದೆ ಅಭಿಮಾನದಿಂದ ತಟಸ್ಥರಾದರೆ ರಾಜ್ಯಕ್ಕೆ ಹಾನಿಯೊದಗುವುದು ದಿಟ ಇಂತಹವರ ವಿಷಯದಲ್ಲಿ ಶಾಂತಿಯನ್ನು ತಳೆವ ಅರಸನಿಗೆ ಮೇಲ್ಮೆಯಿಲ್ಲ" ಎಂದು ಕುತರ್ಕಿಸಿದನು

ಆ ಮಾತಿಗೆ ಧರ್ಮಪಾಲನು "ಮಿತ್ರಾ! ಚಕೋರಾ! ಅಪರಾಧಿಗಳನ್ನು ದಂಡಿಸುವುದು ದೋಷವೆಂಬುದಾಗಿ ನಾನು ಹೇಳಲಿಲ್ಲ ಸರ್ವರಲ್ಲಿಯೂ ಸಮತಾಬುದ್ಧಿಯು ಯೋಗಿಗಳಿಗೆ ಮಾತ್ರವೇ ತಕ್ಕುದಲ್ಲದೆ ಅದು ಅರಸರಿಗೆ ವಿಹಿತವಲ್ಲವೆಂಬುದನ್ನು ನಾನೂ ಬಲ್ಲೆನು ದೋಷವು ಶೂದ್ರಕನ ಮೇಲೆ ಆರೋಪಿತವಾಗಿದೆಯೆ ಹೊರತು ನಿರ್ಧಾರವಾಗಲಿಲ್ಲ. ವಿಚಾರದಿಂದ ವಿಮರ್ಶಿಸದೆ ತೀಕ್ಷ್ಣದಂಡನೆಯನ್ನು ವಿಧಿಸುವುದು ಕ್ಷೇಮಕರವಲ್ಲ ಅರಸನಿಗೆ ಧರ್ಮದಲ್ಲಿಯೇ ಯಾವಾಗಲೂ ದೃಷ್ಟಿಯಿರಬೇಕು, ಇಷ್ಟೇ ನನ್ನ ಅರಿಕೆ" ಎಂದನು.

ಆಗ ಶಕಾರನು "ಮುದಿ ಎತ್ತಿನಂತೆ ಇವನು ಶತ್ರುರಾಜರು, ಶತ್ರುರಾಜರು ಎಂದು ಏನೇನನ್ನೋ ಹರಟುತ್ತಿರುವನು. ನಾನಾರು ಬಲ್ಲೆಯಾ? ನನ್ನ ಹೆಸರು ತಿಳಿದಿರುವುದಷ್ಟೆ, ಚಂಡಸಿಂಹ ಚಂಡಸಿಂಹನೆಂಬ ಹೆಸರೂ ಅದರ ಅರ್ಥವೂ ಚೆನ್ನಾಗಿ ನೆನಪಿನಲ್ಲಿರಲಿ! ಈ ಚಂಡಸಿಂಹನು ಬದುಕಿರುವ ವರೆಗೂ ಶತ್ರುರಾಜರೆಂಬ ಮೇಕೆಯ ಮರಿಗಳು ಉಸಿರೆತ್ತಲಾರವು. ಜ್ಞಾಪಕವಿರಲಿ!" ಎಂಬುದಾಗಿ ಕೊಚ್ಚಿಕೊಂಡನು. ಈ ಮಾತನ್ನು ಕೇಳಿ ಅರಸನು ಧರ್ಮಪಾಲನನ್ನು ಕುರಿತು "ಮಂತ್ರಿವರೇಣ್ಯಾ!

ಚಂಡಸಿಂಹನು ಹೇಳುವುದು ದಿಟ. ನೀವು ವಯೋದೋಷದಿಂದ ಇತರರ ದೋಷಗಳನ್ನು ಅರಿಯಲಾರಿರಿ ಸಾಮಾನ್ಯವಾಗಿ ವಯಸ್ಸು ಬಂದ ಹಾಗೆಲ್ಲ ಶಕ್ತಿಯೂ, ಶೌರ್ಯವೂ, ಅಭಿಮಾನವೂ, ಕ್ರೌರ್ಯವೂ ಗಳಿತವಾಗುತ್ತ ಬರುವುವು. ಶೂದ್ರಕನ ದುರುದುಂಬಿತನವನ್ನು ಕಿವಿಯಾರೆ ಕೇಳಿಯೂ ಕಣ್ಣಾರೆ ಕಂಡರೂ ನಿಮಗೆ ದೋಷವೆಂಬುದಾಗಿ ಭಾಸವಾಗಲಾರದು. ಶೂದ್ರಕನು ಅನಂಗಲೇಖೆಯಲ್ಲಿ ದ್ರೋಹವನ್ನು ಬಗೆದ ವಿಷಯವನ್ನು ನೀವು ಯೋಚಿಸಿರಿ! ಶೂದ್ರಕನೆಂದರೇನು ? ಪಟ್ಟದರಸಿಯನ್ನು ಕೆಣಕುವುದೆಂದ ರೇನು ? " ಎಂದನು.

ಧರ್ಮಪಾಲನು "ಮಹಾಪ್ರಭು ! ನೊಣವೂ ಕೂಡ ಹುಗಲಾರದ ಅಂತಃಪುರವನ್ನು ಹೊಕ್ಕು, ಬೆಂಕಿಯನ್ನು ಸೆರಗಿನಲ್ಲಿ ಮುಡಿ ಹಾಕಿಕೊಳ್ಳಲು ಯಾವನಾದರೂ ಸಮ್ಮತಿಸುವನೇ ? ಶೂದ್ರಕನು ಅಂತಹ ತಿಳಿಗೇಡಿಯೇ ? ರಾಜಪತ್ನಿಯು ಮಾತೃದೇವತೆಗಿಂತಲೂ, ಪರದೇವತೆಗಿಂತಲೂ ಅತಿಶಯ ವಾಗಿ ಪೂಜನೀಯಳೆಂಬುದನ್ನು ವಿವೇಕಸಂಪನ್ನನಾದ ಶೂದ್ರಕನೇ ಮರೆತನೆಂದರೆ ಇನ್ನು ಮಾತಿಗೆ ಅವಕಾಶವೆತ್ತಣದು ? ಮಾನನಿಧಿಯೆನಿಸಿದ ರಾಣಿಯಾದರೂ ಇಂತಹ ದುಷ್ಟವಾದಗಳಿಗೆ ಅವಕಾಶ ಕೊಡುವಳೆಂಬು ದನ್ನು ನಾನು ನಂಬಲಾರೆನು. ಈ ವಿಷಯದಲ್ಲಿ ಬಹು ದೀರ್ಘ ಆಲೋಚನೆ ಯನ್ನು ಮಾಡಬೇಕಾಗಿದೆ" ಎಂಬುದಾಗಿ ಬಿನ್ನವಿಸಿದನು.

ಅದಕ್ಕೆ ರಾಜನು "ಮುದುಕರಿಗೆ ಎಲ್ಲೆಲ್ಲಿಯೂ ಸಂದೇಹವೇ. ಹಾಲಾಹಲವು ಕಹಿಯೆಂಬುದರಲ್ಲಿಯೂ ನಿಮಗೆ ನಂಬುಗೆ ಇಲ್ಲ" ಎಂದು ಪರಿಹಾಸಮಾಡಿದನು.

ಅದನ್ನು ಕೇಳಿ ಧರ್ಮಪಾಲನು ಇಂತೆಂದನು:—"ಶೂದ್ರಕನು ಕಾಮಚಾರಿಯಲ್ಲ. ಆತನು ಶ್ರೇಯಸ್ಕಾಮಿ, ಯಶಸ್ಕಾಮಿ, ದಿಟ. ಆದರೆ ಕಾಮುಕಾಮಿಯಲ್ಲ. ದೋಷಶೂನ್ಯನು, ಗುಣಭರಿತನು, ಸಹಜಶೂರನು, ಸಾಹಸಿಕನು, ದೂರಾಲೋಚನಾಪರನು, ಹೀಗಿರುವುದರಿಂದ ಹೇಗಾದರೂ ಪಾಡುಪಟ್ಟು ಈ ಮುಪ್ಪಿನಂತಿರುವ ಅಪವಾದದಿಂದ ಬಿಡುಗಡೆ ಹೊಂದುವು ದರಲ್ಲಿ ಸಂಶಯವಿಲ್ಲ. ಮಾಯಾವಿಗಳ ಕುತಂತ್ರಗಳನ್ನು ನಂಬುವುದು ಸ್ನೇಹ ಪಕ್ಷಪಾತಿಯಾದ ಅವನಲ್ಲಿ ಸಹಜಗುಣ. ಆದರೆ ಇಂತಹ ಕುತಂತ್ರಕ್ಕೆ ಮೂಲವಾರೆಂಬುದನ್ನು ಕಂಡುಹಿಡಿಯುವುದು ಲೇಸು.

ಅವನ ಮನಸ್ಸಿನಲ್ಲಿ ಮರೆ ಮೋಸವು ಎಂದಿಗೂ ತಲೆದೋರಲಾರದು. ಅನುಗಾಲವೂ ರಾಜಾಜ್ಞೆಗೆ ಒಳಪಟ್ಟವನೇ ಹೊರತು ಹೊರಪಟ್ಟವನಲ್ಲ. ಧರ್ಮಮರ್ಯಾದೆಯನ್ನು ಕನಸಿನಲ್ಲಿಯೂ ಮೀರತಕ್ಕವನಲ್ಲ."

ಇದೆಲ್ಲವನ್ನೂ ಕೇಳಿ ಮಹಾರಾಜನು "ಸಾಕು! ಕಟ್ಟಿಡಿ! ನೀವಿನ್ನು ಈ ವಿಷಯವನ್ನು ಪ್ರಸ್ತಾವಿಸಬೇಡಿರಿ. ನಮ್ಮೆಲ್ಲರಿಗೂ ಅವನು ಈಗ ಮುಳ್ಳಿನಂತಿರುವನು ಹೀಗೆಯೇ ನಾವು ಉದಾಸೀನರಾದರೆ ಮುಂದೆ ಮೃತ್ಯು ಸ್ವರೂಪನೇ ಆಗಬಹುದು" ಎಂಬುದಾಗಿ ಮೋರೆ ತಿರುಗಿಸಿ ಹೇಳಿ, ಅಂದಿನ ಸಭೆಯನ್ನು ಅಲ್ಲಿಗೇ ನಿಲ್ಲಿಸಿ ಅಂತಃಪುರವನ್ನು ಹೊಕ್ಕನು.

ಬಳಿಕ ಧರ್ಮಪಾಲನು "ನಮ್ಮ ಅರಸನಿಗೆ ವಿವೇಕವು ಶೂನ್ಯವಾಗುತ್ತಿದೆ. ಸ್ತ್ರೀಜಿತರಾದವರ ಪಾಡೆಲ್ಲಾ ಇಂತೆಯೇ ಸರಿ ಈತನು ಯಾವುದೋ ಒಂದು ದೊಡ್ಡ ಕಿರುಕುಳಕ್ಕೆ ಈಡಾಗುವುದು ಸತ್ಯ. ಅರಸರು ಸತ್ಯವನ್ನು ಗೌರವಿಸಿ ಅದರಂತೆ ನಡೆದರೆ ಸಮರ್ಥರೆನಿಸುವರು. ಸ್ವತಂತ್ರರಾಗಿ ಹಟವನ್ನು ಸಾಧಿಸಿದರೆ, ವಿಪತ್ಪರಂಪರೆಗಳಿಗೆ ತುತ್ತಾಗದಿರುವುದಿಲ್ಲ. ಅಂತಹ ಸಮಯದಲ್ಲಿ ಪ್ರಜೆಗಳು ಅಪವಾದವನ್ನು ಅನ್ಯಾಯವಾಗಿ ಮಂತ್ರಿಗಳ ಮೇಲೆ ಹೊರಿಸುವರು" ಎಂಬುದಾಗಿ ಚಿಂತಿಸುತ್ತ ಮನೆಯನ್ನು ಸೇರಿದನು.

ಇತ್ತ ಶೂದ್ರಕನು ಒಡನೆಯೇ ತನ್ನ ಆಪ್ತಮಿತ್ರರಾದ ಬಂಧುದತ್ತ ವಿಶ್ವಾಲಕ ಮುಂತಾದವರೊಡನೆ ಕಲೆತು, ತನಗೆ ಒದಗಿದ ವಿಪತ್ತನ್ನು ತಿಳಿಯಪಡಿಸಿ, ತಾನು ಯಾವ ದೇಶದಲ್ಲಿದ್ದರೂ ತನ್ನ ಪ್ರಾಣವು ಮಾತ್ರ ಉಜ್ಜಯಿನಿಯಲ್ಲಿಯೇ ಇರುವುದೆಂಬುದಾಗಿ ಹೇಳಿ, ಅವರನ್ನು ಬೀಳ್ಕೊಂಡು, ಪಟ್ಟಣದ ಬಾಹ್ಯೋದ್ಯಾನದಲ್ಲಿ ಸಂಚರಿಸುತ್ತಿರಲು, ಮಾಧವಿಯು ಒಂದು ಲೇಖವನ್ನು ತಂದುಕೊಟ್ಟು ಪ್ರತ್ಯುತ್ತರವನ್ನು ಪ್ರತೀಕ್ಷಿಸಿ ದೂರವಾಗಿ ಅತ್ತಿತ್ತ ತಿರುಗತೊಡಗಿದಳು ಶೂದ್ರಕನು ಆ ಪತ್ರವನ್ನು ಬಿಚ್ಚಿ ಓದಿ, ಆನಂದ, ಶೋಕ, ಮೋಹಭರಿತನಾಗಿ, ವಿನಯವತಿಯ ನಿರ್ವ್ಯಾಜ ಪ್ರೇಮ ಪಾಶದಿಂದ ಬಿಡುಗಡೆಯನ್ನು ಹೊಂದುವ ಉಪಾಯವನ್ನು ಕಾಣದೆ, ಅದಕ್ಕೆ ಅನುರೂಪವಾಗಿ ಒಂದು ಉತ್ತರವನ್ನು ಬರೆದುಕೊಟ್ಟು ಮಾಧವಿಯನ್ನು ಕಳುಹಿ, ಅಲ್ಲಿಂದ ಹೊರಟು ನದೀತೀರದಲ್ಲಿ ಸಂಧ್ಯಾನಿಯಮಗಳನ್ನು ನೆರವೇರಿಸಿ, ಮಹಾಕಾಳೇಶ್ವರನ ದರ್ಶನವನ್ನು ಮಾಡಿ,

ಮಂತ್ರಿಯಾದ ಧರ್ಮಪಾಲನನ್ನು ಕಂಡು ಬೀಳ್ಕೊಂಡು ಬರುವ ಉದ್ದೇಶದಿಂದ ಆತನ ಮನೆಯ ಬಳಿಗೆ ಬರುವಷ್ಟರಲ್ಲಿಯೇ "ಧರ್ಮಪಾಲನು ಯಾರಿಗೂ ಹೇಳದೆ ಎಲ್ಲಿಯೋ ಹೋದನು" ಎಂಬ ಸುದ್ದಿಯನ್ನು ಕೇಳಿ, ಆತನ ದರ್ಶನವೂ ದೊರೆಯದ ಕಾರಣ ತನ್ನ ದೌರ್ಭಾಗ್ಯವನ್ನು ನಿಂದಿಸಿಕೊಳ್ಳುತ್ತ ಮನೆಗೆ ಬಂದು, ತಾನು ಸುರಂಗದಿಂದ ತಂದಿದ್ದ ದಿವ್ಯಮೂಲಿಕೆಗಳನ್ನೂ ಜೀವರತ್ನಗಳನ್ನೂ, ಬೇಕಾದಷ್ಟು ದ್ರವ್ಯವನ್ನೂ, ಆಯುಧಗಳನ್ನೂ ತೆಗೆದು ಕೊಂಡು 'ಮಲ್ಲಿಗೆಯರಳೆ' ಎಂಬ ತನ್ನ ದಿವ್ಯಾಶ್ವವನ್ನೇರಿ ಬಂಧು, ಮಿತ್ರ, ಪರಿವಾರದವರು ಕಂಬನಿಮಳೆಗರೆಯುತ್ತಿರಲಾಗಿ, ಆ ರಾತ್ರಿಯೇ ಅಲ್ಲಿಂದ ಹೊರಟು ಬರುತ್ತಿರುವಲ್ಲಿ ರಾಜಭಟರು ಇವನನ್ನು ಹಿಂಬಾಲಿಸಿ ಹೋಗು ತ್ತಿದ್ದರು. ಕ್ರಮವಾಗಿ ಶೂದ್ರಕನು ರಾಜಮಾರ್ಗಗಳನ್ನು ದಾಟಿ ಪಟ್ಟಣದಿಂದ ಹೊರಬಿದ್ದು ಪ್ರಯಣಮಾಡುತ್ತ, ದಾರಿಯಲ್ಲಿ ಅಲ್ಲಲ್ಲಿ ನಿಂತು ತನ್ನ ನಿತ್ಯ ಕೃತ್ಯಗಳನ್ನು ನೆರವೇರಿಸಿ, ಯೋಗ್ಯವಾದ ಬ್ರಾಹ್ಮಣಮಂದಿರದಲ್ಲಿ ಆತಿಥ್ಯ ವನ್ನು ಕೈಕೊಳ್ಳುತ್ತ, ಕಾಡು, ಬೆಟ್ಟ, ತೊರೆಗಳೆನ್ನದೆ ಪ್ರಯಾಣವನ್ನು ಬಳೆಯಿಸಿ ವಿಂಧ್ಯವಾಸಿನಿಯನ್ನು ಸಂದರ್ಶಿಸುವ ಅಭಿಲಾಷೆಯಿಂದ ವಿಂಧ್ಯಾ ರಣ್ಯವನ್ನು ಹೊಕ್ಕನು ಆಗ ಅವನನ್ನು ಹಿಂಬಾಲಿಸಿದ್ದ ರಾಜದೂತರು ಹಿಂದಿರುಗಿದರು ಆ ಅರಣ್ಯದಲ್ಲಿಯೇ ಹತ್ತು ಹನ್ನೆರಡು ದಿನಗಳ ವರೆಗೆ ಪ್ರಯಾಣಮಾಡುತ್ತ ಒಂದು ದಿನ ಸಂಜೆಯ ವೇಳೆಯಲ್ಲಿ ದಾರಿತಪ್ಪಿ, ದಿಕ್ಕು ತೋರದೆ ಕಾಡಿನಲ್ಲಿ ಸುತ್ತುತ್ತಿದ್ದಾಗ ಸೂರ್ಯನು ಇವನ ಕಷ್ಟ ವನ್ನು ನೋಡಿ ಸಹಿಸಲಾರದೆಯೋ ಎಂಬಂತೆ ಪಶ್ಚಿಮ ಸಮುದ್ರದಲ್ಲಿ ಮುಳುಗಿದನು ಪತಿವಿಯೋಗವನ್ನು ಸಹಿಸಲಾರದೆ ದಿನಲಕ್ಷ್ಮಿಯು ಸಹಗಮನವನ್ನು ಮಾಡಿದಳು ಕ್ರೂರ ಜಂತುಗಳು ಮೆಲ್ಲಗೆ ಅತ್ತಿತ್ತ ಸಂಚರಿಸತೊಡಗಿದುವು ನಮ್ಮ ತರುಣವೀರನು ದೈವನ್ಯಸ್ತಭರನಾಗಿ ಪ್ರಯಾಣಮಾಡುತ್ತಲೇ ಇದ್ದನು. ಇಷ್ಟರಲ್ಲಿ ಒಬ್ಬ ಮನುಷ್ಯನು ಇದಿ ರಾದಂತೆ ಕಾಣಿಸಿತು. ಶೂದ್ರಕನು ಧೈರ್ಯದಿಂದ ಮಾತನಾಡಿಸಿದನು. ಅವನು ಶೂದ್ರಕನು ಬ್ರಾಹ್ಮಣನೆಂದು ತಿಳಿದು ತನ್ನ ಪಾಳೆಯಕ್ಕೆ ಕರೆದುಯ್ದು "ಈ ರಾತ್ರಿ ಇಲ್ಲಿಯೇ ವಿಶ್ರಮಿಸಿಕೊಳ್ಳಿರಿ. ಬೆಳಗಾಗುತ್ತಲೇ ಮುಂದೆ ದಾರಿ ಯನ್ನು ತೋರುವೆನು" ಎಂದು ಹೇಳಿ ಬಿದಿರು ಅಕ್ಕಿಯನ್ನೂ ಒಂದು ಮೊಗೆ ಜೇನುತುಪ್ಪವನ್ನೂ ಕೆಲವು ಕಾಡುಹಣ್ಣುಗಳನ್ನೂ ತಂದುಕೊಟ್ಟನು.

ಶೂದ್ರಕನು ತನ್ನ ಸಂಧ್ಯಾದಿಗಳನ್ನು ಸಮೀಪದಲ್ಲಿದ್ದ ತಟಾಕದಲ್ಲಿ ನೆರವೇರಿಸಿ ಅಲ್ಲಿಯೇ ಉಪಹಾರವನ್ನು ಮುಗಿಸಿ, ಬಿಡಾರವನ್ನು ಹೊಕ್ಕು, ಆ ಬೇಡನಿಗೆ ಪಟ್ಟಣದ ಬೆಡಗನ್ನೂ ಅರಮನೆಗಳ ವೈಭವವನ್ನೂ ಬಣ್ಣಿಸುತ್ತ ಸ್ವಲ್ಪಕಾಲ ದಲ್ಲಿಯೇ ವಿಶ್ರಮಿಸಿ ನಿದ್ದೆಹೋದನು.

ಮಧ್ಯರಾತ್ರಿಯಲ್ಲಿ ಯಾರೋ ಗಟ್ಟಿಯಾಗಿ ಅಳುವ ಶಬ್ದವು ಕೇಳಿಸಿತು ಗಾಢನಿದ್ರೆಯಲ್ಲಿದ್ದರೂ ಶೂದ್ರಕನು ಒಡನೆಯೇ ಎಚ್ಚತ್ತನು. ವಿಚಾರಿಸಲಾಗಿ ಆ ಬೇಡರ ದಣಿಯ ಮಡದಿಯನ್ನು ಯಾವುದೋ ಭೂತವು ಹಿಡಿದಿರುವುದೆಂತಲೂ, ಪ್ರತಿರಾತ್ರಿಯೂ ಇಂತೆಯೇ ಗೋಳಾಡುತ್ತ ಪಾಳೆ ಯದವರಿಗೆಲ್ಲ ಭೀತಿಯನ್ನು ಉಂಟುಮಾಡುವುದೆಂತಲೂ, ಯಾರೋ ಬಂದು ಅವಳನ್ನು ಹೊಡೆದು, ಬಡಿದು ತಿವಿದು ಕೊಲ್ಲುವಂತೆ ಆಗುವು ದೆಂತಲೂ ತಿಳಿಯಬಂದಿತು ಇದೆಲ್ಲವನ್ನು ಕೇಳಿ ಶೂದ್ರಕನು ಆ ಬೇಡ ನನ್ನು ಕರೆದು, "ನೀನು ದುಃಖಿಸಬೇಡ ಒಮ್ಮೆ ನಿನ್ನ ಹೆಂಡತಿಯನ್ನು ತೋರಿಸು ಮುಂದಣ ಕಾರ್ಯವನ್ನು ಆ ಮೇಲೆ ಯೋಚನೆ ಮಾಡೋಣ!" ಎನಲಾಗಿ, ಆ ಬೇಡನು 'ಯಾವ ಹುತ್ತದಲ್ಲಿ ಯಾವ ಹಾವಿರುವುದೋ! ಯಾರಲ್ಲಿ ಎಂತಹ ಮಹತ್ವವಿರುವುದೋ! ಕಷ್ಟಕ್ಕೆ ಸಿಕ್ಕಿದವನೇ ದೇವರು' ಎನ್ನುತ್ತ ಶೂದ್ರಕನನ್ನು ಅಲ್ಲಿಗೆ ಕರೆದುಯ್ದನು ದಿವ್ಯವಾದ ಮೆಲ್ಪಾಸಿನ ಮೇಲೆ ಪವಡಿಸಿದ್ದರೂ ಘೋರಾರವದಿಂದ ವಿಕೃತವದನೆಯಾಗಿ ಕೂಗಿ ಕೊಳ್ಳುತ್ತಿದ್ದ ಆ ಮಡದಿಯನ್ನು ಶೂದ್ರಕನು ನೋಡಿದನು. ಕೂಡಲೇ ಅದು ಮತ್ತಷ್ಟು ವಿಕಾರವಾಗಿ ಕೂಗಿಕೊಳ್ಳುತ್ತ ಎದ್ದು ಕುಳಿತು ತಲೆಗೂದ ಲನ್ನು ಬಿರಿಹುಯ್ದು ಆವೇಶಮಾಡತೊಡಗಿತು ಶೂದ್ರಕನು ಒಡನೆಯೇ ಸ್ವಲ್ಪ ವಿಭೂತಿಯನ್ನು ಮಂತ್ರಿಸಿ ತಲೆಯ ಮೇಲೆ ಉದುರಿಸಲಾಗಿ ಥಟ್ಟನೆ ಚೇತರಿಸಿಕೊಂಡ ಆ ಬೇಡಿತಿಯನ್ನು ಕಂಡು 'ಹೆದರಬೇಡ. ನಾನಿಲ್ಲಿಯೇ ಇರುವೆನು' ಎಂದು ಹೇಳಿ, ತನ್ನ ಹಾಸಿಗೆಯ ಮೇಲೆ ಮಲಗಿ ನಿದ್ರಿಸಿದನು. ಬೇಡನ ಆನಂದಕ್ಕೆ ಪಾರವೇ ಇಲ್ಲವಾಯಿತು. ಅವನು ಶೂದ್ರಕನನ್ನು ತನ್ನ ಪಾಲಿನ ದೈವವೆಂಬುದಾಗಿ ಭಾವಿಸತೊಡಗಿ, ಅಲ್ಲಿಂದ ಹೊರಡುವ ಸಲುವಾಗಿ ಎಷ್ಟು ಪ್ರಯತ್ನಿಸಿದರೂ ಶೂದ್ರಕನನ್ನು ಹೊರಡಬಿಡಲಿಲ್ಲ. ಆ ಪಾಳೆಯದವರೆಲ್ಲರೂ ಅನುದಿನವು ಬೆಳಗಾಗುತ್ತಲೇ ದೂರದಲ್ಲಿ ಬಂದು ನಿಂತು ಕೈಮುಗಿದು, ಹಣ್ಣುಹಂಪಲನ್ನೂ ಕೆನೆಹಾಲನ್ನೂ ಆತನಿಗೆ ಸಮರ್ಪಿಸಿ ಹೋಗುತ್ತಿದ್ದರು.

ಕೆಲಕಾಲದಲ್ಲಿಯೇ ಬೇಡಿತಿಯು ಗರ್ಭವತಿಯಾದಳು. ಆಗ ಕಿರಾತರಾಜನು ತನ್ನ ಮಡದಿಯೊಂದಿಗೆ ಪರಿವಾರಸಮೇತನಾಗಿ ವಿಂಧ್ಯ ವಾಸಿನಿಯ ಹರಿಕೆಯನ್ನು ಸಲ್ಲಿಸಲು ಹೊರಟನು. ಶೂದ್ರಕನನ್ನು ಬೇಡಿಕೊಂಡು ಸಂಗಡ ಕರೆದುಕೊಂಡು, ಮರುದಿನ ಅವರೆಲ್ಲರೂ ವಿಂಧ್ಯವಾಸಿನಿಯ ಮಂದಿರದ ಪ್ರಾಕಾರವನ್ನು ಸೇರಿದರು ಕಿರಾತದಂಪತಿ ಗಳು ಹರಿದ್ರಾವಸ್ತ್ರಗಳನ್ನು ಧರಿಸಿ, ಪಾದಚಾರಿಗಳಾಗಿಯೇ ಬಂದರು. ಎರಡನೆಯ ದಿನ ಕಿರಾತನೂ ಅವನ ಮಡದಿಯೂ ಬೆಳಗಿನ ಜಾವದಲ್ಲಿ ಎದ್ದು, ದೇವಾಲಯದ ಕೊಳದಲ್ಲಿ ಮಿಂದು, ನಾರಮಡಿಯನ್ನುಟ್ಟು, ಗುಂಜಾಕಾಚಮಣಿಭೂಷಣಗಳನ್ನು ಧರಿಸಿ, ಕುಂಕುಮಲಿಪ್ತಗಾತ್ರರಾಗಿ ಮಂಗಳವಾದ್ಯಗಳೊಂದಿಗೆ ಪೂಜಾಸಾಮಗ್ರಿಗಳನ್ನು ತೆಗೆದುಕೊಂಡು, ದೇವಿಯ ಮಂದಿರವನ್ನು ಹೊಕ್ಕು, ಸಾಷ್ಟಾಂಗಪ್ರಣಾಮವನ್ನು ಮಾಡಿ ದೇವಿಯ ಇದಿರಾಗಿ ನಿಂತರು. ಇಷ್ಟರಲ್ಲಿ ಇವರ ಪರಿವಾರದವರು ಬ್ರಾಹ್ಮಣದಂಪತಿಗಳನ್ನು ಕರೆತಂದು ಬಲಿಪೀಠದ ಬಳಿ ನಿಲ್ಲಿಸಿದರು. ಅವರಿಬ್ಬರೂ ಕಂಬನಿಮಳೆ ಕರೆಯುತ್ತ ತಲೆವಾಗಿ ನಿಂತಿರಲು, ಈ ಕಿರಾತರು ಅವರ ಕೊರಳಿಗೆ ಕೆಂಪುಗಣಿಗಲ ಪೂಮಾಲೆಗಳನ್ನೂ ಬೇವಿನ ಸೊಪ್ಪಿನ ಸರಗಳನ್ನೂ ಹಾಕಿ, ಕುಂಕುಮ ಸಿಂದೂರಗಳನ್ನು ಮೈಗೆಲ್ಲಾ ಹಚ್ಚಿ, ಅವರಿಬ್ಬರ ಕೈಗಳನ್ನು ಒಟ್ಟುಗೂಡಿಸಿ ಬಿಗಿದರು ಆ ಕಾಲಕ್ಕೆ ಸರಿಯಾಗಿ ಭಗವತಿಯ ದರ್ಶನವನ್ನು ಮಾಡಿ ಶೂದ್ರಕನು ಪ್ರಾಕಾರ ಪ್ರದಕ್ಷಿಣೆ ಮಾಡುತ್ತ ಅಲ್ಲಿಗೆ ಬಂದು ಸೇರಿ, ಈ ಘೋರಕೃತ್ಯವನ್ನು ಕಂಡು ಆ ಕಿರಾತಪತಿಯನ್ನು ವಿಚಾರಿಸಲಾಗಿ, ಅವನು "ನನ್ನ ಮಡದಿಯು ಸುಖವಾಗಿದ್ದು ಗರ್ಭವತಿಯಾದರೆ ಬ್ರಾಹ್ಮಣ ದಂಪತಿಗಳನ್ನು ಬಲಿಕೊಡುವುದಾಗಿ ಹರಸಿಕೊಂಡಿದ್ದೆನು. ಈಗ ನನ್ನ ಕೋರಿಕೆಯು ಈಡೇರಿದ ಕಾರಣ ಹರಿಕೆಯನ್ನು ಸಲ್ಲಿಸುತ್ತಿದ್ದೇನೆ" ಎಂದು ಹೇಳಿದನು. ಅದನ್ನು ಕೇಳಿ ಚಿಂತಾಕ್ರಾಂತನಾದ ಶೂದ್ರಕನು ಆ ಬೇಡನನ್ನು ಕುರಿತು, "ಅಯ್ಯಾ ಕಿರಾತರಾಜನೇ! ಬ್ರಾಹ್ಮಣದಂಪತಿಗಳು ಬಲಿ ಕೊಡುವುದಕ್ಕೆ ತಕ್ಕವರಲ್ಲ. ಪ್ರಾಣಿಬಲಿಯು ಘೋರವಾದ ಕೆಲಸ. ನಮ್ಮಂತೆಯೇ ಇತರರಿಗೂ ಪ್ರಾಣಗಳೆಂದರೆ ಪ್ರೇಮವಿರುವುದಿಲ್ಲವೇ? ಭಗವತಿಯು ಇದರಿಂದ ಎಂದಿಗೂ ಪ್ರಸನ್ನೆಯಾಗಲಾರಳು. ನಿನ್ನ

ಭಕ್ತಿಯಿಂದಲೇ ಆಕೆಯು ಸಂತುಷ್ಟೆಯಾಗಿರುವಳು. ಇವರನ್ನು ಬೇಗನೆ ಬಿಡುಗಡೆ ಮಾಡಿಸು. ಇಲ್ಲವಾದರೆ ದೇವಿಯು ಸಿಟ್ಟಿಗೆ ಗುರಿಯಾಗುವೆ" ಎನ್ನುತ್ತಿರುವಷ್ಟರಲ್ಲಿಯೇ "ಕಿರಾತಾಧಿಪನೇ! ನಿನ್ನ ಕಾರ್ಯವು ತಕ್ಕುದಲ್ಲ. ಮಿತ್ರವಾಕ್ಯವನ್ನು ನೆರವೇರಿಸು" ಎಂಬ ಮಾತು ಗುಡಿಯ ಗವಿಯಿಂದ ಕೇಳಿಸಿತು ಆ ಹೊತ್ತಿಗೆ ಸರಿಯಾಗಿ ಗರ್ಭಗೃಹದಲ್ಲಿ ಘಂಟಾನಾದವೂ ಕೇಳಬಂದಿತು ಕಿರಾತರಾಜನು ಒಡನೆಯೇ ಅಡ್ಡಬಿದ್ದು ಎದ್ದುನಿಂತು, "ಅಮ್ಮಾ! ಆಗ್ರಹಗೊಳ್ಳದಿರು ಈ ಬ್ರಾಹ್ಮಣನ ವಾಕ್ಯವನ್ನೇ ವೇದವಾಕ್ಯವೆಂದು ತಿಳಿದಿರುವೆನು. ನಿನ್ನ ಅಣತಿಯೂ ಅಂತೆಯೇ ಇರುವುದು ನಾನು ಇದನ್ನು ಮೀರುವವನಲ್ಲ" ಎನ್ನುತ್ತ ಆ ದಂಪತಿಗಳ ಬಂಧನವನ್ನು ಬಿಚ್ಚಿ, ಫಲಾಹಾರಾದಿಗಳಿಂದ ಅವರನ್ನು ಸತ್ಕರಿಸಿ, ಅಡ್ಡಬಿದ್ದು, ಮನ್ನಿಸುವಂತೆ ಬೇಡಿಕೊಂಡನು. ಬಳಿಕ ದೇವಿಯ ಸೇವೆಯನ್ನು ಮುಗಿಸಿಕೊಂಡು ಅವರೆಲ್ಲರೂ ತಮ್ಮತಮ್ಮ ಬಿಡದಿಗಳನ್ನು ಸೇರಿ, ಊಟ ಉಪಚಾರಗಳನ್ನು ಮುಗಿಸಿಕೊಂಡು, ಸ್ವಲ್ಪಕಾಲ ವಿಶ್ರಮಿಸಿಕೊಳ್ಳುವ ಹೊತ್ತಿಗೆ ಅಸ್ತಮಯ ಸಮಯವಾಯಿತು. ಆ ಬ್ರಾಹ್ಮಣ ದಂಪತಿಗಳೂ ಶೂದ್ರಕನೂ ಸಾಯಂಕೃತ್ಯಗಳನ್ನು ನೆರವೇರಿಸಿ, ದೇವಿಯ ಮಂದಿರಕ್ಕೆ ದರ್ಶನಾರ್ಥವಾಗಿ ಹೊರಟರು. ಆ ದಂಪತಿಗಳು ಶೂದ್ರಕನನ್ನು ಕೊಂಡಾಡಿ ಹರಸಿದರು. ಮೂವರೂ ಪ್ರದಕ್ಷಿಣ ನಮಸ್ಕಾರಗಳನ್ನು ಮಾಡಿ ದೇವಿಯನ್ನು ಸಂದರ್ಶಿಸಿದ ಬಳಿಕ ಆ ದಂಪತಿಗಳು ಬಿಡಾರಕ್ಕೆ ಹಿಂದಿರುಗಿದರು. ಶೂದ್ರಕನು ಅಲ್ಲಿಯೇ ಒಂದು ಕಂಬಕ್ಕೆ ಆತುಕೊಂಡು ಕುಳಿತು, ಭಗವತಿಯನ್ನು ಸ್ತೋತ್ರಮಾಡುತ್ತಿರುವಲ್ಲಿ, ಅವನ ಎಡಗಡೆಯ ಗುಹೆಯಿಂದ "ಎಲೊ! ಯಾರೋ ನೀನು?" ಎಂಬ ಪ್ರಶ್ನೆಯು ಕೇಳಿಸಿತು. ಆದಕ್ಕೆ ಶೂದ್ರಕನು "ನಾನು ಭಾರದ್ವಾಜಗೋತ್ರದಲ್ಲಿ ಜನಿಸಿದವನು. ನನ್ನನ್ನು ಶೂದ್ರಕನೆಂದು ಕರೆಯುವರು, ಉಜ್ಜಯಿನೀ ರಾಜ್ಯಾಧಿಪನ ಆಗ್ರಹಕ್ಕೆ ಪಾತ್ರನಾಗಿ ಪ್ರವಾಸಶಿಕ್ಷೆಯನ್ನು ಕೈಕೊಂಡು ಹೀಗೆ ಅಲೆಯುತ್ತಿದ್ದೇನೆ" ಎಂಬುದಾಗಿ ಉತ್ತರ ಕೊಟ್ಟನು. ಬಳಿಕ ಅವರಿಬ್ಬರಿಗೂ ಈ ರೀತಿ ಉತ್ತರಪ್ರತ್ಯುತ್ತರಗಳು ನಡೆಯತೊಡಗಿದುವು.

ಪ್ರ. "ವಿನಯವತಿಯನ್ನು ವಿಷಸರ್ಪವು ಸೋಕಿದ ಪರಿಯನ್ನು ಬಲ್ಲೆಯಾ?"

ಉ. "ಅನಂಗಲೇಖೆಯ ಕೃತ್ಯವೆಂದು ತಿಳಿದಿರುವೆನು."

ಪ್ರ. "ಧರ್ಮವಿಲಾಸವು ಕುಸಿದು ಬೀಳಲು ಕಾರಣವೇನು?"

ಉ. "ಅದೂ ಆಕೆಯ ಕೃತ್ಯವೆಂತಲೇ ನನ್ನ ನಂಬುಗೆ."

ಪ್ರ "ನೀನು ವಿನಯವತಿಯ ಅಂತಃಪುರವನ್ನು ಹೊಕ್ಕು ಏನು ಮಾಡಿದೆ?"

ಉ. "ಆಕೆಯು ಬರೆದಿದ್ದ ಚಿತ್ರವನ್ನು ಸ್ವಲ್ಪ ಪೂರ್ತಿಗೊಳಿಸಿದೆನು."

ಪ್ರ. "ಸುರಂಗದಲ್ಲಿ ನೀನು ನೋಡಿದ ಪದಾರ್ಥಗಳಲ್ಲಿ ಶ್ರೇಷ್ಠವಾವುದು?"

ಉ. "ನನ್ನ ಗುಟ್ಟನ್ನೆಲ್ಲಾ ರಟ್ಟುಮಾಡಿದುದರಿಂದ ಲಾಭವೇನು?"

ಪ್ರ "ಹೇಳಲು ಇಷ್ಟವಿಲ್ಲವೇನು?"

ಉ. "ನಾನು ನೋಡಿದ ವಸ್ತುಗಳಲ್ಲಿ ಭೂಮಂಡಲದ ದುಷ್ಟರಾಜರ ಪ್ರಾಣಭೇದನರಹಸ್ಯವೇ ಶ್ರೇಷ್ಠವಾದುದು."

ಒಡನೆಯೇ "ದೈವವು ನಿನ್ನನ್ನು ಕಾಪಾಡುವುದು. ನಿನ್ನ ಬುದ್ಧಿಯು ನಿನ್ನ ಕಯ್ಯಲ್ಲಿರಲಿ! ಸುರಂಗದ ಗುಟ್ಟನ್ನು ರಟ್ಟುಮಾಡದೆ ಜಾಗರೂಕನಾಗಿರು ಮಹಾರ್ಘವಸ್ತುಗಳನ್ನು ಸಂಪಾದಿಸುವುದು ದೊಡ್ಡದಲ್ಲ ಅವನ್ನು ಪರರ ಪಾಲುಮಾಡದೆ ಕಾಪಾಡುವುದೇ ಬುದ್ಧಿವಂತಿಕೆ! ಒಳ್ಳೆಯದು! ಹೊರಡು" ಎಂಬುದಾಗಿ ಕೇಳಿಸಿತು. ಶೂದ್ರಕನು ವಿಚಾರಿಸಲಾಗಿ ಇತ್ತೀಚೆಗೆ ಯಾವನೋ ಒಬ್ಬ ಸಿದ್ಧಪುರುಷನು ಆ ಗುಹೆಯಲ್ಲಿ ವಾಸವಾಗಿರುವುದಾಗಿಯೂ, ಅನುಗಾಲವೂ ಸಮಾಧಿನಿರತನಾಗಿದ್ದು ನಾಲ್ಕಾರು ದಿನಗಳಿಗೆ ಒಮ್ಮೆ ಮಾತ್ರವೇ ಹೊರಗಡೆ ಬರುವುದಾಗಿಯೂ, ಇಬ್ಬರು ಶಿಷ್ಯರು ಆಗಾಗ್ಗೆ ಬಂದು, ಅವನ ವಿಷಯಗಳನ್ನು ಕಂಡುಕೊಂಡು ಹೋಗುತ್ತಿರುವುದಾಗಿಯೂ, ಆ ಸಿದ್ಧಪುರುಷನ ಅನುಜ್ಞೆಯಿಲ್ಲದೆ ಅವನನ್ನು ಯಾರೂ ಸಂದರ್ಶಿಸಲಾಗದೆಂತಲೂ ತಿಳಿದು, ತನಗೆ ಅಂತಹ ಮಹಾಮಹಿಮನ ದರ್ಶನಲಾಭವು ದೊರೆಯದುದರಿಂದ ಪರಿತಪ್ತನಾಗಿ, ತನ್ನ ರಹಸ್ಯಗಳನ್ನೆಲ್ಲಾ ಪ್ರಕಾಶಗೊಳಿಸಿದುದರಿಂದ ವಿಸ್ಮಿತನಾಗಿ ಬಿಡದಿಯನ್ನು ಸೇರಿದನು.

ಇತ್ತ ಶೂದ್ರಕನ ಗಮನದಿಂದ ವಿಮುಕ್ತರಾದ ಆ ದಂಪತಿಗಳು ಆತನನ್ನು ಭೋಜನಾದಿಗಳಿಂದ ಸತ್ಕರಿಸಿ, "ಮಹಾಮಹಿಮನೆ! ನಿನ್ನ

ಋಣವನ್ನು ನಾವು ತೀರಿಸಲಾರೆವು. ನಮ್ಮ ಯಾವಜ್ಜೀವವೂ ನಿನ್ನಲ್ಲಿ ಊಳಿಗವನ್ನು ಮಾಡಿದರೂ, ನಮಗೆ ಅನೃಣ್ಯವು ಘಟಿಸಲಾರದು ನೀನೇ ನಮ್ಮ ಪಾಲಿನ ದೇವರು" ಎಂದು ಮುಂತಾಗಿ ಹೊಗಳುತ್ತಿರುವಲ್ಲಿ ಶೂದ್ರಕನು "ಮಹನೀಯರೇ ! ನೀವು ಇಂತು ನನ್ನನ್ನು ಗೌರವಿಸುವುದು ನನಗೆ ಶ್ರೇಯಸ್ಕರವೆನಿಸಲಾರದು ನಿಮ್ಮ ಧರ್ಮವೇ ನಿಮ್ಮನ್ನು ಕಾಪಾಡಿತಲ್ಲದೆ ನಾನು ಮಾಡಿದ ಮಹೋಪಕಾರವಾದರೂ ಯಾವುದು ? ಪ್ರಪಂಚವನ್ನೆಲ್ಲ ಬೊಂಬೆಯಾಟದಂತೆ ಕುಣಿಸುತ್ತಿರುವ ಪರಮೇಶ್ವರಿಯೇ ನಿಮ್ಮನ್ನು ರಕ್ಷಿಸಿದಳು. ಆಕೆಯನ್ನು ಎಷ್ಟು ಕೊಂಡಾಡಿದರೂ ಕಡಮೆಯೇ ಸರಿ. ನನ್ನಂತಹ ಅಲ್ಪಶಕ್ತನಾದ ಮನುಷ್ಯನು ಏನು ತಾನೇ ಮಾಡಲಾಪನು" ಎಂಬುದಾಗಿ ಹೇಳುತ್ತ, ಅವರ ಪೂರ್ವೋತ್ತರಗಳನ್ನು ವಿಚಾರಿಸುವಲ್ಲಿ ಆ ದಂಪತಿಗಳು ಉಜ್ಜಯಿನೀ ರಾಜ್ಯದಲ್ಲಿ ಮಹೇಶ್ವರಗ್ರಾಮ ನಿವಾಸಿಗಳೆಂತಲೂ ಸಂತಾನಾಪೇಕ್ಷೆಯಿಂದ ಭಗವತಿಯಾದ ವಿಂಧ್ಯವಾಸಿನಿಯನ್ನು ಸೇವಿಸುವ ಸಲುವಾಗಿ ನಡೆದುಬರುತ್ತಿರುವಲ್ಲಿ ಅವರನ್ನು ಕಿರಾತರು ಅಡ್ಡಗಟ್ಟಿ ಬೇಡರ ಪಾಳೆಯಕ್ಕೆ ಕರೆದುಯ್ದುರೆಂತಲೂ ತಿಳಿಸಿ, ತಾವು ಸಂಪನ್ನರಾದ ಗೃಹಸ್ಥರಾಗಿದ್ದುದರಿಂದ ಶೂದ್ರಕನು ತಮ್ಮ ಸಂಗಡ ಬಂದು ತಮ್ಮ ಮನೆಯಲ್ಲಿ ಯಾವಜ್ಜೀವವೂ ಸುಖವಾಗಿರಬಹುದೆಂತಲೂ ಹೇಳಿ, ಕೈಮುಗಿದು ಬೇಡಿಕೊಂಡರು. ಶೂದ್ರಕನು ತನಗೆ ಆ ಸಮಯದಲ್ಲಿ ಕಾರ್ಯಾಂತರಗಳಿದ್ದ ಕಾರಣ ಸಾಧ್ಯವಿಲ್ಲವೆಂತಲೂ, ಬೇರೊಂದು ವೇಳೆ ಅವಶ್ಯಕವಾಗಿಯೂ ಬಂದು ದರ್ಶನವನ್ನು ತೆಗೆದುಕೊಳ್ಳುವೆನೆಂತಲೂ ಬಿನ್ನಯಿಸಿದನು. ಇಷ್ಟರಲ್ಲಿ, ಕಿರಾತರಾಜನೂ ತನ್ನ ಭೋಜನಾದಿಗಳನ್ನು ಮುಗಿಸಿಕೊಂಡು ಅಲ್ಲಿಗೆ ಬಂದು ವಸ್ತ್ರಭೂಷಣಾದಿಗಳಿಂದ ಆ ದಂಪತಿಗಳನ್ನು ವಿಶೇಷವಾಗಿ ಸತ್ಕರಿಸಿ, ಯಥೇಷ್ಟವಾಗಿ ದ್ರವ್ಯವನ್ನೂ ಅವರ ಮಾರ್ಗರಕ್ಷಣೆಗಾಗಿ ಕೆಲವು ಮಂದಿ ಆಳುಗಳನ್ನೂ ಕೊಟ್ಟು ಸಾಷ್ಟಾಂಗವೆರಗಿ, ತನ್ನ ಅಪರಾಧವನ್ನು ಮನ್ನಿಸುವಂತ ಬೇಡಿ, ಅವರನ್ನು ಸಂತುಷ್ಟರನ್ನಾಗಿ ಮಾಡಿಕಳುಹಿಸಿದನು.

ತರುವಾಯ ಶೂದ್ರಕನು, ದೇಶಾಟನೆಮಾಡುವ ಕುತೂಹಲವುಳ್ಳವನಾಗಿದ್ದುದರಿಂದ ಹೊರಡಲು ಅನುವಾದನು; ಆ ಬೇಡನೂ ಅವನ ಮಡದಿಯೂ ದುಃಖಭರಿತರಾಗಿ ಅಡ್ಡಬಿದ್ದು ಇನ್ನೂ ಕೆಲವು ಕಾಲ ತಮ್ಮ ಪಾಳೆಯದಲ್ಲಿಯೇ ಬಿಜಮಾಡಿಸಿದ್ದು, ಬಳಿಕ ಹೊರಡ

ಬಹುದೆಂದು ಎಷ್ಟು ಬಗೆಯಿಂದ ಕೇಳಿಕೊಂಡರೂ ಸಮ್ಮತಿಸಲಿಲ್ಲ ಆ ಮೇಲೆ ಅವರಿಬ್ಬರು ಶೂದ್ರಕನನ್ನು ಕುರಿತು “ಭೂಸುರೋತ್ತಮಾ! ನಾವೂ ನಮ್ಮ ಪರಿವಾರವೂ ನಿನ್ನ ಅಧೀನ ನಮ್ಮ ಸರ್ವಸ್ವವೂ ನಿನ್ನ ದಾಗಿರುವುದು ನಿನ್ನ ಅಂಗರಕ್ಷಣೆಗಾಗಿ ನಾಲ್ವರು ದೂತರನ್ನೂ ಇಬ್ಬರು ಗೂಢಚಾರರನ್ನೂ ನಿನ್ನ ಸಂಗಡ ಕಳುಹಿಸುವೆನು. ಈ ದ್ರವ್ಯವು ತಮ್ಮಲ್ಲಿ ದಾರಿಯ ವೆಚ್ಚಕ್ಕೆ ಇರಲಿ” ಎಂಬುದಾಗಿ ಯಥೇಷ್ಟವಾಗಿ ದ್ರವ್ಯವನ್ನು ಕೊಟ್ಟು, ಬೀಳ್ಕೊಂಡು ತಮ್ಮ ಪಾಳೆಯಕ್ಕೆ ಹೊರಟರು. ತರುವಾಯ ಶೂದ್ರಕನು ದೇಶಸಂಚಾರ ಮಾಡತೊಡಗಿ, ನರ್ಮದಾ ನದೀತೀರವನ್ನು ಸೇರಿ, ಮಾಹಿಷ್ಮತೀಪಟ್ಟಣವನ್ನು ಹೊಕ್ಕು. ಒಂದು ಮನೆ ಯಲ್ಲಿ ಬಿಡದಿಯನ್ನು ಮಾಡಿಕೊಂಡು, ನಾಲ್ಕಾರು ದಿನಗಳು ಅಲ್ಲಿಯೇ ವಾಸವಾಗಿದ್ದನು ಅವನ ಅನುಯಾಯಿಗಳೂ ಚಾರರೂ ಒಂದು ಸತ್ರದಲ್ಲಿ ಬಿಡದಿಮಾಡಿದ್ದರು. ಒಂದು ದಿನ ಸಾಯಂಕಾಲ ಶೂದ್ರಕನು ನದೀತೀರ ದಲ್ಲಿ ಸಂಚರಿಸುತ್ತಿದ್ದಾಗ, ಚಾರನು ಬಳಿಸಾರ್ದು ನಮಸ್ಕರಿಸಿ, “ಭೂಸು ರೋತ್ತಮಾ! ಯಾವನೋ ಒಬ್ಬ ಬ್ರಾಹ್ಮಣರ ಹುಡುಗನು ಈ ಲೇಖವನ್ನು ತಂದಿತ್ತನು. ಆತನು ಯಾರೆಂಬುದಾಗಿ ಎಷ್ಟು ಬಗೆಯಿಂದ ಕೇಳಿದರೂ ಪ್ರತ್ಯುತ್ತರವನ್ನೀಯದೆ ಹೊರಟು ಹೋದನು” ಎನ್ನುತ್ತ ಒಂದು ಲೇಖ ವನ್ನು ಕೊಟ್ಟನು ಅದನ್ನು ತೆಗೆದು ಬಿಚ್ಚುತ್ತಿರುವಾಗಲೇ ಅವನ ಎಡ ತೋಳು ಅಲ್ಲಾಡಿತು. ಎದೆಯು ಡವಡವನೆ ಹೊಡೆದುಕೊಂಡಿತು. ಶೂದ್ರಕನು ಮಹಾಕಾಳಿಯನ್ನು ಸ್ಮರಿಸುತ್ತ ಆ ಪತ್ರವನ್ನು ಓದತೊಡಗಿ ದನು. ಆ ಲೇಖದಲ್ಲಿ—

“ಅವಿವೇಕಿಯಾದ ಬಂಧುದತ್ತನು ನಿನ್ನ ಸ್ನೇಹಪಾಶದಿಂದ ಬದ್ಧನಾಗಿ ನಿನ್ನ ಚರಿತ್ರೆಯನ್ನೆಲ್ಲ ಒಂದು ದೃಶ್ಯಕಾವ್ಯರೂಪವಾಗಿ ಬರೆದು, ತುಂಬಿದ ಸಭೆಯಲ್ಲಿ ಉತ್ಸಾಹದಿಂದ ಅಭಿನಯಮಾಡಿಸಿದನು. ಅರಸನು ಕ್ರೋಧೋ ನ್ಮತ್ತನಾಗಿ ಅವನನ್ನು ಸೆರೆಯಲ್ಲಿರಿಸಿದನು. ಈಗ ನೀನು ತಕ್ಕ ರೀತಿಯಿಂದ ಬಂಧುದತ್ತನನ್ನು ಇಂದಿನಿಂದ ಹತ್ತು ದಿನಗಳೊಳಗಾಗಿ ಬಿಡುಗಡೆ ಮಾಡ ದಿದ್ದಲ್ಲಿ ಮಹತ್ತರವಾದ ಪಾತಕಕ್ಕೆ ಗುರಿಯಾಗುವೆ” ಎಂಬುದಾಗಿ ಬರೆದಿದ್ದಿತು.

ಓದಿದ ಕೂಡಲೇ ತಲೆಯ ಮೇಲೆ ಸಿಡಿಲು ಬಡಿದಂತಾಯಿತು. ಕಣ್ಣುಗಳು ಮುಸುಕಾದುವು. ಮೈಮೇಲೆ ಎಚ್ಚರಿಕೆಯು ಕುಂದಿತು ಸ್ವಲ್ಪ ಹೊತ್ತಿನ ಮೇಲೆ ಚೇತರಿಸಿಕೊಂಡು "ಬಂಧುದತ್ತನು ಅವಿವೇಕಿಯಲ್ಲ. ಅವನನ್ನು ಸೆರೆಯಲ್ಲಿರಿಸಿದ ರಾಜನೇ ಮೂರ್ಖನಲ್ಲವೇ? ಮಿತ್ರಾ! ಬಂಧುದತ್ತಾ! ನೀನೇಕೆ ಇಂತಹ ಕೆಲಸ ಮಾಡಿದೆ? ಅನ್ಯಾಯವಾಗಿ ಮಾನವನ್ನು ಕಳಂಕಗೊಳಿಸಿ ಪ್ರಾಣಕ್ಕೂ ಭಂಗವನ್ನು ತಂದುಕೊಂಡೆಯಲ್ಲವೇ? ಇದನ್ನು ನಾನೆಂತು ಸೈರಿಸಲಿ? ನಾನೇ ಬಂದು ಬಿಡಿಸುವೆನೆಂದರೆ ನನ್ನ ಸ್ಥಿತಿಯು ಹೀಗಾಯಿತಲ್ಲಾ! ರಾಜಶಾಸನವು ಮೀರಕೂಡದಷ್ಟೆ! ಏನು ಮಾಡಲಿ? ಶೂದ್ರಕನ ಅಪಕೀರ್ತಿಸ್ತಂಭವನ್ನು ಭೂಮಂಡಲದಲ್ಲಿ ಆಚಂದ್ರಾರ್ಕವಾಗಿ ಪ್ರತಿಷ್ಠೆಗೊಳಿಸಲೇ! ಇಲ್ಲವಾದರೆ ಮಿತ್ರನನ್ನು ಉದ್ಧರಿಸಿ ಘೋರತರವಾದ ರಾಜಶಾಸನಕ್ಕೆ ಒಳಗಾಗಲೇ?" ಹೀಗೆ ಚಿಂತಿಸುತ್ತ ಸ್ವಲ್ಪ ಕಾಲ ಮೌನದಿಂದಿದ್ದು, "ರಾಜಶಾಸನವು ದೈವಶಾಸನಕ್ಕಿಂತಲೂ ಹೆಚ್ಚಾದುದಲ್ಲವಷ್ಟೆ! ರಾಜಶಾಸನಕ್ಕೆ ವಿರುದ್ಧವಾಗಿ ನಡೆದು ಶಿಕ್ಷೆಗೆ ಗುರಿಯಾದೆನಾದರೆ, ನನ್ನ ದೇಹವು ಮಾತ್ರವೇ ಕಷ್ಟಪಡುವುದು. ಮಿತ್ರನನ್ನು ಉಪೇಕ್ಷಿಸಿದೆನಾದರೆ, ನನ್ನ ಮನಸ್ಸು ನೂರಾರು ಬಗೆಯಿಂದ ಕಂದಿ ಕುಂದಿ ನನ್ನನ್ನು ಪರಲೋಕಬಾಹಿರನನ್ನಾಗಿ ಮಾಡದಿರದು. ಆದದ್ದು ಆಗಲಿ! ಮಿತ್ರನನ್ನು ಉದಾಸೀನಮಾಡುವುದು ಯುಕ್ತವಲ್ಲ" ಎನ್ನುತ್ತ ತನ್ನ ಚಾರನನ್ನು ಕರೆದು, "ನೀನೀಗಲೇ ನಿಮ್ಮ ಒಡೆಯನಾದ ವಿಂಧ್ಯಕೇತುವಿನ ಬಳಿಗೆ ಹೋಗಿ ತಕ್ಕಷ್ಟು ಪರಿವಾರದೊಂದಿಗೆ ಇಂದಿಗೆ ಒಂಭತ್ತನೆಯ ದಿನ ಹೊತ್ತು ಮುಳುಗುವುದರೊಳಗಾಗಿ ಉಜ್ಜಯಿನೀ ಪಟ್ಟಣದ ಬಾಹ್ಯೋದ್ಯಾನದಲ್ಲಿ ನನ್ನನ್ನು ಬಂದು ಕಾಣಬೇಕು ಆ ರಾತ್ರಿಯ ಎರಡನೆಯ ಜಾವದಲ್ಲಿ ನನ್ನ ಸಂಜ್ಞೆಗಳನ್ನು ಅರಿತು, ಜಾಗರೂಕತೆಯಿಂದ ಕಾರ್ಯಗಳನ್ನು ನಡೆಯಿಸಬೇಕು" ಎಂಬುದಾಗಿ ಹೇಳಿ ಅವನನ್ನು ಕೂಡಲೇ ಕಳುಹಿಸಿ, ಆ ರಾತ್ರಿಯೇ ತಾನೂ ಉಜ್ಜಯಿನಿಯನ್ನು ಕುರಿತು ತೆರಳಿದನು ಕ್ಲುಪ್ತಕಾಲಕ್ಕಿಂತಲೂ ಒಂದು ದಿನ ಮುಂಚಿತವಾಗಿಯೇ ಶೂದ್ರಕನು ನಿಯಮಿತ ಸ್ಥಳವನ್ನು ಸೇರಿ, ಪಟ್ಟಣದೊಳಗಣ ವಿದ್ಯಮಾನಗಳನ್ನೆಲ್ಲ ತಿಳಿಯುತ್ತ, ಕಿರಾತಪತಿಯ ಸೇನೆಯನ್ನು ಇದಿರುನೋಡುತ್ತಿದ್ದನು.

ಇತ್ತ ಶೂದ್ರಕನು ಗಡಿಪಾರಾದ ಬಳಿಕ, ಉಜ್ಜಯಿನಿಯ ಪ್ರಸ್ತಾವವೇನೆಂಬುದನ್ನು ಸ್ವಲ್ಪ ಪರ್ಯಾಲೋಚಿಸುವುದು ಆವಶ್ಯಕವಲ್ಲವೇ?

ಅರಸನಿಗೆ ಹಣದಾಸೆಯು ಹೆಚ್ಚಿತು ಪ್ರಜೆಗಳಲ್ಲಿ ಹಣಗಾರರಾದವರನ್ನು ಯಾವುದಾದರೊಂದು ಬಗೆಯಿಂದ ಅಪರಾಧಿಗಳೆಂದು ಹಿಡಿದೆಳೆಸಿ, ರಾಜಾಸ್ಥಾನದಲ್ಲಿ ವಿಚಾರಣೆಗೆ ಒಳಪಡಿಸವೊದಲಾಯಿತು ಮಾನದ ಮೇಲಣ ಆಸೆಯಿಂದ ಅವರು ಅರಸನಿಗೆ ಹೇರಳವಾಗಿ ಹಣವನ್ನು ಸಮರ್ಪಿಸಿ ಪಾರಾಗತೊಡಗಿದರು. ಭೂಮಿಗಳ ಕಂದಾಯವು ಕ್ರಮಕ್ರಮವಾಗಿ ಇಮ್ಮಡಿಗಿಂತಲೂ ಹೆಚ್ಚಾಯಿತು. ನಿಜವಾದ ಅಪರಾಧಿಗಳ ಅಪರಾಧವು ಲಂಚದ ಮೂಲಕ ತಲೆ ತಪ್ಪಿಸಿಕೊಳ್ಳ ತೊಡಗಿತು. ಪ್ರಜೆಗಳಿಗೆ ಅರಸನಲ್ಲಿ ಭರವಸೆಯು ಮಾಯುವಾಗುತ್ತ ಬಂದಿತು. ಹೀಗಾಗಿ ದುಷ್ಟತೆಯು ಪ್ರಬಲಿಸಿ ಉಚ್ಛೃಂಖಲವಾಗಿ ಬಿಟ್ಟಿತು ಕಳ್ಳಕಾರರು ಅಪಹರಿಸಿದ ವಸ್ತುಗಳಲ್ಲಿ ಅರಸನಿಗೆ ಅರ್ಧಪಾಲು ಇದ್ದುದರಿಂದ ಕಳವು ರಾಜಶಾಸನಕ್ಕೆ ಹೆದರದೆ ತಲೆಯೆತ್ತಿ ನಡೆಯತೊಡಗಿತು ವ್ಯಾಪಾರಿಗಳ ಮೇಲೆಯೂ ಆಮದು, ರಫ್ತುಗಳ ಮೇಲೆಯೂ ಸುಂಕವು ಇಮ್ಮಡಿಯಾಯಿತು. ಅಧಿಕಾರಿಗಳೂ ತಮ್ಮ ಮಟ್ಟಿಗೆ ಬೊಕ್ಕಸಗಳನ್ನು ತುಂಬಿಕೊಳ್ಳುತ್ತ ಬೈಡಾಲಿಕವೃತ್ತಿಯನ್ನು ಅಭಿನಯಿಸುವವರಾದರು ಬಡ್ಡಿಯ ವ್ಯಾಪಾರಿಗಳು ಸಾಲಗಾರರನ್ನು ಪೀಡಿಸತೊಡಗಿ ತಮ್ಮ ಹಣಕ್ಕೆ ಬದುಲಾಗಿ ಅವರ ಆಸ್ತಿಪಾಸ್ತಿಗಳನ್ನು ಈಡುಮಾಡಿಕೊಳ್ಳತೊಡಗಿದರು. ಸತಿಯರ ಮಾನಸಂರಕ್ಷಣೆಯು ಕಷ್ಟಸಾಧ್ಯವಾಯಿತು. ಒಟ್ಟಿನ ಮೇಲೆ ದೇಶದಲ್ಲಿ ರಾಜನೀತಿಯು ಬಿಗಿಯಿಲ್ಲದೆ, ರಾಜನಲ್ಲಿ ಭಕ್ತಿಯೂ ರಾಜಾಸ್ಥಾನದ ಅಧಿಕಾರಿಗಳಲ್ಲಿ ಗೌರವವೂ ಪ್ರಜೆಗಳಿಗೆ ತುಸವಾದರೂ ಇರಲಿಲ್ಲ ಯಾವ ಸಮಯದಲ್ಲಿ ಎಂತಹ ಅಪವಾದವೋ ಕಿರುಕುಳವೋ ಏನೋ ಎಂಬುದಾಗಿ ಎಲ್ಲರೂ ತತ್ತರಗೊಂಡಿದ್ದರು ಲಂಚ, ಸುಳ್ಳು, ಜೂಜು, ಕೊಳ್ಳೆ, ಇವೆಲ್ಲಾ ದೇಶವನ್ನೆಲ್ಲ ಆವರಿಸಿಕೊಂಡುವು. ದೇವಾಲಯ, ಸತ್ರ ಮುಂತಾದುವುಗಳ ವಿಚಾರಣೆಯಂತೂ ದೇವರೇ ವಿಚಾರಿಸಬೇಕಾಯಿತು. ಮಂತ್ರಿವರ್ಯನಾದ ಧರ್ಮಪಾಲನು ಊರುಬಿಟ್ಟು ಹೋದ ಬಳಿಕ ಚಕೋರನೂ ಚಂಡಸಿಂಹನೂ ತಮ್ಮ ತಮ್ಮ ಅಧಿಕಾರಗಳನ್ನು ಇಷ್ಟಾನುಸಾರ ನೆರವೇರಿಸತೊಡಗಿದರು. ಅರಸನು ಉನ್ಮತ್ತನಂತಿದ್ದನು.

ಶೂದ್ರಕನು ಈ ವಿಷಯಗಳನ್ನು ಪ್ರಜೆಗಳ ಮೂಲಕ ರಹಸ್ಯವಾಗಿ ತಿಳಿದು ಪಶ್ಚಾತ್ತಪ್ತನಾಗಿ, ಕಿರಾತಸೇನೆಯು ಇನ್ನೂ ಯಾವಾಗ

ಬರುವುದೋ ಏನೋ ಎಂಬುದಾಗಿ ಯೋಚಿಸುತ್ತಿರುವಷ್ಟರಲ್ಲಿ, ಬೇಡರ ಅರಸನ ಗೂಢಭಟರು ತಮ್ಮ ಆಯುಧಗಳನ್ನು ಬೈತಿಟ್ಟುಕೊಂಡು ಶೂದ್ರಕನ ಅಪ್ಪಣೆಯನ್ನು ಇದಿರುನೋಡುತ್ತಿರುವರಾಗಿ ಒಬ್ಬ ಚಾರನು ಬಂದು ರಹಸ್ಯವಾಗಿ ಬಿನ್ನಯಿಸಿದನು. ಈ ಭಟರು ಯಾತ್ರಿಕರಂತೆ ತೋರುತ್ತಿದ್ದರಲ್ಲದೆ ಯಾವ ಸಂದೇಹಕ್ಕೂ ಅವಕಾಶಕೊಡದೆ ಗಂಭೀರ ಭಾವದಿಂದ ನಡೆದುಕೊಳ್ಳುತ್ತ, ವೀರರಸವೇ ಮೈವೆತ್ತುದೊ ಎಂಬಂತೆ ಉದಾಸೀನದೃಷ್ಟಿಯನ್ನು ಬೀರುತ್ತ, ಬೀದಿಬೀದಿಗಳಲ್ಲಿಯೂ ವ್ಯಾಪಿಸಿಕೊಂಡರು.

ಅಂದು ಶ್ರಾವಣ ಮಾಸದ ಅಮಾವಾಸ್ಯೆ. ಅಂತರಿಕ್ಷದಲ್ಲಿ ಎಲ್ಲೆಲ್ಲಿಯೂ ಮೋಡಗಳು ಕವಿದಿದ್ದುವು. ಪರ್ಜನ್ಯನು ಉಜ್ಜಯಿನೀ ನಗರದ ದುರವಸ್ಥೆಯನ್ನು ನೋಡಿ ಮಮ್ಮಲಮರುಗುತ್ತಿರುವನೋ ಎಂಬಂತೆ ನೋನೆಮಳೆಯನ್ನು ಸುರಿಸುತ್ತಿದ್ದನು ಶೂದ್ರಕನು ಸಂಜೆಯ ವರೆಗೂ ಪಟ್ಟಣವನ್ನು ಹುಗಲಿಲ್ಲ. ಇವನ ಬಾಲ್ಯಮಿತ್ರರಾದ ವಿಶ್ವಲಕನೇ ಮೊದಲಾದವರು ಹೇಗೋ ಇವನ ಬರುವಿಕೆಯನ್ನು ಮೊದಲೇ ತಿಳಿದಿದ್ದ ಕಾರಣ ಕಿರಾತ ಸೇನೆಯು ಪಟ್ಟಣವನ್ನು ಸೇರುವುದಕ್ಕಿಂತಲೂ ಸಮುಚಿತವಾಗಿ ನಿಯಮಿತ ಸ್ಥಳದಲ್ಲಿ ಶೂದ್ರಕನನ್ನು ಕೂಡಿ, ನಗರದ ವಿದ್ಯಮಾನಗಳನ್ನೆಲ್ಲ ಬಣ್ಣಿಸಿ ಮರುಗತೊಡಗಿದರು. ಇಷ್ಟರಲ್ಲಿ ರಾತ್ರಿಯ ಮೊದಲನೆಯ ಜಾಮವು ಕಳೆಯಿತು. ಕೂಡಲೇ ಶೂದ್ರಕನು ಎದ್ದುನಿಂತನು. ಪರಿವಾರದವರು ಒಬ್ಬೊಬ್ಬರಾಗಿ ತಂತಮ್ಮ ಸಂಕೇತಸ್ಥಾನವನ್ನು ಬೇರೆಬೇರೆ ಮಾರ್ಗವಾಗಿ ಬಂದು, ಕಾರಾಗೃಹದ ಹೆಬ್ಬಾಗಿಲಿನ ಬಳಿ ಸುಮಾರು ೫೦೦ ಮಂದಿ ವೀರಪುರುಷರು ಬಂದುಸೇರಿದರು ಯಾರೊಬ್ಬರೂ ಪ್ರಾಣಗಳನ್ನು ಲೆಕ್ಕಿಸುವರಂತೆ ತೋರಲಿಲ್ಲ. ಎಲ್ಲರೂ ಆಯುಧಪಾಣಿಗಳಾಗಿದ್ದರು ಇವರಲ್ಲಿ ಇಬ್ಬರು ಮಾತ್ರ ವೀರಾಧಿವೀರರೆನಿಸಿ ತಮ್ಮ ಅಧಿಕಾರವು ಆ ಐನೂರು ಮಂದಿಯ ಮೇಲೆಯೂ ಇರುವುದೆಂಬುದನ್ನು ತೋರ್ಪಡಿಸುತ್ತಿದ್ದರು. ಅವರು ಗಂಭೀರಧ್ವನಿಯಿಂದ ಅಣತಿಯಿತ್ತ ಕೂಡಲೇ ಆ ಭಟರೆಲ್ಲರೂ ತಮ್ಮ ಕ್ಲುಪ್ತಸ್ಥಾನಗಳಿಗೆ ತೆರಳಿದರು.

ಬಳಿಕ ಶೂದ್ರಕನು ಸೆರೆಮನೆಯ ಹೆಬ್ಬಾಗಿಲನ್ನು ಮುರಿದು ಒಳಹೊಕ್ಕು ಇದಿರಿಸಿದ ಕಾವಲುಗಾರರನ್ನು ದೀರ್ಘನಿದ್ರೆ ಗೆಯ್ಸಿ, ಬೀಗದ ಕಯ್ಗಳನ್ನು ತೆಗೆದುಕೊಂಡು, ಕಾರಾಗೃಹದ ಒಳಭಾಗವನ್ನು ಸೇರಿ, ಒಂದು

ಕೊಟಡಿಯ ಬಾಗಿಲನ್ನು ತೆರೆದು ನೋಡಿದನು. ಅಲ್ಲಿ ಒಂದು ವ್ಯಕ್ತಿಯು ಸತ್ತ್ರಾಸಾಯದೆ, ತನ್ನ ಹಣೆಯು ಬರಹವನ್ನು ದೂರುತ್ತ ಕಂಬನಿಸುರಿಸು ತ್ತಿದ್ದಿತು ಶೂದ್ರಕನು ಬೇಗನೆ ಬಳಿಸಾರ್ದು, ಆ ವ್ಯಕ್ತಿಯ ಕೈಕಾಲುಗಳಲ್ಲಿದ್ದ ಸಂಕೋಲೆಗಳನ್ನು ಒಡೆದುತೆಗೆದು, ಬೇರೆಯ ಉಡುಪನ್ನು ತೊಡಿಸಿ, ಸಂಗಡ ಒಬ್ಬ ಭಟನನ್ನು ಕೊಟ್ಟು "ಈ ಕ್ಷಣವೇ ನೀನು ವಿಶ್ವಲಕನ ಮನೆಗೆ ಹೋಗು. ಅವನು ಎಲ್ಲವನ್ನೂ ಅಣಿಮಾಡಿರುತ್ತಾನೆ. ಅವನ ಸೂಚನೆ ಯಂತೆಯೇ ಬೆಳಗಾಗುವುದರೊಳಗಾಗಿ ಎಲ್ಲಿಯಾದರೂ ಹೋಗಿ ತಲೆ ತಪ್ಪಿಸಿಕೊಂಡು ಬಾಳು" ಎಂಬುದಾಗಿ ಹೇಳಿದನು. ವ್ಯಕ್ತಿಯು ಬಂಧು ದತ್ತನು ಅವನು ಶೂದ್ರಕನೊಂದಿಗೆ ಮಾತನಾಡಲು ಧೈರ್ಯವಿಲ್ಲದವನಾ ದರೂ ತನ್ನ ಸ್ನೇಹ ಪುರಸ್ಕೃತವಾದ ಕೃತಜ್ಞತೆಯನ್ನು ಸೂಚಿಸುವ ಸಲು ವಾಗಿ ಬಾಯ್ದೆರೆಯುತ್ತಿರುವಷ್ಟರಲ್ಲಿಯೇ, ಶೂದ್ರಕನು 'ಸಾಕು ನೀನಿಲ್ಲಿ ಅರೆ ನಿಮಿಷವಾದರೂ ಸಾವಕಾಶಮಾಡಿದೆಯಾದರೆ, ನಾವು ಘೋರತರವಾದ ವಿಪತ್ತಿಗೆ ಗುರಿಯಾಗುವೆವು ಬೇಗನೆ ಹೊರಡು" ಎಂದ ಕೂಡಲೇ ಬಂಧು ದತ್ತನು ಖೇದಾಶ್ಚರ್ಯಭರಿತನಾಗಿ ಅಲ್ಲಿಂದ ಹೊರಟು, ಪ್ರಿಯಮಿತ್ರನಾದ ವಿಶ್ವಲಕನ ಮನೆಯನ್ನು ಸೇರಿ, ತನ್ನ ಆಸ್ತಿಪಾಸ್ತಿಗಳನ್ನೆಲ್ಲ ಅವನಿಗೆ ಒಪ್ಪಿಸಿ, ಕಯ್ಯಲ್ಲಿ ಬೇಕಾದಷ್ಟು ರೊಕ್ಕವನ್ನು ಮಾತ್ರ ತೆಗೆದುಕೊಂಡು, ತನಗಾಗಿ ಸಿದ್ಧವಾಗಿದ್ದ ದಿವ್ಯಾಶ್ವವನ್ನೇರಿದನು ಕೂಡಲೇ ಅವನ ಸಂಗಡ ಬಂದಿದ್ದ ಭಟನು ಮತ್ತೊಂದು ಕುದುರೆಯನ್ನೇರಿದನು. ಭಟನ ಸನ್ನೆಯಂತೆ ಕುದುರೆ ಗಳೆರಡೂ ಓಡ ತೊಡಗಿದುವು. ಕಾರಾಗೃಹವಿಮುಕ್ತನಾದ ಬಂಧುದತ್ತನಿಗೆ ಅರಸನ ಹೆದರಿಕೆಯು ಇಮ್ಮಡಿಯಾಯಿತು. ರಾಜದೂತರು ಹಿಂದಟ್ಟಿ ಬಂದು ಹಿಡಿದರೆ, ತನ್ನ ಗತಿಯೇನೆಂಬುದಾಗಿ ಚಿಂತಿಸುತ್ತ ಆ ಭಟನ ಹಿಂದೆಯೇ ಕುದುರೆಯ ಮೇಲೆ ತೊಗಲಿನ ಬೊಂಬೆಯಂತೆ ಕುಳಿತಿದ್ದನು ಬೆಳಗಾಗು ವಷ್ಟರಲ್ಲಿ ಇಬ್ಬರೂ ಮೂರು ಗಾವುದ ದೂರ ಪ್ರಯಾಣಮಾಡಿದರು. ಬಂಧುದತ್ತನು ಬಹಳ ದಣಿದಿದ್ದನು. ವಿಶ್ರಮಿಸಿಕೊಳ್ಳಲು ಆ ಭಟನ ಅನುಮತಿಯನ್ನು ಕೇಳಿದನು ಆದರೆ ಭಟನು ಸಮ್ಮತಿಸಲಿಲ್ಲ. ಒಂದೆರಡು ಮೈಲಿಗಳ ದೂರ ಹೋಗುವಷ್ಟರಲ್ಲಿಯೇ ಭಟನು ಕಾಡುದಾರಿಯನ್ನು ಹಿಡಿದನು. ಬಂಧುದತ್ತನಿಗೆ ಶಸ್ತ್ರಾಸ್ತ್ರಗಳೆಲ್ಲವೂ ಉಡುಗಿದಂತಾದುವು. ಆದರೂ ಬಾಯ್ದೆರೆಯದೆ ಸುಮ್ಮನೆ ಕುಳಿತಿದ್ದನು. ಹತ್ತು ಮೂರು ದೂರ

ಹೋಗುವುದರೊಳಗಾಗಿ ಕುದುರೆಯಿಂದ ಇಳಿಯಬಿದ್ದನು. ಬಂಧುದತ್ತನು ಏರಿದ್ದ ಕುದುರೆಯು ನಿಂತುಬಿಟ್ಟಿತು. ಹಿಂದಣ ಕುದುರೆಯ ಗೊರಸೆಗಳ ಶಬ್ದವು ಕೇಳಿಸದಿರಲು ಭಟನು ಹಿಂದಿರುಗಿ ನೋಡಿದನು. ಬಂಧುದತ್ತನ ಅವಸ್ಥೆಯು ತಿಳಿಯಿತು ಭಟನು ತುತೂರಿಯನ್ನು ಊದಿದ ಕೂಡಲೇ ಕೆಲವು ಮಂದಿ ಯೋಧವೇಷದವರು ಅಲ್ಲಿಗೆ ಬಂದು ನೆಲಮುಟ್ಟಿ ನಮಸ್ಕರಿಸಿ ನಿಂತು ಅಪ್ಪಣೆಯೇನೆಂದು ಕೇಳಿದರು ಭಟನು ಬಂಧುದತ್ತ ನನ್ನು ತೋರಿ, ಬೇಗನೆ ಅವನನ್ನು ಬಿಡಾರಕ್ಕೆ ಕರೆತಂದು ಉಪಚರಿಸುವಂತೆ ಹೇಳಿ ತಾನೂ ಕುದುರೆಯಿಂದಿಳಿದು, ಅವರ ಸಂಗಡಲೇ ನಡೆದುಬರು ತ್ತಿದ್ದನು. ಬಂಧುದತ್ತನಿಗೆ ಮೈಮೇಲೆ ಸ್ಮೃತಿಯಿರಲಿಲ್ಲ. ಅವನು ಎಚ್ಚರ ಗೊಳ್ಳುವಾಗ ಒಂದು ದಿವ್ಯಭವನದಲ್ಲಿ ತನ್ನ ಕುಟುಂಬಪರಿವಾರದೊಡನೆ ಇದ್ದನು. ವಿಚಾರಿಸುವಲ್ಲಿ ಶೂದ್ರಕನು, ಬಂಧುದತ್ತನ ಕುಟುಂಬದವರನ್ನೆಲ್ಲ ಅಲ್ಲಿಗೆ ಕಳುಹಿ ಐದು ದಿನಗಳಾದುವೆಂತಲೂ, ಬಂಧುದತ್ತನು ಅವರೆಲ್ಲರೂ ಅಲ್ಲಿಗೆ ಬಂದ ಮೂರನೆಯ ದಿನ ಬಂದನೆಂತಲೂ, ಯಾವನೋ ಒಬ್ಬ ಬೇಡರ ಪಾಳೆಯಗಾರನು ಅವನನ್ನು ಅಲ್ಲಿಗೆ ಕರೆತಂದನೆಂತಲೂ ಕೇಳಿ, ಶೂದ್ರಕನ ಸಾಹಸಕ್ಕೆ ತಲೆದೂಗಿ ಅಚ್ಚರಗೊಂಡನು.

ಇತ್ತ ಶೂದ್ರಕನು ಕಾರಾಗೃಹದಲ್ಲಿ ಸ್ವೇಚ್ಛೆಯಿಂದ ಸಂಚರಿಸುತ್ತ, ಬಂದಿಗಳೆಲ್ಲರನ್ನೂ ಬಿಡಿಸಿ, ಹೊರಗೆ ಬಂದು, ತನ್ನ ಪರಿವಾರದವರನ್ನೆಲ್ಲ ಅವರವರ ಸಂಕೇತ ಸ್ಥಾನಗಳಿಗೆ ಹೋಗುವಂತೆ ಹೇಳಿ, ತಾನೂ ತನ್ನ ಸುರಂಗದ ಬಿಡದಿಗೆ ಹೋಗುತ್ತಿರುವಲ್ಲಿ, ರಾಜಭಟರು ಕಿರಾತಸೇನೆಯನ್ನು ಅಡ್ಡಯಿಸಿ, "ನೀವು ಯಾರು? ಎಲ್ಲಿಯವರು? ಈ ರೀತಿ ಕಾರಾಗೃಹವನ್ನು ಹೊಕ್ಕು ಈ ಸರಿ ಹೊತ್ತಿನಲ್ಲಿ ಏನು ಮಾಡಿ ಬಂದಿರಿ?" ಎಂದು ಮುಂತಾಗಿ ಪ್ರಶ್ನೆಮಾಡಲಾಗಿ, ಇವರಿಂದ ಸಮರ್ಪಕವಾದ ಉತ್ತರವು ದೊರೆಯದಿರಲು, ರಾಜಭಟರ ಸಂದೇಹವು ಇಮ್ಮಡಿಯಾಗಿ, ಕಡೆಗೆ ಕಿರಾತಸೇನೆಗೂ ರಾಜ ಬಟರಿಗೂ ಹೋರಾಟವಾಗಿ, ಬೇಡರ ಗೂಢಭಟರು ರಾಜಭಟರನ್ನು ವಿಧಿಯಿಲ್ಲದೆ ತಮ್ಮ ಯಜಮಾನನ ಬಳಿಗೆ ಕರೆತಂದರು ಶೂದ್ರಕನು ವಾಸ್ತವಾಂಶವನ್ನು ತಿಳಿಸಿದ ಕೂಡಲೇ ರಾಜಭಟರು ಶೂದ್ರಕನನ್ನು ಸೆರೆ ಹಿಡಿದು ತಮ್ಮ ಅಧಿಕಾರಿಯ ಬಳಿಗೆ ಕರೆದುಯ್ದರು. ಆ ಅಧಿಕಾರಿಯು ಶೂದ್ರಕನನ್ನು ಹಿಡಿದ ಸಮಾಚಾರವನ್ನು ಕೇಳುತ್ತಲೇ, ತನ್ನ ಪಾಲಿನ

ದೈವವು ಕರುಣಿಸಿತೆಂಬುದಾಗಿ ಭಾವಿಸಿದನು. ಅವನ ಆನಂದಕ್ಕೆ ಪಾರವೇ ಇಲ್ಲದಂತಾಯಿತು. ಒಡನೆಯೇ ಶೂದ್ರಕನನ್ನು ಕಾರಾಗೃಹ ದಲ್ಲಿರಿಸಿ, ಶೂದ್ರಕನ ವೃತ್ತಾಂತವನ್ನೆಲ್ಲ ರಾಜನಿಗೂ, ಮಂತ್ರಿಯಾದ ಚಕೋರನಿಗೂ ಅರಿಕೆಮಾಡಿದನು. ರಾಜನು ಶೂದ್ರಕನ ದುರುದುಂಬಿ ತನವನ್ನು ಸಹಿಸಲಾರದೆ ಬಂಧುಮಿತ್ರನಿದ್ದ ಸ್ಥಳದಲ್ಲಿಯೇ ಶೂದ್ರಕನನ್ನು ಸೆರೆಯಲ್ಲಿಡುವುದಾಗಿ ಆಜ್ಞಾಪಿಸಿದನು. ಇಷ್ಟರಲ್ಲಿ ಚಂಡಸಿಂಹನೂ ರಾಜಾ ಸ್ಥಾನವನ್ನು ಸೇರಿದನು. ಚಂಡಸಿಂಹನು ಸಂತೋಷದಿಂದ ಉಬ್ಬಿ ಹೋದನು. ಉಜ್ಜಯಿನಿಯ ಸಿಂಹಾಸನಾಧಿಪತ್ಯವೇ ತನ್ನ ಕೈಸೇರಿದ್ದರೂ ಚಂಡಸಿಂಹನಿಗೆ ಅಷ್ಟು ಆನಂದವು ಉಕ್ಕುತ್ತಿರಲಿಲ್ಲವೆಂದು ಹೇಳಬಹುದು.

ರಾಜಾಧಿಕಾರಿಯು "ಶೂದ್ರಕನನ್ನು ಹಿಡಿಯುವುದೆಂದರೆ ಬಾಯಿ ಮಾತಲ್ಲ. ನಾನು ಅವನನ್ನು ಎಷ್ಟೋ ಉಪಾಯದಿಂದ ಹಿಡಿದೆನು. ನನ್ನ ಪ್ರಾಣಗಳೆಲ್ಲವೂ ಮೂಗಿಗೆ ಬಂದುವು ಅವನಾದರೂ ಸಾಮಾನ್ಯವಾಗಿ ವಶನಾದನೇ? ಎಷ್ಟೋ ಹೆಣಗಾಡಿ ಕಡೆಗೆ ಸಾಧ್ಯವಿಲ್ಲದೆ ಹೇಗೋ ಸಿಕ್ಕ ಬಿದ್ದನು ಈಗಲೂ ಅವನನ್ನು ತಕ್ಕ ರೀತಿ ನಿರ್ಬಂಧದಲ್ಲಿರಿಸದಿದ್ದರೆ, ನೀರಿನಂತೆ ನೆಲದಲ್ಲಿಯೇ ಬತ್ತಿಹೋಗುವನೋ, ಗಾಳಿಯಂತೆ ಕಣ್ಣಿಗೆ ಮಣ್ಣೆರಚಿ ಮಾಯವಾಗುವನೋ, ನೆಳಲಿನಂತೆ ಕಾಣುತ್ತಿದ್ದರೂ ಹಿಡಿಯಲು ಸಾಧ್ಯವಾಗದೆ ಕಂಬಗಳಲ್ಲಿ ತೂರಿಕೊಳ್ಳುವನೋ, ಐಂದ್ರಜಾಲಿಕನಂತೆ ತಾನು ಇದ್ದಲ್ಲಿಯೇ ಇದ್ದರೂ ಇತರರ ಕಣ್ಣಿಗೆ ಕಾಣಿಸನೋ, ಮಾಯಾ ವಿಷಸರ್ಪದಂತೆ ಹೊಗೆಯನ್ನುಗುಳುತ್ತ ನೋಡುತ್ತಿದ್ದ ಹಾಗೆಯೇ ಓಡಿ ಹೋಗುವನೋ—ಅವನ ಕುತಂತ್ರಗಳನ್ನು ಬಣ್ಣಿಸಲು ನನಗೆ ಸಾಧ್ಯವಲ್ಲ" ಎಂದು ಮುಂತಾಗಿ ಬಣ್ಣಿಸಿದನು. ಅರಸನು "ಒಳ್ಳೆಯದು ನಿನ್ನ ಪರಿಶ್ರಮಕ್ಕೆ ತಕ್ಕ ಪ್ರತಿಫಲವನ್ನು ನಾವು ಸಮಯ ಬಂದಾಗ ಮಾಡದಿರ ಲಾರೆವು. ಈಗ ಮಾತ್ರ ನೀನು ಶೂದ್ರಕನನ್ನು ಅವನ ಮಿತ್ರನಿದ್ದ ಸ್ಥಳ ದಲ್ಲಿಯೇ ಇರಿಸಿ, ಜಾಗರೂಕತೆಯಿಂದ ನೋಡಿಕೊಳ್ಳುತ್ತಿರು" ಎಂಬುದಾಗಿ ಅಪ್ಪಣೆಕೊಟ್ಟು ಕಳುಹಿಸಿದನು.

ಇತ್ತ ಶೂದ್ರಕನು ಸ್ವಲ್ಪವೂ ಎದೆಗುಂದದೆ, ಅಲ್ಲಿಯೇ ಇದ್ದು ಮಧ್ಯಾಹ್ನದ ಬಿಸಿಲಿನ ಝಳವನ್ನು ತಡೆಯಲಾರದೆ ಸ್ವಲ್ಪ ಮೈಮರೆತಿರುವಲ್ಲಿ, ಅವನ ಪಕ್ಕದಲ್ಲಿ ಯಾವುದೋ ಒಂದು ವಸ್ತುವು ಬಿದ್ದಂತೆ ಶಬ್ದವಾಯಿತು.

ಕೂಡಲೇ ಎಚ್ಚತ್ತು ನೋಡಿ, ಆ ಪತ್ರಿಕೆಯನ್ನು ತೆಗೆದು ಬಿಚ್ಚಿ ಓದುವಲ್ಲಿ ಅದರಲ್ಲಿ—

“ಅಯ್ಯೋ! ಕಾಲಗತಿಯೇ! ನಿನ್ನನ್ನೇ ಸಂರಕ್ಷಿಸಿಕೊಳ್ಳಲಾರದ ನೀನು ಧರ್ಮವನ್ನೆಂತು ಪಾಲಿಸಬಲ್ಲೆ? ಈಗ ನಿನ್ನ ಧರ್ಮದೇವತೆಯಾದರೂ ಎಲ್ಲಿ ಅಡಗಿ ಹೋದಳು? ನೀನೇ ರಾಜನಾಗಬಹುದಾಗಿದ್ದಿತಲ್ಲವೇ? ಮುಂದೆಯಾದರೂ ನಿನಗೆ ಈ ಪದವಿಯು ದುರ್ಲಭವಲ್ಲ. ಆದರೆ ಜ್ಞಾನೋದಯವಾಗಬೇಕು ಈಗ ಜ್ಞಾನಮಂಟಪವನ್ನು ಸೇರಿರುವೆಯಾಗಿ ವಿವೇಕವು ತಲೆದೋರಿರಬಹುದು. ಹೇಗೂ ಇನ್ನೊಮ್ಮೆ ನಿನ್ನನ್ನು ಈ ಗಂಡದಿಂದ ಬಿಡುಗಡೆಮಾಡಿ ಪರೀಕ್ಷಿಸಿ ನೋಡುವೆನು”

ಈ ಪ್ರಕಾರವಾಗಿ ಬರೆದಿದ್ದಿತು.

ಆ ಪತ್ರವನ್ನು ಓದಿಕೊಂಡು ಶೂದ್ರಕನು ವಿಸ್ಮಿತನಾದನು ಒಡನೆಯೇ ಅವನ ಅಂತರಂಗದಲ್ಲಿ ತಿರಸ್ಕಾರ ಭಾವವು ತಲೆದೋರಿತು. “ಛೀ! ನಾನೂ ಒಬ್ಬ ಹೇಡಿಯಂತೆ ಇಂತಹ ಚುಚ್ಚುಮಾತುಗಳನ್ನು ಕೇಳಬೇಕಾಯಿತೇ? ಎಂತಹ ಕಾಲವೈಪರೀತ್ಯವಿದು? ಧರ್ಮವೇ ಇಲ್ಲವೇ? ಇಲ್ಲವಂಬುದಾಗಿ ಈ ಪತ್ರಿಕೆಯಲ್ಲಿ ಬರೆದಿದೆಯಲ್ಲವೇ? ಅಕಟಾ! ದೈವವಾದರೂ ನನ್ನನ್ನು ಪರೀಕ್ಷಿಸತೊಡಗಿರುವುದಲ್ಲಾ! ಇರಲಿ! ಒಂದು ವೇಳೆ ಅರಸನು ನನ್ನನ್ನು ಕೊಲ್ಲಿಸಿದರೂ ಮಿತ್ರಕಾರ್ಯಾರ್ಥವಾಗಿ ಪ್ರಾಣಗಳನ್ನು ಬಲಿಕೊಡುವೆನಾಗಿ, ನಾನು ಮಡಿದರೂ ನನ್ನ ಕೀರ್ತಿಯು ಆಚಂದ್ರಾರ್ಕವಾಗಿ ನಿಲ್ಲಲಾರದೇ? ಅಥವಾ ನಾನಾದರೂ ಏಕೆ ಸಾಯಬೇಕು? ಈಗ ಅರಸನು ನನ್ನನ್ನು ಸೆರೆಯಲ್ಲಿ ಹಾಕುವನಲ್ಲವೇ? ಏನು ಮಾಡುವನೋ ತಿಳಿಯದು? ಇವನ ಉದ್ದೇಶವೇನಿರಬಹುದು? ನನ್ನನ್ನೂ ಕೊಲ್ಲಿಸಬಲ್ಲನೇ? ಆಗಲಾದರೂ ಧರ್ಮದೇವತೆಯು ಇಂತೆಯೇ ಪರೀಕ್ಷಿಸುವಳೇ? ಛೀ! ಛೀ! ನನಗೇಕೆ ಹುಚ್ಚು! ಧರ್ಮಕ್ಕೆ ಎಂದಿಗಾದರೂ ಚ್ಯುತಿಯುಂಟೇ? ಇಂತಿರಲು ನಾನೇಕೆ ಹೆದರಬೇಕು? ಅರಸನಿಗೆ ಪ್ರಜೆಗಳ ವಿಷಯದಲ್ಲಿ ಸ್ವಲ್ಪವೂ ನಂಬಿಕೆಯೇ ಇಲ್ಲ. ಪ್ರಜೆಗಳು ಸಂಕಟಪಟ್ಟರೆ ರಾಜನು ಸುಖವಾಗಿರಲಾಗುವುದೇ? ಪ್ರಜೆಗಳು ಅರಸನ ಹೆತ್ತತಾಯಿಯಂತಲ್ಲವೇ! ಒಂದು ವೇಳೆ ಹೊಟ್ಟೆಯಲ್ಲಿ ಹುಟ್ಟಿದ

ಮಕ್ಕಳಾದರೂ ಹೆತ್ತವರನ್ನು ಕಾಪಾಡುವರೋ ಇಲ್ಲವೋ ಹೇಳಬರು ವಂತಿಲ್ಲ. ಪ್ರೇಮಾಸ್ಪದನಾದ ಭೂಪಾಲಕನನ್ನು ಮಾತ್ರ ಪ್ರಜೆಗಳು ಎಂತಹ ಎಡರಿನಲ್ಲಿಯೂ ಉದಾಸೀನಮಾಡಲಾರರು. ಎಷ್ಟೇ ವೀರ ನಾದರೂ ಧರ್ಮವಿಮುಖನಾದರೆ ಫಲವೇನು ? ಗೃಹಸ್ಥನಿಗೆ ಮಡದಿ, ಅಂತೆಯೇ ಅರಸನಿಗೆ ಪ್ರಜೆಗಳು. ಐಕಮತ್ಯವಿಲ್ಲದ ಪ್ರಜೆಗಳ ನಡುವೆ ಸಿಲುಕಿದ ಅರಸನಿಗೆ ಅನೇಕಮಂದಿ ಮಡದಿಯರನ್ನು ಮದುವೆಯಾದ ಗಂಡಸಿನ ಪಾಡೇ ಸರಿ. ಅದರಿಂದ ರಾಜನಾದವನು ಯಾವಾಗಲೂ ತನ್ನ ಪ್ರಜೆಗಳಲ್ಲಿ ಐಕಮತ್ಯವು ಕುಂದದಿರುವಂತೆಯೂ, ಪಕ್ಷಾಂತರ ವೈಷಮ್ಯ ಗಳುಂಟಾಗದಂತೆಯೂ ಜಾಗರೂಕತೆಯಿಂದ ನೋಡಿಕೊಳ್ಳಬೇಕು. ಅರ ಸನು ವಿವೇಕಿಯಾದರೆ ತಾಳ್ಮೆಯಿಂದ ನ್ಯಾಯಾನ್ಯಾಯಗಳನ್ನು ಪರಿ ಶೀಲಿಸುವನು. ಅರಸರು ಯಾವಾಗಲೂ ಚಾಡಿಗೆ ಕಿವಿಕೊಡಬಾರದು. ಹಿತವಾದರೂ ವಿಪ್ರಿಯವನ್ನು ಕೇಳಲೊಲ್ಲರು. ಯಾವಾಗಲೂ ಪ್ರಿಯಭಾಷಿಗಳನ್ನೇ ಗೌರವಿಸುವರು. ಮನಸ್ಸಿಗೆ ತಕ್ಕಂತೆ ನಡೆಯುವ ವರನ್ನು ಬಂಧುಗಳಿಗಿಂತಲೂ ಅತಿಶಯವಾಗಿ ಮನ್ನಿಸುವರು. ಇದಿರುಮಾತನಾಡದವನನ್ನು ವಿಧೇಯನೆನ್ನುವರು. ಮುಂದೆ ಬರುವ ವಿಪತ್ತನ್ನು ಸೂಚಿಸಿದವನು ಶತ್ರುನಾಗುವನು. ಧರ್ಮವನ್ನು ಅಲ್ಲಗಳೆದು ನಿಂತವನನ್ನು ಸಾಹಸಗಾರನೆನ್ನುವರು. ದೋಷಗಳನ್ನು ತಿಳಿಯಪಡಿಸಿ ದವನು ಚಾಡಿಗಾರನೆನಿಸುವನು. ರಾಜನ ಗುಪ್ತಾಲೋಚನೆಗಳಲ್ಲಿರುವ ದೋಷಗಳನ್ನೂ ಅಪಾಯಗಳನ್ನೂ ಹೊರಪಡಿಸಿದರೆ ದ್ರೋಹಿಯೂ ವಿಶ್ವಾಸಘಾತುಕನೂ ಆಗುವನು. ಧರ್ಮಕ್ಕೆ ಹೆದರುವವನು ಪುರುಕ ನೆನ್ನಿಸಿಕೊಳ್ಳುವನು. ಆಹಾ! ಈಗ ಈ ಅರಸನಲ್ಲಿಯಾದರೋ, ಈ ದೋಷಗಳೆಲ್ಲವೂ ತುಂಬಿರುವುವಲ್ಲವೇ! ಇಂತಿರಲು ಇವನ ಅಧಿಕಾರ ವಾದರೂ ಕೊನೆಗಾಣದಿರುವುದೇ ? " ಎಂದು ಮುಂತಾಗಿ ಯೋಚಿಸುತ್ತ, ತಾನು ಓದಿದ ಪತ್ರದ ವಿಷಯವನ್ನು ಬಾರಿಬಾರಿಗೂ ಸ್ಮರಿಸಿ ಬೇಸರ ಗೊಂಡು ಸೂರ್ಯಾಸ್ತಮಯವನ್ನು ಇದಿರುನೋಡುತ್ತಿದ್ದನು

ರಾತ್ರಿ ಸುಮಾರು ಹತ್ತು ಗಳಿಗೆಯ ಸಮಯ ಶೂದ್ರಕನಿದ್ದ ಬಾಗಿಲನ್ನು ಯಾರೋ ತೆರೆದಂತೆ ಸಪ್ಪಳವಾಯಿತು. ತನಗೆ ಪತ್ರವನ್ನು ಬರೆದಿದ್ದ ವ್ಯಕ್ತಿಯೇ ಬಂದಿರಬಹುದೆಂಬುದಾಗಿ ಊಹಿಸಿದನು. ಆದರೆ

ಯಾರೋ ಇಬ್ಬರು ಗಂಡಸರು ತನ್ನ ಬಳಿಗೆ ಬರುತ್ತಿರುವುದನ್ನು ಕಂಡನು. ಆ ಪುರುಷರಿಬ್ಬರೂ ತನಗೆ ಪರಿಚಿತರಲ್ಲದಿದ್ದರೂ ಮುಖಗಳು ಮಾತ್ರ ಪರಿಚಿತಗಳೆಂತಲೇ ತೋರುತ್ತಿದ್ದುವು ಶೂದ್ರಕನ ಅಂತರಂಗವು ಶಂಕೆ ಗೊಂಡಿತು. ಆದರೂ ವೀರಪುರುಷಸಹಜವಾದ ಧೈರ್ಯವನ್ನು ತಳೆದು, ವೈಯೆಲ್ಲಾ ಕಣ್ಣುಮಾಡಿ ನೋಡತೊಡಗಿದನು. ಅವರಿಬ್ಬರಲ್ಲಿ ಒಬ್ಬನು ಖಡ್ಗಧಾರಿಯಾಗಿ ಕಯ್ಯಲ್ಲಿ ಸಣ್ಣ ದೀವಿಗೆಯುನ್ನು ಹಿಡಿದಿದ್ದನು. ಮತ್ತೊಬ್ಬ ಪುರುಷನು ಸೌಂದರ್ಯನಿಧಿ; ಗಂಭೀರವಾಗಿ ನಡೆದು ಬರುತ್ತಿದ್ದನು. ಇಬ್ಬರೂ ಹತ್ತಿರ ಬಂದ ಕೂಡಲೇ ಇವರಾರೋ ತನ್ನನ್ನು ಬಿಡಿಸುವ ಸಲುವಾಗಿ ರಾಜಾಜ್ಞೆಯಿಲ್ಲದೆಯೇ ತನ್ನ ಮೇಲಣ ಅಭಿಮಾನದಿಂದಲೋ, ವಾತ್ಸಲ್ಯ ದಿಂದಲೋ ಬಂದವರೆಂಬುದಾಗಿ ಊಹಿಸಿದನು. ಆ ಸುಂದರ ವ್ಯಕ್ತಿಯು ಹತ್ತಿರ ಬಂದ ಕೂಡಲೇ ತನ್ನ ಸಂಗಡ ಬಂದಿದ್ದ ಖಡ್ಗಧಾರಿಯಾದ ಪುರಷನನ್ನು ಹೊರಗೆ ನಿಲ್ಲುವಂತೆ ಹೇಳಿ ಶೂದ್ರಕನೊಂದಿಗೆ ಮಾತನಾಡ ತೊಡಗಿದನು.

ಪುರುಷ—“ನಿನಗೇಕೆ ಈ ದುರವಸ್ಥೆ ?”

ಶೂದ್ರಕ—“ವಿಧಿವಿಲಾಸಕ್ಕೆ ಮರುಗಲೇಕೆ ?”

ಪು.—“ಇವೆಲ್ಲವೂ ನಿನ್ನ ಉದ್ಯೋಗಗಳ ಫಲಗಳಷ್ಟೆ! ಇದಕ್ಕಾಗಿ ದೈವವನ್ನೇಕೆ ಗುರಿಮಾಡುವೆ ? ದೈವವೆಂಬುದು ಒಂದುಂಟೇ ?”

ಶೂ.—“ಪುರುಷಪ್ರಯತ್ನವು ಎಂದಿಗೂ ಸಫಲವಾಗಲಾರದು. ದೈವ ವನ್ನು ಅಂಗೀಕರಿಸದಿದ್ದರೆ ನಾಸ್ತಿಕನಾಗುವೆನು.”

ಪು.—“ಸ್ತ್ರೀಪ್ರಯತ್ನವು ಎಂತಹುದೆಂದು ಹೇಳಬಲ್ಲೆಯಾ ?”

ಶೂ.—“ಪುರುಷಪ್ರಯತ್ನವೆಂದರೆ ಜನಸಾಮಾನ್ಯ ಪ್ರಯತ್ನವೆಂದು ಅರ್ಥ. ಆದರೆ ಈಗ ಪ್ರಶ್ನೆಮಾಡಿದ ಕಾರಣ ಹೇಳಬೇಕಾಯಿತು. ಸ್ತ್ರೀ ಪ್ರಯತ್ನವು ಅತಿ ಕುಟಿಲವಾದುದು. ಅದರ ಪರಿಪಾಕವು ವಿಷವು.”

ಪು.—“ಈ ಕಾರಾಗೃಹವಾಸವನ್ನು ಬಿಡಿಸಿಕೊಳ್ಳಬಾರದೇ ?”

ಶೂ.—“ಅದು ನನ್ನ ಅಧೀನದಲ್ಲಿಲ್ಲ.”

ಪು.—“ಒಂದು ವೇಳೆ ನಿನ್ನನ್ನು ಬಿಡಿಸಿದೆನಾದರೆ ಏನು ಮಾಡುವೆ ?”

ಶೂ.—"ದೇಶಾಂತರಕ್ಕೆ ಹೋಗಿ ನಿನ್ನ ಉಪಕಾರವನ್ನು ಸ್ಮರಿಸುತ್ತ ಕಾಲ ಕಳೆಯುವೆನು."

ಪು.—"ನನ್ನ ಉಪಕಾರಕ್ಕೆ ಪ್ರತ್ಯುಪಕಾರವಾವುದು ?"

ಶೂ.—"ಸ್ವಾಮೀ ! ತಮ್ಮಂತಹ ಮಹಾನುಭಾವರಿಗೆ ಪ್ರತ್ಯುಪಕಾರ ಮಾಡುವ ಶಕ್ತಿಯು ನನಗಿಲ್ಲ. ಪ್ರತ್ಯುಪಕಾರವನ್ನಾಗಲಿ, ಪ್ರತಿಸ್ನೇಹ ವನ್ನಾಗಲಿ ಸಾಮಾನ್ಯಮನುಷ್ಯರಿಂದ ಪ್ರತೀಕ್ಷಿಸಲಾಗುವುದೇ ? ಇಂತಾದರೆ ಮಹರ್ಷಿಗಳಿಗೂ, ಹಿಂದಣ ಚಕ್ರವರ್ತಿಗಳಿಗೂ ನಾವು ಮಾಡುವ ಪ್ರತ್ಯುಪ ಕಾರವಾವುದು ? ಅವರ ಹೆಸರುಗಳನ್ನೂ ದಿವ್ಯಚರಿತೆಗಳನ್ನೂ ಯಾವಾ ಗಲೋ ಒಮ್ಮೆ ಸ್ಮರಿಸಿ ಹೊಗಳುವುದಲ್ಲದೆ ನಾವೇನು ಮಾಡಬಲ್ಲೆವು ? ಇದೂ ಅಂತಹುದು ತಾನೇ ?"

ಪು.—"ಹಾಗೆ ಪ್ರತ್ಯುಪಕಾರವನ್ನು ನಿರೀಕ್ಷಿಸದವರು ಲೋಕೋ ತರರೇ ಸರಿ. ಒಂದು ವೇಳೆ ಪ್ರತ್ಯುಪಕಾರವನ್ನು ಅಪೇಕ್ಷಿಸಿದರೆ, ಅದನ್ನು ನೆರವೇರಿಸುವುದು ಕೃತಜ್ಞತೆಯ ಲಕ್ಷಣವಲ್ಲವೇ ?"

ಶೂ.—"ಧರ್ಮವಿರುದ್ಧವಲ್ಲದ ಯಾವ ಕಾರ್ಯವನ್ನಾದರೂ ಮಾಡಲು ಸಿದ್ಧನಾಗಿಯೇ ಇರುವೆನು ಆದರೆ ತಾವು ಯಾರೆಂಬುದನ್ನು ನಾನು ತಿಳಿಯ ಬಹುದೋ ?"

ಪು.—"ರಾಜನ ಅಪ್ಪಣೆಯನ್ನು ಪಡೆ. . . ಅಲ್ಲ ಅಲ್ಲ ರಾಜಾಜ್ಞೆಯ ಗುರುತುಳ್ಳ ಮುದ್ರಿಕೆಯನ್ನು ತಳೆದು ನಿನ್ನನ್ನು ಬಿಡಿಸಲು ಬಂದಿರುವೆನು"

ಶೂ.—"ನನ್ನ ಬಿಡುಗಡೆಯಿಂದ ತಮಗೆ ಲಾಭವಾದರೂ ಯಾವುದು?"

ಪು.—"ಮಹಾನುಭಾವರ ಸಾಂಗತ್ಯಕ್ಕಿಂತಲೂ ಹೆಚ್ಚಿದ ಲಾಭ ವಿರುವುದೇ ?"

ಶೂದ್ರಕನು "ದೇವೀ ! ಇದು ಧರ್ಮವಿರುದ್ಧವು" ಎನ್ನುತ್ತಿರುವಷ್ಟ ರಲ್ಲಿಯೇ ಆ ಪುರುಷವೇಷಧಾರಿಯು ದೂರದಲ್ಲಿ ನಿಂತಿದ್ದ ಖಡ್ಗಪಾಣಿಯಾದ ತನ್ನ ಅನುಚರನನ್ನು ಕರೆದು ಶೂದ್ರಕನ ಸಂಕೋಲೆಗಳನ್ನು ಬಿಡಿಸುವಂತೆ ಗಂಭೀರಧ್ವನಿಯಿಂದ ಆಜ್ಞಾಪಿಸಲು, ಅವನು ಬೇಗನೆ ಬಂದು ಶೂದ್ರಕನ ಕೈಕೋಳಗಳನ್ನು ಕತ್ತರಿಸಿ ತೆಗೆದು, ಹಿಂದಿನಂತೆಯೇ ದೂರವಾಗಿ ಸರಿದು ನಿಂತನು.

ಶೂದ್ರಕನು "ಜನನೀ! ಈ ಬಿಡುಗಡೆಯು ಅಪ್ರಾರ್ಥಿತವಾಗಿದ್ದರೂ ನಾನು ನಿನ್ನಲ್ಲಿ ಋಣಿಯಾಗಿರುವೆನು" ಎನಲು, "ಮಹಾನುಭಾವರ ಮಾತು ಎಂದಿಗೂ ವ್ಯತ್ಯಸ್ತವಾಗಲಾರದು. ಶೂದ್ರಕಾ! ನೀನು ಈಗ ಕೃತಜ್ಞನೇ ಅಷ್ಟೇ?" ಎಂಬುದಾಗಿ ಪುರುಷನು ಕೇಳಿದನು.

ಆ ಪ್ರಶ್ನೆಗೆ ಶೂದ್ರಕನು, "ದೇವೀ! ಕೊರಗುತ್ತಿರುವ ನನ್ನ ಚಿತ್ತವನ್ನು ಕೊರಗಿಸಬಾರದು ಧರ್ಮವಿರುದ್ಧವಲ್ಲದ ಯಾವ ಕಾರ್ಯವನ್ನಾದರೂ ನೆರವೇರಿಸಲು ಸಿದ್ಧನಾಗಿರುವೆನೆಂದು ಮೊದಲೇ ಬಿನ್ನಯಿಸಿರುವೆನಷ್ಟೆ! ಧರ್ಮಾತ್ಮನಾದ ಯಾವನೇ ಆದರೂ ಕಷ್ಟಕಾಲದಲ್ಲಿ ನನ್ನ ಸಹಾಯುವನ್ನು ಬಯಸಿದಲ್ಲಿ ಪ್ರಾಣಗಳನ್ನಾದರೂ ಒತ್ತೆಯಿಟ್ಟು ಅಂತಹವನನ್ನು ಉದ್ಧರಿಸಲು ಸಿದ್ಧನಾಗಿಯೇ ಇರುವೆನು ಈಗ ನಿಮ್ಮ ರಾಜ್ಯದ ಸ್ಥಿತಿಯು ಹೇಗಿರುವುದೆಂಬುದನ್ನು ಬಲ್ಲೆಯಾ? ಪಾಪ! ಅಂತಃಪುರವಾಸಿನಿಯಾದ ನಿನಗಾದರೂ ತಿಳಿಯುವ ಬಗೆ ಹೇಗೆ? 'ರಾಜ್ಯಾಂತೇ ನರಕಂ ಧ್ರುವಂ' ಎಂಬ ಅಭಿಯುಕ್ತೋಕ್ತಿಯು ಎಂದಿಗೂ ಸುಳ್ಳೆನಿಸಲಾರದು ನಿಮ್ಮ ಈಗಣ ಭೋಗಭಾಗ್ಯಗಳೆಲ್ಲವೂ ಶಾಶ್ವತಗಳಲ್ಲ ನಿಮ್ಮ ಉದ್ಯಾನವಿಹಾರಾದಿಗಳು ಮಿಂಚಿನ ಬಳ್ಳಿಯಂತಹವು ವಿಲಾಸಿನಿಯರು ಸಂಧ್ಯಾರಾಗದಂತೆ ಕ್ಷಣರಾಗಿಣಿಯರು. ನಿಮ್ಮ ಜೀವಿತವನ್ನು ಪ್ರಜೆಗಳ ಶ್ರೇಯೋಭಿವೃದ್ಧಿಯಲ್ಲಿ ವಿನಿಯೋಗಗೊಳಿಸಿ ಆಚಂದ್ರಾರ್ಕಸ್ಥಾಯಿಯಾದ ಕೀರ್ತಿಯನ್ನು ಪಡೆಯಬಾರದೇ?" ಎಂದನು

ಆ ಪುರುಷಾಕೃತಿಯು "ಈ ಸಮುಸ್ತ ಪ್ರಪಂಚವು ಯಾವಜ್ಜೀವವೂ ನಿನ್ನ ಶುಶ್ರೂಷೆಮಾಡಿದರೂ ನಿನ್ನ ಬುದ್ಧಿಸಾಹಸಗಳನ್ನು ತಿಳಿಯಲು ಸಾಧ್ಯವಲ್ಲ. ಧರ್ಮದಲ್ಲಿ ಅತ್ಯುತ್ಕಟವಾದ ದೀಕ್ಷೆಯುಳ್ಳವನೆಂಬ ಭಾವದಿಂದಲೇ ನಾನು ನಿನ್ನ ಸಾನ್ನಿಧ್ಯವನ್ನು ಪಡೆಯಲು ಇಷ್ಟು ಉತ್ಕಂಠಿತೆಯಾಗಿರುವೆನು. ಶೂದ್ರಕಾ! ನೀನು ನನ್ನ ಅಂತರಂಗ ಸ್ಥಿತಿಯನ್ನು ತಿಳಿದಿರಲಾರೆ...... ಸಾವಿರಮಾತುಗಳಿಂದ ಫಲವೇನು? ಚಿಕ್ಕತನದಲ್ಲಿಯೇ ನಾನು ನಿನ್ನನ್ನೇ ಮದುವೆಯಾಗಬೇಕೆಂಬುದಾಗಿ ಮಾಡಿದ್ದ ಶಪಥವನ್ನು ನೀನು ಮರೆತಿರಲಾರೆ ಆದರೆ ರಾಜ್ಯಲೋಭಪೀಡಿತರಾದ ನನ್ನ ಜನನೀಜನಕರು ನನ್ನನ್ನು ಈ ದುರ್ವಿದಗ್ಧಶಿಖಾಮಣಿಯ ಕೊರಳಿಗೆ ಕಟ್ಟಿಬಿಟ್ಟರು. ದೈವಯೋಗದಿಂದ ಕುಟಿಲವಾದ ರಾಜನೀತಿಪ್ರಯೋಗದಿಂದ ರೂಪರೇಖಾದಿಗಳು

ಮಾರ್ಪಟ್ಟಿದ್ದರೂ, ನನ್ನ ಅಂತರಂಗವು ಮಾತ್ರ ಬೇರೆಯಾಗಲಿಲ್ಲವಷ್ಟೆ! ಸ್ಫಟಿಕ ಮಣಿಯು ಶುಭ್ರವಾದುದು ದಿಟ; ಆದರೆ ವರ್ಣಾಂತರ ಸಾನ್ನಿಧ್ಯದಿಂದ ವಿಕಾರವನ್ನು ಪಡೆದಂತೆ ಕಾಣುವುದು. ನನ್ನ ಮನಸ್ಸು ಅದಕ್ಕಿಂತಲೂ ಸ್ವಚ್ಛ ವಾದುದೆಂಬುದನ್ನು ಮರೆಯಬೇಡ" ಎಂದು ಮುಂತಾಗಿ ಹೇಳುತ್ತಿದ್ದಿತು.

ಅಷ್ಟರಲ್ಲಿ ಶೂದ್ರಕನು "ದೇವೀ! ನಿನ್ನ ಇಂದ್ರಜಾಲಪಾಶದಿಂದ ಬಿಗಿದು ನನ್ನನ್ನು ಎಲ್ಲಿಗೆ ಕರೆದುಯ್ಯಲೆಳೆಸಿರುವೆ? ನಿನ್ನ ಪೂರ್ವಪರಿಚಯ ವಾದರೂ ನನಗೆ ಹೇಗೆ ಮರೆತುಹೋಯಿತೋ ನಾನು ಹೇಳಲಾರೆನು. ಈಗ ಎಷ್ಟು ಬಗೆಯಿಂದ ಜ್ಞಾಪಿಸಿಕೊಂಡರೂ ಅದು ಸ್ಮೃತಿಪಥವನ್ನು ಏರದಿರುವುದು. ಒಂದು ವೇಳೆ ನಿನಗೆ ಪೂರ್ವಜನ್ಮಸ್ಮರಣೆಯೇನಾದರೂ ಇರುವುದೇ? ಹಾಗಿದ್ದರೆ ದಯೆಮಾಡಿ ತಿಳುಹು ನನ್ನ ಪೂರ್ವಜನ್ಮ ವೃತ್ತಾಂತವನ್ನು ನಾನೇ ಅರಿಯುವುದು ಸಾಧ್ಯವಲ್ಲವಷ್ಟೆ?" ಎಂಬುದಾಗಿ ಉತ್ತರಕೊಟ್ಟನು.

ಅದಕ್ಕೆ ಆ ಪುರುಷವ್ಯಕ್ತಿಯು "ಆಹಾ! ಇದೇನು? ಹೀಗೇಕೆ ಮಾತನಾಡುತ್ತಿರುವೆ? ಮನಃಪೂರ್ವಕವಾಗಿಯೇ ನನ್ನನ್ನು ಮೋಸಗೊಳಿಸ ಬೇಕೆಂದಿರುವೆಯಾ? ಇಲ್ಲವಾದರೆ ದೈವದಿಂದ ವಂಚಿತನಾಗಿರುವೆಯೋ? ಇತ್ತ ನೋಡು. ದುಷ್ಯಂತನಿಗೆ ಅಂಗುಳೀಯಲಾಭದಂತೆ ಒಂದು ಪ್ರತ್ಯಭಿ ಜ್ಞಾನವು ನನ್ನಲ್ಲಿಯೂ ಇರುವುದು" ಎನ್ನುತ್ತ ಪುರುಷವೇಷವನ್ನು ತೆಗೆ ದೊಗೆದು, ಹೆಗಲಿನ ಮೇಲಿರುವ ಯಾವುದೋ ಒಂದು ಗುರುತನ್ನು ತೋರು ವಷ್ಟರಲ್ಲಿ, ಕಾರಾಗೃಹದ ಹೆಬ್ಬಾಗಿಲಲ್ಲಿ "ಹಾ! ದೈವವೇ!" ಎಂಬ ಆರ್ತನಾದವು ಕೇಳಿಸಿತು. ಶೂದ್ರಕನು ಧೀರನೂ ಗಂಭೀರನೂ ಎನಿಸಿ ದ್ದರೂ ನಿಮಿಷ ಮಾತ್ರ ಭ್ರಾಂತನಾಗದಿರಲಿಲ್ಲ. ರಾಣಿಯು ಪೌರುಷವನ್ನು ನಟಿಸುವ ಪುರುಷಾಕೃತಿಯುವಳಾಗಿದ್ದರೂ ಅಬಲೆಗಿಂತಲೂ ಅಬಲೆಯಾ ದಳು. ಶೂದ್ರಕನು ಒಡನೆಯೇ ಓಡಿಬಂದು ಹೊರಗೆ ನಿಂತಿದ್ದ ಭಟನ ಕಯ್ಯೊಳಗಿನ ದೀಪವನ್ನು ಕಸುಕೊಂಡು, ಹೆಬ್ಬಾಗಿಲ ಬಳಿಬಂದು ನೋಡು ವಲ್ಲಿ, ಮತ್ತೊಂದು ದಿವ್ಯಸುಂದರಾಕೃತಿಯ ಪುರುಷವ್ಯಕ್ತಿಯು ಕಾಣಿಸಿತು. "ಇದೇನು ಕನಸೋ? ಮಾಯೆಯೋ? ಇಂದ್ರಜಾಲವೋ? ಇವೆರಡರಲ್ಲಿ ಯಾವುದು ದಿಟ? ಯಾವುದು ಸುಳ್ಳು? ನನ್ನ ಮನಸ್ಸಿಗೆ ಎಲ್ಲವೂ

ಹೇಗೋ ಕಾಣಬರುತ್ತಿರುವುವಲ್ಲಾ!" ಎಂಬುದಾಗಿ ಭಾವಿಸುತ್ತ ಆ ವ್ಯಕ್ತಿಯನ್ನು ಮೇಲಕ್ಕೆ ಎತ್ತಿ ಕುಳ್ಳಿರಿಸಿ, ತನ್ನ ವಸ್ತ್ರಾಂಚಲದಿಂದ ಬೀಸುತ್ತಿರುವಷ್ಟರಲ್ಲಿ ಅನಂಗಲೇಖೆಯೂ, ಭಟವೇಷದಿಂದಿದ್ದ ಅವಳ ಸಖಿಯಾದ ಮಧುಸೇನೆಯೂ ಅಲ್ಲಿಗೆ ಬಂದು ನೇರಿದರು.

ಆ ನವೀನ ಪುರುಷಾಕೃತಿಯು ಸ್ವಲ್ಪ ಹೊತ್ತಿನ ಮೇಲೆ ಚೇತರಿಸಿಕೊಂಡು, ಕಂಬನಿದುಂಬಿದ ಕಣ್ಣುಗಳಿಂದ ಶೂದ್ರಕನನ್ನು ನೋಡಿ ಮರಳಿ ಮೂರ್ಛಿತೆಯಾಯಿತು. ಎರಡು ನದಿಗಳ ಸಂಗಮಸ್ಥಾನದಲ್ಲಿ ನಡುವೆ ಸಿಲುಕಿದವನಂತೆ ಶೂದ್ರಕನು ಭ್ರಾಂತನಾದನು. ಬಳಿಕ ಆ ನೂತನ ವ್ಯಕ್ತಿಯು ಮೂರ್ಛೆ ತಿಳಿದು ಕುಳಿತುಕೊಂಡಿತು ಅವರಿಬ್ಬರಿಗೂ ಈ ರೀತಿಯಾದ ಪ್ರಶ್ನೋತ್ತರಗಳು ನಡೆದುವು:—

ಪ್ರಶ್ನೆ—"ಕಲ್ಯಾಣಿ! ಏನಿದು?"

ಉತ್ತರ—"ಮುಗ್ಧೆಯ ವಿಶ್ವಾಸದ ಫಲ."

ಪ್ರಶ್ನೆ—"ನಿನ್ನ ವಿಶ್ವಾಸಕ್ಕೆ ಉಂಟಾದ ಕೊರತೆ ಯಾವುದು?"

ಉತ್ತರ—"ಅಂಗಯ್ಯ ಹುಣ್ಣಿಗೆ ಕನ್ನಡಿಯೇಕೆ? ಕಳವಾದ ವಸ್ತುವಿನೊಂದಿಗೆ ಹಿಡಿಯಲ್ಪಟ್ಟವನು ಅಪಲಾಪಿಸಿ ಫಲವೇನು?"

ಪ್ರಶ್ನೆ—"ವಿನಯವತೀ! ನೀನು ಸ್ತ್ರೀತ್ವವನ್ನು ಪ್ರಕಾಶಪಡಿಸಿದೆ. ದಿಟವನ್ನು ತಿಳಿದೆಯಾದರೆ ಪಶ್ಚಾತ್ತಾಪಕ್ಕೆ ಗುರಿಯಾಗದಿರಲಾರೆ."

ಆ ಮೇಲೆ ಅನಂಗಲೇಖೆಯು ನಾದಿನಿಯನ್ನು ಕುರಿತು "ಈ ಸರುಹೊತ್ತಿನಲ್ಲಿ ನೀನೇಕೆ ಇಲ್ಲಿಗೆ ಬಂದೆ?" ಎಂದಳು.

ವಿನಯವತಿಯು "ಆ ಪ್ರಶ್ನೆಗೆ ಸಮಾಧಾನವನ್ನು ನೀನೇ ಬಲ್ಲೆ" ಎಂದಳು

ನಾನು ಧರ್ಮಮೂರ್ತಿಯನ್ನು ಬಿಡಿಸಲು ಬಂದೆನೆಂಬುದಾಗಿ ರಾಣಿಯು ಹೇಳಲು, ವಿನಯವತಿಯು "ಅಲ್ಲ, ಹಾಗೆಂದಿಗೂ ಇರಲಾರದು. ಹಾಗಿದ್ದರೆ ಈ ಪುರುಷವೇಷದ ಆವಶ್ಯಕತೆಯಿರುತ್ತಿರಲಿಲ್ಲ" ಎಂದಳು

ಆ ಮಾತಿಗೆ ಅನಂಗಲೇಖೆಯು "ನನ್ನ ವೇಷವು ಹಾಗಿರಲಿ. ನಿನ್ನ ವೇಷವನ್ನಾದರೂ ನೋಡಿದರೆ ತಿಳಿಯುವುದಲ್ಲವೇ?" ಎಂದಳು.

ಆಗ ಶೂದ್ರಕನು ವಿನಯುವತಿಯುನ್ನು ಕುರಿತು "ಈ ನಡು ರಾತ್ರಿಯಲ್ಲಿ ಅಂತಃಪುರದ ಕಾವಲುಗಾರರನ್ನು ವಂಚಿಸಿ ಇಲ್ಲಿಗೆ ಹೇಗೆ ಬಂದೆ? ಈ ಸೆರೆ ಮನೆಯ ಪ್ರಹರಿಗಳಾದರೂ ನಿನ್ನನ್ನು ಹೆಬ್ಬಾಗಿಲ ವರೆಗೆ ಹೇಗೆ ಬಿಟ್ಟರು?" ಎಂಬುದಾಗಿ ಪ್ರಶ್ನೆಮಾಡಿದನು.

ವಿನಯುವತಿಯು "ನಾಥಾ! ಅಲ್ಲ ಅಲ್ಲ! ಭೂಸುರೋತ್ತಮಾ! ನಿನ್ನ ಗುಣಗಳು ನನ್ನನ್ನು ಇಲ್ಲಿಗೆ ಸೆಳೆತಂದುವು. ನಿನಗೆ ಮರಣದಂಡನೆಯು ವಿಧಿತವಾಗಿರುವುದೆಂತಲೂ, ನಾಳೆ ಬೆಳಗಾಗುತ್ತಲೇ ಅದನ್ನು ನೆರವೇರಿಸು ವರೆಂತಲೂ ಕಿವಿಯಿಂದ ಕಿವಿಗೆ ಬಿದ್ದ ಸಮಾಚಾರವನ್ನು ಕೇಳಿ, ನನ್ನ ಪರಲೋಕ ಯಾತ್ರೆಗೆ ನಿನ್ನ ದರ್ಶನವನ್ನೇ ಆಧಾರವಾಗಿಟ್ಟುಕೊಂಡು 'ನಾನು ಬಂದಿಯು ಅನುಜನು ನನ್ನ ಅಣ್ಣನನ್ನು ಒಂದು ಕ್ಷಣಕಾಲ ವಾದರೂ ಕಲೆತು ಮಾತನಾಡುವಂತೆ ಅನುಗ್ರಹಿಸಬೇಕು' ಎಂಬುದಾಗಿ ಪ್ರಹರಿಗಳ ಕಾಲಿಗೆ ಬಿದ್ದು, ಅಂಗಲಾಚಿ, ಕೇಳಿಕೊಂಡೆನು" ಎಂದು ಹೇಳಿದಳು.

ಶೂದ್ರಕನು "ಪ್ರಿಯೇ! ಮರುಳಾಗಬೇಡ ನಿನ್ನ ಈಗಣ ಅನು ರಾಗಕ್ಕೆ ಸಾವಿರ ಪಾಲು ಹೆಚ್ಚಾದ ಅನುರಾಗ ಸೌಖ್ಯವನ್ನು ಅನುಭವಿಸುವೆ ಯಂತೆ ಮನಸ್ಸನ್ನು ಬಿಗಿಹಿಡಿ ಪ್ರಾಕೃತಸ್ತ್ರೀಯರಂತೆ ದುರ್ಮರಣಕ್ಕೆ ಗುರಿ ಯಾಗ ಬೇಡ. ದೇವರು ಕಣ್ದೆರೆದು ನೋಡದಿರನು" ಎನ್ನುತ್ತಿರುವಷ್ಟರಲ್ಲಿ ನಾಲ್ಕು ಗಂಟೆಗಳು ಹೊಡೆದುವು.

ಅನಂಗಲೇಖೆಯು "ಶೂದ್ರಕಾ! ಹೊತ್ತು ಮೂಡುತ್ತ ಬಂದಿತು. ಇನ್ನು ಸಾವಕಾಶ ಮಾಡುವುದು ತರವಲ್ಲ. ಇಗೋ! ನನ್ನ ಹೃದಯ ದಂತಿರುವ ಈ ಪುರುಷವೇಷವನ್ನು ಧರಿಸಿ ಬೇಗನೆ ಹೊರಡು ನನ್ನ ಶ್ವೇತಾಶ್ವವು ನಿನಗಾಗಿ ಸಿದ್ಧವಾಗಿರುವುದು. ಯಾರಾದರೂ ನಿನ್ನನ್ನು ತಡೆದರೆ ಈ ಲೇಖಗಳಲ್ಲಿ ಒಂದನ್ನು ತೋರಿ ಬೇಗನೆ ಪಾರಾಗು ಮತ್ತೊಮ್ಮೆ ಸಂದರ್ಶಿಸಿದಾಗ ಎಲ್ಲವೂ ವ್ಯಕ್ತವಾಗುವುದು" ಎಂದು ಹೇಳಿ, ತನ್ನ ಉಡು ಪನ್ನಿತ್ತು ಅವನನ್ನು ಕಳುಹಿಸಿ, ವಿನಯುವತಿಯುನ್ನು ಕುರಿತು, "ನನ್ನ ಮುದ್ದು ತಂಗೀ! ನೀನಿಂತು ವಿದ್ಯಾಗಂಧ ಶೂನ್ಯರಾದ ಪಾಮರ ಸ್ತ್ರೀಯ ರಂತೆ ಮಿತಿಮೀರಿದ ಅನುರಾಗಕ್ಕೆ ಮನಸ್ಸಿನಲ್ಲಿ ಎಡೆಗೊಡಬಾರದು.

'ಅತಿಸರ್ವತ್ರವರ್ಜಯೇತ್' ಎಂಬ ಆರ್ಯೋಕ್ತಿಯನ್ನು ಯಾವಾಗಲೂ ನೆನಪಿನಲ್ಲಿಡು! ಮುಂದೆ ಸುಖಪಡುವೆ. ನಡೆ. ಬೇಗನೆ ಮನೆಯನ್ನು ಸೇರೋಣ" ಎಂದು ಹೇಳಿ ಅವಳನ್ನು ಮುಂದೆ ಕಳುಹಿಸಲಾಗಿ, ವಿನಯವತಿಯು ಕಾವಲುಗಾರರಿಗೆ ತನ್ನ ಕೃತಜ್ಞತೆಯನ್ನು ಹೊರಪಡಿಸಿ, ಬೇಗನೆ ನಡೆತಂದು ತನಗಾಗಿ ಕಾದಿದ್ದ ತನ್ನ ಸಖಿಯಾದ ಮಾಧವಿಯೊಡನೆ ಅಂತಃಪುರವನ್ನು ಹೊಕ್ಕು, ವೇಷವನ್ನು ತೆಗೆದುಹಾಕಿ, ಅದೇ ಯೋಚನೆಯಲ್ಲಿಯೇ ಮಲಗಿಕೊಂಡಳು. ಇತ್ತ ಅನಂಗಲೇಖೆಯು ಮಧುಸೇನೆಯೊಂದಿಗೆ ತನ್ನ ಅಂತಃಪುರವನ್ನು ಸೇರಿದಳು

ಅತ್ತ ಶೂದ್ರಕನು ಭಗವದ್ವಿಲಾಸಕ್ಕೆ ಅಚ್ಚರಿಗೊಂಡು ಉಜ್ಜಯಿನಿಯನ್ನು ಬಿಡುವುದಕ್ಕೆ ಮನಸ್ಸಿಲ್ಲವಾದರೂ ವಿಧಿಯಿಲ್ಲದೆ ಅಲ್ಲಿಂದ ಹೊರಟು, ಆ ದಿವ್ಯಾಶ್ವವನ್ನೇರಿ ದೇಶಾಂತರವನ್ನು ಸೇರಿದನು ಮರು ದಿನ ಬೆಳಗಾಗುತ್ತಲೇ ಆ ಪಟ್ಟಣದಲ್ಲಿ ಎಲ್ಲಿ ಯಾರ ಬಾಯಲ್ಲಿ ನೋಡಿದರೂ ಶೂದ್ರಕನ ಪ್ರಜ್ಞಾಸಾಹಸಗಳೇ ಹೊರಹೊಮ್ಮುತ್ತಿದ್ದುವು. ರಾಜನೂ, ಚಕೋರನೂ, ಚಂಡಸಿಂಹನೂ ಬೆಚ್ಚುಬಿದ್ದರು. ಕಾವಲುಗಾರರನ್ನು ಕರೆಯಿಸಿ ವಿಚಾರಿಸುವಲ್ಲಿ "ಪ್ರಭು! ಆ ಹಾರುವಯ್ಯನು ಯಾವ ಮಾಯೆಯಿಂದ ಪಾರಾದನೋ ತಿಳಿಯಲು ನಾವು ಶಕ್ತರಲ್ಲ" ಎಂದರು. ಚಕೋರನು ಮಾತ್ರ ಇದನ್ನು ನಂಬದೆ "ಪಟ್ಟಣಿಗರು ಯಾರೋ ಒತ್ತಾಸೆಮಾಡಿರಬೇಕು, ಇದನ್ನು ಹೇಗಾದರೂ ಕಂಡುಹಿಡಿಯದಿದ್ದರೆ ನಾನು ಮಂತ್ರಿಯಾಗಿದ್ದು ಫಲವೇನು?" ಎನ್ನುತ್ತ ಶೂದ್ರಕನ ಮಿತ್ರರ ಮನೆಗಳಲ್ಲಿ ಶೋಧಮಾಡಿಸಿದನು ಊರಲ್ಲಿ ಶೂದ್ರಕನ ಪರವಾಗಿ ಏನು ಮಾತನಾಡುವರೋ ತಿಳಿಯಲು ಚಾರರನ್ನು ನೇಮಿಸಿದನು ಆದರೆ ಪ್ರಯತ್ನಗಳಾವುವೂ ಫಲಕಾರಿಗಳಾಗಲಿಲ್ಲ. "ವಿಶಾಲಗಹನವಾದ ಭೂಮಂಡಲದಲ್ಲಿ ಗಾಳಿಯಂತೆ ಹಾರಿಹೋದನೋ! ಆಕಾಶದಂತೆ ಅನಂತವ್ಯಾಪಕನಾದನೋ! ಭೂಮಿಯಂತೆ ಸರ್ವಂಸಹನೆನಿಸಿ, ಅಗ್ನಿಯಂತೆ ಪ್ರತಾಪಯುಕ್ತನಾಗಿ, ರಸದಂತೆ ಕೈಗೆ ಸಿಲುಕದೆ, ಪರಮಾತ್ಮನಂತೆ ಅತ್ಯದ್ಭುತಶಕ್ತಿಗಳಿಂದ ಮಾತ್ರವೇ ತನ್ನ ನೆಲೆಯನ್ನು ತಿಳಿಸುತ್ತಿರುವ ಇವನನ್ನು ಹುಡುಕಿ, ಕಂಡು ಹಿಡಿಯುವ ಬಗೆ ಯಾವುದು? ಹೇಗಾದರೂ ಇವನನ್ನು ಕಂಡು ಹಿಡಿಯಲೇ ಬೇಕು"

ಎನ್ನುತ್ತ ಕೆಲವು ಮಂದಿ ಗೂಢಚಾರರನ್ನು ದೇಶದೇಶಗಳಿಗೆ ಕಳುಹಿದನು. ಇದರಿಂದ ಯಾವ ಪ್ರಯೋಜನವೂ ದೊರೆಯಲಿಲ್ಲ.

ಕೆಲವು ದಿನಗಳು ಕಳೆದ ಬಳಿಕ ಒಂದು ದಿನ ಸಂಘಿಲಕನು ಚಕೋರನ ಮನೆಗೆ ಬಂದನು. ಇಬ್ಬರೂ ಏಕಾಂತವಾಗಿ ಮಾತನಾಡುವ ಸಂದರ್ಭದಲ್ಲಿ ಶೂದ್ರಕನ ಸಾಹಸವರ್ಣನೆಗೆ ಮೊದಲಾಯಿತು. ಬಳಿಕ ಚಕೋರನು “ಸಂಘಿಲಕಾ! ಹೇಗಾದರೂ ಆ ಬ್ರಾಹ್ಮಣನನ್ನು ಕಂಡು ಹಿಡಿಯಬೇಕಾದರೆ, ನಿನ್ನ ಹೊರತು ಮತ್ತಾರೂ ಶಕ್ತರಲ್ಲ. ಅವನನ್ನು ಹಿಡಿದುತಂದರೆ, ಅನೇಕ ಕಾರ್ಯಗಳು ಸುಲಭವಾಗಿ ಕೈಗೂಡುವುವು” ಎಂದನು. “ಆಗಲಿ, ನಾನೂ ನನ್ನ ಸಾಮರ್ಥ್ಯವನ್ನು ವೆಚ್ಚಮಾಡಿ ನೋಡುವೆನು. ಈಗ ಅಪ್ಪಣೆಯಾದರೆ ಹೊರಡುವೆನು” ಎಂದು ಸಂಘಿಲಕನ ಬಾಯಿಂದ ಉತ್ತರ ಬರುವಷ್ಟರಲ್ಲಿ ಶಕಾರನು ಅಲ್ಲಿಗೆ ಬಂದನು. “ಎಲೋ! ಬೌದ್ಧಾ! ಕಳ್ಳನು ಸಿಕ್ಕಿದನೇ?” ಎಂಬುದಾಗಿ ಪ್ರಶ್ನೆಮಾಡಲು, ಸಂಘಿಲಕನು “ನಾನು ಅದೇ ಕಾರ್ಯದಲ್ಲಿ ನಿರತನಾಗಿರುವೆನು. ನಿಮ್ಮ ರಾಜ್ಯದಲ್ಲಿಯೂ ಅವನನ್ನು ಹಿಡಿಯ ಬಲ್ಲ ಸಾಹಸಗಾರರಿಲ್ಲವೆಂದರೆ ನಿಮಗೆ ಅಪಮಾನವಲ್ಲವೇ?” ಎಂದನು.

ಆ ಮಾತಿಗೆ ಶಕಾರನು “ಅವನನ್ನು ಹುಡುಕಿ ತಂದರೆ ಕೊಳ್ಳಿಯಿಂದ ತಲೆಯನ್ನು ಕೆದರಿಕೊಂಡಂತೆಯೇ ಸರಿ. ಅವನ ಹೆಸರನ್ನು ಕೇಳಿದ ಕೂಡಲೇ ಪ್ರಜೆಗಳೆಲ್ಲರೂ ಉಬ್ಬಿ ಹೋಗುತ್ತಾರೆ. ಅವನನ್ನು ಕೊಂದ ಹೊರತು ನಮಗೆ ರಾಜ್ಯಲಕ್ಷ್ಮಿಯು ದಕ್ಕುವಂತಿಲ್ಲ. ಅವನು ದೇಶಾಂತರದಲ್ಲಿರುವುದೇ ಮೇಲು. ಅವನೇನು ಈಗಲಾದರೂ ಸುಮ್ಮನಿರುವನೆಂದು ತಿಳಿದಿರುವೆಯಾ? ಅವನು ಎಲ್ಲ ದೇಶಗಳನ್ನು ಸುತ್ತುತ್ತ, ಒಂದೊಂದು ದೇಶದಲ್ಲಿಯೂ ಅರಸರಿಗೂ ಪ್ರಜೆಗಳಿಗೂ ಮನಸ್ತಾಪವನ್ನುಂಟುಮಾಡುತ್ತಿರುವನು. ಹೀಗಾದುದರಿಂದ ಅವನಿಲ್ಲದಿರುವುದೇ ನಮಗೆ ಕ್ಷೇಮವಲ್ಲವೇ?” ಎಂದನು.

ಆಗ ಸಂಘಿಲಕನು “ಈ ದಿನ ನಾನು ಹೊಸ ಸುದ್ದಿಯನ್ನು ಕೇಳಿದೆನು. ಅದರಲ್ಲಿ ಸ್ತ್ರೀಯರ ಗಂಧವು ವಿಶೇಷವಾಗಿರುವಂತಿದೆ. ರಾಜಧರ್ಮವು ವೀರಪುರುಷರಿಗೆ ಮಾತ್ರವೇ ಯೋಗ್ಯವಲ್ಲದೆ ಕೇವಲ ಬುದ್ಧಿಶಕ್ತಿ

ಸಂಪನ್ನರಾದ ಚಕೋರರಮಂತ್ರಿ ಮುಂತಾದವರಿಗೆ ತರವಲ್ಲ. ಶತ್ರು ಕಂಟಕವನ್ನು ಸುಟ್ಟು, ಬೂದಿಮಾಡಿ ನೀರಿನಲ್ಲಿಯೊ ಹೆಂಡದಲ್ಲಿಯೊ ಕಲಸಿ, ನಾವೇ ಕುಡಿದು ಜೀರ್ಣಮಾಡಿಕೊಳ್ಳಬೇಕು. ಆಗಲೂ 'ಶತ್ರೋ! ಜೀರ್ಣೋಭವ' ಎನ್ನದಿದ್ದರೆ ರೋಮಕೂಪಗಳಿಂದಲೋ ಕಣ್ಣುಮೂಗುಕಿವಿಗಳಿಂದಲೋ ಹೊರಬೀಳದಿರಲಾರನು. ಅಂತು ಹೊರಬಿದ್ದ ಕೂಡಲೇ ಧೂಮಾಕೃತಿಯನ್ನು ತಳೆದು ಮೆಲ್ಲನೆ ಜಗವನ್ನೆಲ್ಲ ವ್ಯಾಪಿಸಿ, ಭುಗ್ಗನೆ ಉರಿಯತೊಡಗುವನು" ಎಂಬುದಾಗಿ ಬಣ್ಣಿಸಿದನು.

ಆ ಮಾತಿಗೆ ಶಕಾರನು "ಎಲೋ! ಸ್ತ್ರೀಯರ ಗಂಧವು ಬೀಸುತ್ತಿದೆ ಎಂಬುದಾಗಿ ಹೇಳಿದೆಯಲ್ಲಾ! ನನಗೂ ಅಂತೆಯೇ ತೋರುತ್ತಿದೆ. ನನ್ನ ಅಭಿಪ್ರಾಯವನ್ನೇ ನನ್ನ ಅಕ್ಕನೂ ಅನುಮೋದಿಸಿರುತ್ತಾಳೆ ಇದಕ್ಕೆ ನೀನು ಈಗ ಬ್ರಾಹ್ಮಣನಾಗಬೇಕು. ಮತಾಂತರವನ್ನು ಕೈಕೊಂಡರೂ ಬಾಧಕವಿಲ್ಲ. ಹೇಗಾದರೂ ಆ ಕಳ್ಳ ಬ್ರಾಹ್ಮಣನನ್ನು ಹಿಡಿದು ತರಲೇಬೇಕು ಇಂತಾದರೆ ಅವನ ಜೀವಿತ ಸರ್ವಸ್ವವನ್ನು ನಾವು ಸೂರೆಗೊಂಡಂತಾಗುವುದು" ಎಂಬುದಾಗಿ ಹೇಳಿದನು.

ಆ ಮಾತನ್ನು ಕೇಳಿ ಚಕೋರನು ಅವನನ್ನು ಕೊನೆಗಾಣಿಸಿದ ಬಳಿಕ, ಅವನ ಜೀವಿತಸರ್ವಸ್ವವಾದರೂ ಬೇರೆ ಯಾವುದು? ಎಂಬುದಾಗಿ ಪ್ರಶ್ನೆಮಾಡಿದನು. "ಅವನಿಗೆ ನನ್ನ ಪ್ರೇಯಸಿಯಾದ ವಿನಯವತಿಯಲ್ಲಿ ಅತ್ಯಧಿಕವಾದ ಅನುರಾಗವಿರುವುದು" ಎಂದನು.

ಆ ಮಾತಿಗೆ ಸಂಘಿಲಕನು "ಛೀ! ಛೀ! ಅವನೆಂದರೇನು? ರಾಜಪುತ್ರಿಯೆಂದರೇನು? ಅದರಲ್ಲಿಯೂ ರಾಜದ್ರೋಹಿ ಬ್ರಾಹ್ಮಣ ಕುಲದಲ್ಲಿ ಹುಟ್ಟಿದವನು. ಪೂರ್ವಕಾಲದಲ್ಲಿಯೋ ಎಂದರೆ, ಬ್ರಾಹ್ಮಣರು ಸದಾಚಾರ ಸಂಪನ್ನರೆನಿಸಿ, ನಿಗ್ರಹಾನುಗ್ರಹಸಾಮರ್ಥ್ಯವುಳ್ಳವರಾಗಿದ್ದರು. ಆಗ ಅರಸರು ಬ್ರಾಹ್ಮಣರಲ್ಲಿ ಭಯಭಕ್ತಿಗಳಿಂದ ನಡೆದುಕೊಳ್ಳುತ್ತಿದ್ದರು. ಅದರಿಂದ ತಮ್ಮ ಹೆಣ್ಣು ಮಕ್ಕಳನ್ನು ಬ್ರಾಹ್ಮಣರಿಗೆ ಕೊಟ್ಟು ಮದುವೆಮಾಡುತ್ತಿದ್ದರು. ಈ ಕಾಲದ ಬ್ರಾಹ್ಮಣರ ಮಹಿಮೆಯು ತಿಳಿದೇ ಇರುವುದಷ್ಟೆ! ಕಳ್ಳತನದಿಂದಲೇ ಜೀವನಮಾಡಿಕೊಂಡಿರುವ, ಚಾಂಡಾಲರ ದೇವರಿಗಾದರೂ ಪೂಜಾರಿಯಾಗಲು ಯೋಗ್ಯತೆಯಿಲ್ಲದಿರುವ ಈ ಬ್ರಾಹ್ಮಣಾಧಮನೇ ನಮ್ಮ

ರಾಜಪುತ್ರಿಯನ್ನು ಮದುವೆಮಾಡಿಕೊಳ್ಳುವುದು, ಛೀ ಛಿ! ನಗೆಗೇಡು. ಆ ಸುದ್ದಿಯನ್ನು ಬಾಯಿಂದ ಹೇಳುವುದು ಅಪಮಾನವಲ್ಲವೇ? ಸಾಕು, ಸಾಕು ಆ ಮಾತನ್ನು ಅಲ್ಲಿಗೇ ನಿಲ್ಲಿಸು" ಎಂದನು

ಅದನ್ನು ಕೇಳಿ ಚಕೋರನು "ನನಗೆ ಎಲ್ಲವೂ ತಿಳಿದೇ ಇದೆ. ಅಂದು ಅವನು ಸೆರೆಮನೆಯಲ್ಲಿದ್ದಾಗ ಸರಿಹೊತ್ತಿನಲ್ಲಿ ಅವನ ಹೆಂಡತಿಯು ಅಲ್ಲಿಗೆ ಬಂದಂತೆಯೂ, ಅವಳು ಬಂದು ಹೊರಟು ಹೋದ ಕೆಲವು ನಿಮಿಷಗಳಲ್ಲಿಯೇ, ಅವನು ಮಾಯವಾದಂತೆಯೂ ಕಾವಲುಗಾರರು ಹೇಳಿದರು. ಅವನು ಬ್ರಹ್ಮಚಾರಿ ಇನ್ನೂ ಮದುವೆಯೇ ಇಲ್ಲ ಅವನ ಹೆಂಡತಿಯಾದರೂ ಯಾರು? ಯಾರಾದರೂ ಅಂತಃಪುರ ವಿಲಾಸಿನಿಯರೋ, ಇಲ್ಲವಾದರೆ ಊರೊಳಗಣ ದಾಸಿಯರೋ ಹೀಗೆ ಮಾಡಿರಬಹುದು! ಇಲ್ಲವಾದರೆ ಕಣ್ಣುಕಟ್ಟು ವಿದ್ಯೆಯಿಂದ ಇದೆಲ್ಲವನ್ನೂ ಹೊರವಡಿಸಿದಂತೆ ಮಾಡಿ ಓಡಿ ಹೋದನೋ? ಇಲ್ಲವಾದರೆ ನೊಣಕ್ಕೂ ಕೂಡ ಸ್ವತಂತ್ರವಾಗಿ ಹುಗಲು ಅಸಾಧ್ಯವಾದ ಸೆರೆಮನೆಯಿಂದ ತಪ್ಪಿಸಿಕೊಳ್ಳುವುದೆಂದರೇನು? ಬಾಯಿಮಾತಾಯಿತೇ? ಹುಂ! ಇರಲಿ! ಕಾಲಹರಣದಿಂದ ಫಲವಿಲ್ಲ. ಹೇಗೂ ಅವನನ್ನು ಹುಡುಕಿ ಹಿಡಿದುತಂದು, ಚಿತ್ರಹಿಂಸೆಮಾಡಿದಲ್ಲದೆ ಈ ಅಪವಾದವು ನಿರ್ನಾಮವಾಗಲಾರದು" ಎಂಬುದಾಗಿ ಹೇಳಿದನು.

ಅದನ್ನು ಕೇಳಿ ಸಂಘಿಲಕನು "ಹಾಗಾದರೆ ವಿನಯವತಿಗೆ ಸ್ವಯಂವರವೆಂದು ಲೋಕದಲ್ಲಿ ಡಂಗುರ ಹೊಡೆದರೆ ಸಾಕೆಂದು ಭಾವಿಸುವೆನು ದಿಟವಾಗಿಯೂ ಅವನು ವಿನಯವತಿಯಲ್ಲಿ ಅನುರಕ್ತನಾಗಿದ್ದರೆ, ಹೇಗಾದರೂ ಮಾಡಿ ಇಲ್ಲಿಗೆ ಬರದಿರಲಾರನು ಮುಂದಣ ವಿಷಯವು ತಿಳಿದೇ ಇರುವುದಷ್ಟೆ!" ಎಂದನು.

ಆಗ ಚಕೋರನು "ಸ್ವಯಂವರದಿಂದ ಮೇಲ್ಮೆಯಿಲ್ಲ. ಅದರಿಂದ ಅನೇಕ ಕೇಡುಗಳು ಸಂಭವಿಸಬಹುದು. ಶೌರ್ಯ, ಸಾಹಸ, ಬಲಗಳಿಲ್ಲವಾದರೆ ಸ್ವಯಂವರದಲ್ಲಿ ಕನ್ಯೆಯನ್ನು ದಕ್ಕಿಸಿಕೊಳ್ಳುವುದು ಕಷ್ಟ ಒಂದು ವೇಳೆ ಅಂತಹ ಬಲಿಷ್ಠನಾದ ವರನು ಬಂದನೆಂದರೆ, ಈಗಣ ನಮ್ಮ ರಾಜ್ಯಸ್ಥಿತಿಯ ಪಾಡು ಏನಾಗುವುದೆಂಬುದನ್ನು ಯೋಚಿಸಬೇಕಷ್ಟೆ? ಅಳಿಯನೆಂದರೆ ಅಗಳಿಯು ಗೂಟವಾದರೂ ಅಲುಗುವುದೆಂಬ ನಾಣ್ಣುಡಿಯನ್ನು ಕೇಳಿ

ಬಲ್ಲೆಯಾ? ಅಳಿಯನೇನು ಸಾಮಾನ್ಯನಲ್ಲ. ನಿತ್ಯವೂ ವಕ್ರಗತಿ ಯಾವಾಗಲೂ ಅತಿಚಾರ, ಕ್ರೌರ್ಯಭರಿತನಾಗಿರುವನು ಉಚ್ಚಗತನಾಗಿದ್ದರೂ ನೀಚಫಲವನ್ನೇ ಕೊಡುವನು. ಕನ್ಯಾಗತನಾಗಿದ್ದರೂ ವೃಶ್ಚಿಕದ ಉನ್ಮುಖತೆಯನ್ನೇ ತೋರುವನು ಈ ಕಾರಣಗಳಿಂದಲ್ಲವೇ "ಜಾಮಾತಾ ದಶಮೋ ಗ್ರಹಃ' ಎಂಬುದಾಗಿ ಹಿರಿಯರು ಹೇಳುವುದು? ಇಷ್ಟರ ಮೇಲೆ ಸ್ವಯಂವರವನ್ನು ನಡೆಯಿಸುವುದೆಂದರೆ ಬಾಯಿಮಾತಲ್ಲ. ಪ್ರಪಂಚದ ಅರಸರನೆಲ್ಲ ಬರಮಾಡಿದೆನಾದರೆ ಅವರಿಗೆ ಬಿಡಾರಗಳೆಲ್ಲಿ? ಜನವಸತಿಯಾದರೂ ಇರುವುದೇ? ಬಂದವರನ್ನು ತಕ್ಕ ರೀತಿಯಿಂದ ಮನ್ನಿಸಬೇಡವೇ? ಯಾರಿಗೆ ಯಾವ ಉಪಚಾರವು ಕಡಮೆಯಾದರೆ ಪ್ರಾಣವನ್ನೇ ಸಂಚಕಾರವಾಗಿ ಕೇಳುವರು ಇದೂ ಅಲ್ಲದೆ ನಮ್ಮ ದೇಶದ ಪ್ರಕೃತದ ಆರ್ಥಿಕಪರಿಸ್ಥಿತಿಯಾದರೂ ಅನುಕೂಲವಾಗಿಲ್ಲವಲ್ಲಾ! ಅದೂ ಹಾಗಿರಲಿ! ಒಂದು ವೇಳೆ ಹೇಗೋ ಪಾಡುಪಟ್ಟು ನಾವು ನಡೆಯಿಸಿದರೂ, ನಮ್ಮ ರಾಜಪುತ್ರಿಯು—ಆಹಾ! ಅದೊಂದು ವಿಲಕ್ಷಣವಕ್ರಪ್ರಕೃತಿಯವಳು—ಆಭಿಜಾತ್ಯ, ರೂಪ, ಯೌವನ, ವಿದ್ಯಾ, ವಿವೇಕ, ಗಾಂಭೀರ್ಯಭರಿತರೆನಿಸಿದ ಕುಬೇರನಂತಹ ರಾಜಪುತ್ರರನ್ನು ಅಲ್ಲಗಳೆದು ಯಾವನೋ ಒಬ್ಬ ತಿರುಕನನ್ನು ವರಿಸಿದಳಾದರೆ ಮುಂದೆ ಗತಿಯೇನು? ಎಷ್ಟೆಷ್ಟು ಸ್ವಯಂವರಗಳಲ್ಲಿ ಏನೇನೋ ವಿಚಿತ್ರಪರಂಪರೆಗಳು ನಡೆದಿಲ್ಲವೇ? ತಂದೆತಾಯಿಗಳಿಗೂ ತಿಳಿಯದೆ ರಹಸ್ಯವಾಗಿಯೇ ಪತ್ರಿಕಾಪ್ರಸಂಗಕ್ಕೆ ಮೊದಲು ಮಾಡಿದ ಅಧಿಕಪ್ರಸಂಗಿನಿಯರನ್ನೂ ಕೇಳಿರುವೆವು. ಹೆತ್ತವರಿಗೆ ಜನ್ಮಶತ್ರುವಾದವರನ್ನೇ ವರಿಸಿದ ಹುಡುಗಿಯರು ಎಷ್ಟೋ ಮಂದಿ! ಹಕ್ಕಿಗಳ ಮೂಲಕ ಪ್ರಣಯವಾರ್ತೆಯನ್ನು ಕಳುಹಿಸಲಿಲ್ಲವೇ ದಮಯಂತಿ? ರುಕ್ಮಿಣಿ ಮೊದಲಾದವರ ಕಥೆಯಾದರೂ ಮರೆಯುವಂತಿದೆಯೇ? ಸ್ವಯಂವರವೆಂದರೆ ರಾಜವರ್ಗದ ತಿರಸ್ಕಾರವಲ್ಲದೆ ಬೇರೆಯಲ್ಲ ಅಭಿಮಾನಾಂಧರೆನಿಸಿ, ಸುಖಶೀತಲಸುರಭಿಮಿಳಿತವಾದ ವರಣಮಾಲೆಯನ್ನು ಬಯಸಿದ ರಾಜಪುತ್ರರಿಗೆ, ಕನ್ಯೆಯು ತಮ್ಮ ಪೀಠವನ್ನು ದಾಟಿ ಮುಂದೆ ಅಡಿಯಿಟ್ಟಳಾದರೆ ಏನಾಗುವುದೆಂಬುದನ್ನು ಹೇಳಬಲ್ಲೆಯಾ? ದೀಪಪ್ರಭಾರಹಿತವಾದ ಪ್ರಾಸಾದಲಕ್ಷ್ಮಿಯಂತೆ ಕಳಾಶೂನ್ಯವಾದ ಅವರ ಮುಖವನ್ನು ನೋಡುವುದಾದರೂ ಹೇಗೆ ಸಾಧ್ಯ?

ಸಾಮಾನ್ಯ ಗೃಹಸ್ಥರ ಹಾಗೆ ಯಾವುದಾದರೊಂದು ಸಂಬಂಧವನ್ನು ನೋಡಿ, ಗಂಟುಹಾಕುವುದಕ್ಕೆ ಸಾಧ್ಯವೇ ? ರಾಜಪುತ್ರಿಯರು ರಾಜನೀತಿಯೆಂಬ ಗಂಭೀರಪ್ರವಾಹವನ್ನು ಅಡ್ಡಯಿಸಿ, ಸೌಭಾಗ್ಯಸಂಪತ್ತುಗಳನ್ನು ಬಯಸುತ್ತ ಅನುರಾಗವೆಂಬ ಆವರ್ತಗಳಲ್ಲಿ ಸಿಲುಕಿ ಪ್ರಾಣವನ್ನಾದರೂ ಲೆಕ್ಕಿಸದೆ ಈಸ ಬಲ್ಲರೆಂಬುದನ್ನು ಮರೆತೆಯಾ? ಆ ರಾಜಪುತ್ರರ ವಿಷಯಗಳನ್ನು ಮೊದಲೇ ಕೇಳಿ, ತಮ್ಮ ಮನಸ್ಸಿನಲ್ಲಿ ಯಾವನನ್ನೋ ಒಬ್ಬನನ್ನು ವರಿಸಿ, ಬಳಿಕ ಈ ರೀತಿ ಸ್ವಯಂವರದ ನೆಪದಿಂದ ಮಿಕ್ಕರಾಜರೊಂದಿಗೆ ಅವನನ್ನೂ ಬರ ಮಾಡಿಕೊಂಡು, ಸ್ವಯಂವರ ಮಂಟಪವನ್ನು ಸೇರಿದ ಕೂಡಲೇ, ಸಖಿಯರ ವಾಙ್ಮಾರುತದಿಂದ ತಮ್ಮ ಮನಸ್ಸಿನಲ್ಲಿ ಗೂಢವಾಗಿದ್ದ ಅನುರಾಗಾಗ್ನಿಯನ್ನು ಉರಿಯುಗೊಳಿಸಿ ತಾವು ಬಯಸಿದವನನ್ನೇ ಮನ್ಮಥನಂತೆ ಭಾವಿಸಿ, ಅವನ ಕೊರಳಿನಲ್ಲಿ ವರಣಮಾಲಿಕೆಯನ್ನು ಹಾಕುವರು ಕ್ಷತ್ರಿಯ ಕನ್ಯೆಯರ ಅನುರಾಗವು ಗಂಧರ್ವರಂತೆ ಸ್ವಚ್ಛಂದಗಾಮಿಯಲ್ಲ. ಅದು ಯಾವಾ ಗಲೂ ಕುಟಿಲವಾದ ರಾಜನೀತಿಯೊಂದಿಗೆ ಸೇರಿಯೇ ಇರುವುದು. ರಾಜರು ಬ್ರಾಹ್ಮಣರಲ್ಲಿ ವಿವಾಹಸಂಬಂಧವನ್ನು ಬೆಳೆಯಿಸಲು ಇನ್ನೂ ಒಂದು ಗೂಢ ವಾದ ಅಭಿಸಂಧಿಯಿರುವುದು ಅದೇನೆಂದರೆ; ಮಗಳಿಗೆ ಅನುರೂಪನಾದ ವರನು ದೊರೆತರೂ ದೊರೆಯದಿದ್ದರೂ ಸ್ವಯಂವರವನ್ನು ಏರ್ಪಡಿಸಿದರೆ ಅಂತಹ ಸ್ವಯಂವರ ಮಂಟಪದಲ್ಲಿ ರಾಜಪುತ್ರಿಯು ಒಬ್ಬನನ್ನು ಮಾತ್ರವೇ ವರಿಸುವಳು; ಮಿಕ್ಕವರಿಗೆಲ್ಲ ವಿಶೇಷವಾಗಿ ಅವಮರ್ಯಾದೆಯಾಗುವುದು ಅಂತಹ ಸಮಯದಲ್ಲಿ ಅವಮಾನಿತರಾದ ಅರಸು ಮಕ್ಕಳಲ್ಲಿ ಯಾರಾದರೂ ಆಶಾಭಂಗದಿಂದ ಉದ್ರಿಕ್ತರಾಗಿ ಯುದ್ಧಕ್ಕೆ ನಿಂತರೆ ಅದೊಂದು ದೊಡ್ಡ ವಿಪತ್ತು ಎನ್ನುವುದರಲ್ಲಿ ಸಂದೇಹವಿಲ್ಲವಷ್ಟೆ! ಆಗ ಹೆಣ್ಣಿನ ತಂದೆಯು ಶೂರನಾಗಿದ್ದು ಎಲ್ಲರನ್ನೂ ಇದಿರಿಸಿದರಂತೂ ಸರಿ. ಇಲ್ಲವಾದರೆ ಆ ಸ್ವಯಂವರದೊಂದಿಗೆ ಹೆಣ್ಣಿನ ತಂದೆಯ ಆಯುಷ್ಯವೂ ಮುಗಿಯುವುದು. ಬ್ರಾಹ್ಮಣರಿಗೆ ಹೆಣ್ಣು ಕೊಟ್ಟರೆ ಕೇವಲ ಸತ್ವ ಪ್ರಧಾನನೂ, ವಾಗ್ವೀರನೂ ಎನಿಸಿದ ಬ್ರಾಹ್ಮಣನು ಶೌರ್ಯರಹಿತನಾದ ಕಾರಣ, ಯಾವಾಗಲೂ ಒಂದು ವಿಧವಾಗಿ ವಿಧೇಯನಾಗಿಯೇ ಇರುವನು. ಇವುಗಳನ್ನೆಲ್ಲ ಪರ್ಯಾಲೋಚಿಸು ವಲ್ಲಿ ಈಗ ಸ್ವಯಂವರವನ್ನು ಏರ್ಪಡಿಸುವುದು ಎಷ್ಟು ಮಾತ್ರಕ್ಕೂ ಸಮಂ ಜಸವಲ್ಲ” ಎಂಬುದಾಗಿ ವಿವರಿಸಿದನು.

ಇಂತು ಚಕೋರನು ಹೇಳಿದುದನ್ನು ಕೇಳಿ ಶಕಾರನು "ಇದಕ್ಕೇಕೆ ಇಷ್ಟೊಂದು ದೊಡ್ಡ ಉಪನ್ಯಾಸ? ಸೂತ್ರಪ್ರಾಯವಾಗಿ ಒಂದೆರಡು ಮಾತುಗಳಲ್ಲಿ ನಿನ್ನ ಅಭಿಪ್ರಾಯವನ್ನು ಹೇಳಬಾರದಾಗಿದ್ದಿತೇ? ಸ್ವಯಂ ವರವು ದುರಾಚಾರ ಅನುರಕ್ತನೂ ಗುಣಗಣ ಭೂಷಿತನೂ, ಸೊಬಗಿನ ಗಣಿಯೂ, ರಾಜಕುಲ ಸಂಭೂತನೂ ಎನಿಸಿದ ನಾನು ಇಲ್ಲಿಯೇ ಗುಂಡು ಕಲ್ಲಿನಂತೆ ಇರುವಾಗ ನನಗೇಕ ಕೊಡಬಾರದು? ನನ್ನನ್ನು ಅಲ್ಲಗಳೆದು ಬೇರೆಯವರಿಗೆ ಕೊಟ್ಟರೆ ಅವಳಾದರೂ ಸುಖಪಡುವುದೇನು? ನನ ಗಿಂತಲೂ ಯೋಗ್ಯನಾದ ವರನು ಸಮುದ್ರವಸನೆಯಾದ ಈ ಭೂಮಂಡಲ ದಲ್ಲಿಯಾದರೂ ಇರುವನೇ? ಉಹುಂ! 'ನಭೂತೋ ನಭವಿಷ್ಯತಿ' ಎಂಬುದಾಗಿ ತನ್ನ ಭುಜಗಳನ್ನು ನೋಡಿಕೊಳ್ಳುತ್ತ — "ಒಳ್ಳೆಯದು, ಇರಲಿ ನನ್ನ ಸೌಂದರ್ಯವನ್ನು ನೋಡಿದುದರಿಂದಲ್ಲವೇ ಅನಂಗನು ಅನಂಗನೇ ಆದುದು!" ಎಂದು ಸುತ್ತಲೂ ನೋಡಿ, "ಇಲ್ಲಿ ಯಾರೂ ಹೊಗಳು ಭಟ್ಟರು ಕೂಡ ಇಲ್ಲವಲ್ಲಾ! ನನ್ನ ಪ್ರತಾಪಾದಿಗಳನ್ನು ನಾನೇ ವರ್ಣಿಸಿಕೊಳ್ಳಬೇಕಾಗಿ ಬಂದಿತು ಇರಲಿ, ವಿಧಿಯಿಲ್ಲ ರಾಕ್ಷಸರು ಹನು ಮಂತನನ್ನು ಹಿಡಿದು ರಾವಣನ ಮುಂದೆ ನಿಲ್ಲಿಸಿದಾಗ ಅವನ ಗುಣಗಳನ್ನು ಅವನೇ ಹೇಳಿಕೊಳ್ಳಲಿಲ್ಲವೇ! ಇತ್ತ ಕೇಳಿರಿ. ರಾವಣನ ಬಲಸಂಪತ್ತಿಯೂ, ಕಾರ್ತವೀರ್ಯಾರ್ಜುನನ ಭೋಗಾಸಕ್ತಿಯೂ, ಭೀಮನ ಉದ್ದಂಡತನವೂ, ದುರ್ಯೋಧನನ ಔದ್ಧತ್ಯವೂ, ಯಮನ ಚಂಡಶಾಸನ ಶಕ್ತಿಯೂ, ನನ್ನಲ್ಲಿಯೇ ನೆಲೆಗೊಂಡಿರುವುವೆಂಬುದನ್ನು ಲೋಕವೆಲ್ಲ ತಿಳಿದಿರುವುದಷ್ಟೆ! ಒಂದು ವೇಳೆ ನನ್ನ ಸೋದರಿಯು ಸ್ವಯಂವರವೇ ಆಗಿತೀರಬೇಕೆಂಬುದಾಗಿ ಹಠಹಿಡಿ ದಳಾದರೆ ಅದೂ ಆಗಲಿ! ನಾನೂ ನೋಡದೆ ಹೋಗುವುದಿಲ್ಲ. ನಾನೇ ಕೋಪಗೊಂಡೆನೆಂದರೆ, ವೀರಭದ್ರನ ಯಾಗವನ್ನು ಧ್ವಂಸಗೊಳಿಸಿದ ದಕ್ಷ ನಂತೆ ಅರೆಗಳಿಗೆಯಲ್ಲಿ, ಸ್ವಯಂವರಮಂಟಪದಲ್ಲಿ ನೆರೆದವರ ಹಲ್ಲುಗಳನ್ನು ಉದುರಿಸಿ, ಕಿವಿಮೂಗುಗಳನ್ನು ಚಿವುಟಿ, ಎಲ್ಲರನ್ನೂ ಕಾಡುಗುಡ್ಡ ಗವಿಗಳಿಗೆ ಓಡಿಸಿ, ಅವಿನಯನಿಧಿಯಾದ ಆ ವಿನಯವತಿಯೆಂಬವಳನ್ನು ವಿನಯವತಿ ಯನ್ನಾಗಿಸಿ ಆಳದಿದ್ದರೆ, ನನ್ನ ಹೆಸರು ಚಂಡಸಿಂಹನೇ ಅಲ್ಲ. ಇನ್ನು ನಾನು ಇಲ್ಲಿ ನಿಮ್ಮ ಸಂಗಡಪೊಳ್ಳು ಹರಟೆಗಳನ್ನು ಹರಟುತ್ತ ಕುಳಿತಿರುವುದಕ್ಕೆ ಸಮಯವಿಲ್ಲ. ಈಗಲೇ ಇಲ್ಲಿಂದ ಹೋಗಿ, ಸೈರಂಧ್ರಿಯ ಸಮಾಚಾರವನ್ನು

ಕೀಚಕನು ಸುಧೇಷ್ಣೆಗೆ ತಿಳಿಸಿದಂತೆ ಈ ಸಮಾಚಾರವನ್ನೆಲ್ಲ ನನ್ನ ಸೋದರಿಯಾದ ಅನಂಗಲೇಖಾದೇವಿಗೆ ಬಿನ್ನಯಿಸುವೆನು ಆಕೆಯೇನೂ ನನ್ನ ಮಾತನ್ನು ತೆಗೆದು ಹಾಕತಕ್ಕವಳಲ್ಲ ಒಂದು ವೇಳೆ ತಿರಸ್ಕರಿಸಿದರೆ ಮುಂದಿನ ಗತಿ ಏನಾಗುವುದೆಂಬುದನ್ನೂ ಹೇಳಿಬಿಡುತ್ತೇನೆ. ಇದಕ್ಕೇಕೆ ಮುಚ್ಚುಮರೆ? ಆ ಮೇಲೆ ಅವರ ಅದೃಷ್ಟವಿದ್ದಂತಾಗಲಿ!" ಎನ್ನುತ್ತ ಹೊರಡಲು ಅನುವಾಗುತ್ತಿದ್ದನು ಆಗ ಸಂಘಿಲಕನು—"ವಿಸಯುವತಿಯು ಪರಿವ್ರಾಜಿಕೆಯಾಗುವಳೆಂದು ನನಗೆ ತೋರುವುದು. ಅನುರೂಪನಾದ ವರನು ದೊರೆಯದಿದ್ದರೆ ರಾಜಪುತ್ರಿಯರು ಪರಿವ್ರಾಜಿಕಾರೂಪವನ್ನು ತಳೆದು ಸ್ವಚ್ಛಂದಗಾಮಿನಿಯರಾಗುವರು ಇಲ್ಲವಾದರೆ ಅವರಿಗೆ ಕಾಲ ಕಳೆಯುವ ಬಗೆಯಾದರೂ ಯಾವುದು?" ಎಂದನು.

ಆ ಮಾತಿನಿಂದ ಶಕಾರನಿಗೆ ಮಿತಿಮೀರಿದ ಕೋಪವು ಉಕ್ಕಿಬಂದಿತು ಅವನು ಕೂಡಲೇ ಸಂಘಿಲಕನ ಕಡೆ ತಿರುಗಿ, "ಎಲೋ! ನಗ್ನ ಸಿದ್ಧಾಂತೀ! ಶೂನ್ಯವಾದಜಟಿಲ! ನಿನಗೆ ಮೈಮೇಲೆ ಪ್ರಜ್ಞೆಯಿದ್ದಂತೆ ತೋರಲಿಲ್ಲ. ಹಾಳು—ನಿಮ್ಮ ಬುದ್ಧನ ಉಪದೇಶಗಳೆಲ್ಲವೂ ಹೀಗೆಯೇ ಸರಿ. ನಮ್ಮ ರಾಜಮನೆತನದಲ್ಲಿ ಪರಿವ್ರಾಜಿಕೆಯರಾಗುವ ಸಂಪ್ರದಾಯವಿಲ್ಲ, ಆ ಹೊಲಸು ಬುದ್ಧಧರ್ಮವನ್ನು ಕೈಕೊಂಡು ವಿರಾಗಿಣಿಯರಾಗುವುದಕ್ಕಿಂತಲೂ ಯಾವುದಾದರೊಂದು ಸುಪ್ರಸಿದ್ಧವಾದ ದೇವಸ್ಥಾನದಲ್ಲಿ ದೇವದಾಸಿಯರಾಗಿರುವುದು ಲೇಸು. ಛೀ! ನಿಮ್ಮ ಬುದ್ಧಧರ್ಮದ ಸುದ್ದಿಯನ್ನೇನಾದರೂ ಇನ್ನು ಮುಂದೆ ನನ್ನ ಇದಿರಾಗಿ ಎತ್ತಿದೆಯೋ, ನೋಡು—ನೀನು ಏನಾಗುವೆ—ಎಂಬುದು ನಿನಗೇ ತಿಳಿಯುವುದು" ಎಂಬುದಾಗಿ ತಿರಸ್ಕಾರಸೂಚಕವಾದ ಮಾತುಗಳಿಂದ ಅವನನ್ನು ಮೂದಲಿಸಿದನು

ಈ ಬಗೆಯ ನಿಂದಾವಾಕ್ಯಗಳನ್ನು ಕೇಳಿ, ಸಂಘಿಲಕನಿಗೆ ಸಿಟ್ಟು ತಲೆಗೇರಿತು. "ಎಲೋ! ನೃಪಕುಲಕೀಟವೇ! ಸರ್ವಜ್ಞನೆನಿಸಿದ ನಮ್ಮ ಸುಗತನ ಧರ್ಮಶಾಸನವನ್ನು ಧಿಕ್ಕರಿಸುವೆಯೋ? ಇರಲಿ! ನಿನಗೆ ನಾನೇ ತಕ್ಕ ರೀತಿಯಿಂದ ಬುದ್ಧಿಕಲಿಸುವೆನು. ಅದಕ್ಕೂ ಸಮಯವು ಬಂದೇ ಬರುವುದು. ವಿರಾಗಿಣಿ ಎಂದರೇನು—ಬಾಯಿ ಮಾತಾಯಿತೇ? ಪರಿವ್ರಾಜಿಕಾವ್ರತವನ್ನು ಕೈಕೊಂಡವಳು ಸಾಮಾನ್ಯ ಕನ್ಯೆಯಾದರೂ, ಅವಳೇ

ಮಾನ್ಯೆ, ಅವಳೀಗ ಧನ್ಯೆ, ಅವಳೇ ಸಂಘಚಾರಿಗಣ್ಯೆ, ತಪೋನಿಯಮ ಪುಣ್ಯೆ, ಬೋಧಿ ಸತ್ವಾಗ್ರಗಣ್ಯೆ,—ಎಂದು ಮುಂತಾಗಿ ಕ್ಷಪಣಕನು ಬಣ್ಣಿಸುತ್ತಿರುವಲ್ಲಿ, ಚಂಡಸಿಂಹನು ಮತ್ತಷ್ಟು ಕ್ರುದ್ಧನಾಗಿ "ಎಲೋ! ಹಾಳು ಕ್ಷುದ್ರಬೌದ್ಧನೇ! ಅಲಂಕಾರಗಳನ್ನು ನಾನೂ ಓದಿರುವೆನು. ಅತಿ ಹೀನವಾದ ನಿನ್ನ ಅನುಪ್ರಾಸ ಚಾತುರ್ಯವನ್ನು ನನ್ನಲ್ಲಿ ತೋರಿಸುವುದಕ್ಕಿಂತಲೂ, ನಿಮ್ಮ ಜನಗಳ ಬೀದಿಯಲ್ಲಿ ಹೋಗಿ ಬಿತ್ತರಿಸಿದರೆ ಎಲ್ಲಿಯಾದರೂ ಸ್ವಲ್ಪ ಎಂಜಲ ಕೂಳಾದರೂ ಸಿಕ್ಕಬಹುದು. ನಾನು ಬಾಯ್ದೆರೆದು ಹೇಳತೊಡಗಿದರೆ ನಿನ್ನ ಅನುಪ್ರಾಸಗಳೆಲ್ಲವೂ ಒಂದು ಮೂಲೆಯಲ್ಲಿ ಅವಿತು ಕೊಳ್ಳಬೇಕು. ಆದರೆ ಈಗ ಸಮಯವಲ್ಲ ವಿನಯವತಿಯೆಂದರೆ ಯಾರೆಂದು ತಿಳಿದಿರುವೆ? ಅವಳಿಗೂ ರಾಜ್ಯದಲ್ಲಿ ಸ್ವಲ್ಪ ಸಂಬಂಧವಿರುವುದು ಅದನ್ನು ಇತರರ ಪಾಲು ಮಾಡದೆ ನಾನೇ ಆಕ್ರಮಿಮಿಸಿಕೊಳ್ಳಬೇಕು. ದಿಕ್ಕಿಲ್ಲದ ಬೌದ್ಧ ಜಾತಿಯ ಹೆಂಗಸರು ಮಾತ್ರವೇ ಪರಿವ್ರಾಜಿಕೆಯರಾಗುವರಲ್ಲದೆ, ಮಹಾಕುಲ ಪ್ರಸೂತೆಯರಾದ ನಮ್ಮಂತಹ ಶೂರಾಗ್ರೇಸರನನ್ನು ಆಶ್ರಯವಾಗಿ ಪಡೆದಿರುವ, ಅರಸುಮಗಳೇಕೆ ವಿರಾಗಿಣಿಯಾಗಬೇಕು? ಜೋಕೆ ಇನ್ನು ಮುಂದೆ ಈ ಸುದ್ದಿಯನ್ನು ಎಲ್ಲಿಯಾದರೂ ತೆಗೆದರೆ—ನೋಡು" ಎಂಬುದಾಗಿ ಮೂದಲಿಸಿದನು.

ಅದನ್ನು ಕೇಳಿ ಕ್ಷಪಣಕನು "ಎಲೋ, ಶಕಾರಾ! ನೀನು ಕಾಮುಪರವಶನಾಗಿರುವೆಯಾಗಿ ನಿನಗೆ ಬುದ್ಧಿಯು ಸ್ವಾಧೀನದಲ್ಲಿರುವಂತೆ ತೋರುವುದಿಲ್ಲ ನೀನು ನಿಮ್ಮ ಅಕ್ಕನಿಗೆ ಹೇಳಿದರೆ, ನಾನು ನಮ್ಮ ಮಾಯಾಭಟ್ಟಾಚಾರ್ಯರಿಗೆ ಬಿನ್ನಯಿಸುವೆನು. ಅವರು ಕೂಡಲೇ ಅರಸನನ್ನು ಬರಮಾಡಿಸಿ, ವಿನಯವತಿಯನ್ನು ಸತ್ಸಂಪ್ರದಾಯ ಪರಿಶುದ್ಧವಾದ ಬೌದ್ಧ ದೀಕ್ಷೆಗೆ ಒಪ್ಪಿಸಿ, ಭಗವಂತನಾದ ಬುದ್ಧನ ಶಾಸನವನ್ನು ಸನ್ಮಾನಗೊಳಿಸಿ, ಆತನ ಅನುಗ್ರಹಕ್ಕೆ ಪಾತ್ರನಾಗುವಂತೆ ಬೋಧಿಸುವರು, ಹೀಗಾದರೆ ಅರಸನಿಗೂ ಲಾಭವುಂಟು. ವಿನಯವತಿಯು ರಾಜ್ಯದ ಭಾಗವು ಅರಸನಿಗೇ ದಕ್ಕುವುದು" ಎಂದನು.

ಅಷ್ಟರಲ್ಲಿ ಶಕಾರನು ಏನನ್ನೋ ಹೇಳಬೇಕೆಂದಿರುವಾಗ ಸಂಘಿಲಕನು ಅಲ್ಲಿ ನಿಲ್ಲದೆ ದುರದುರನೆ ನೋಡುತ್ತ ಅಲ್ಲಿಂದ ಹೊರಟು ಹೋದನು.

ಚಕೋರನನ್ನು ಬೀಳ್ಕೊಂಡು ಶಕಾರನೂ ಅಲ್ಲಿಂದ ಹೊರಟನು ಬಳಿಕ ಚಕೋರನು ಅರಸನ ಬಳಿಸಾರ್ದು ವಿಷಯಗಳನ್ನೆಲ್ಲ ಸವಿಸ್ತಾರವಾಗಿ ಬಣ್ಣಿಸಿ ಅದರ ಸಾಧಕಬಾಧಕಗಳನ್ನೆಲ್ಲ ವಿವರಿಸಿದನು. ಶಕಾರನು ರಾಣಿಯ ಬಳಿಗೆ ಹೋಗಿ, ತನ್ನ ಬುದ್ಧಿಶಕ್ತಿಸಾಹಸಗಳ ಫಲರೂಪವಾದ ಸಲಹೆಯನ್ನು ಕೊಟ್ಟು, ಹೇಗಾದರೂ ತನ್ನ ಮಾತಿನಂತೆ ನಡೆದರೆ ಮಾತ್ರವೇ ರಾಜ್ಯಕ್ಕೂ ಪ್ರಜೆಗಳಿಗೂ ಸೌಖ್ಯವಾಗುವುದೆಂತಲೂ ಇಲ್ಲವಾದರೆ ಅರಸನಿಗೂ ಅರಸು ತನಕ್ಕೂ ಭಂಗವಾಗಬಹುದೆಂತಲೂ ಸ್ಪಷ್ಟವಾಗಿ ಹೇಳಿಬಿಟ್ಟನು. ಇವರಿಬ್ಬರ ಸಲಹೆಗಳನ್ನು ಕೇಳಿದ ರಾಜನೂ ರಾಣಿಯೂ ಮುಂದಣ ಕರ್ತವ್ಯ ವೇನೆಂಬುದಾಗಿ ನಿರ್ಣಯಿಸಲಾರದೆ, ಚಿಂತಾಕುಲಿತಹೃದಯರಾಗಿ ಅವರನ್ನು ಬೀಳ್ಕೊಟ್ಟರು.

ಇತ್ತ ಶೂದ್ರಕನು ಕಾರಾಗೃಹದಿಂದ ವಿಮುಕ್ತನಾಗಿ, ಹೊರಗೆ ಬಂದು ಅಲ್ಲಿ ಸಿದ್ಧವಾಗಿದ್ದ ದಿವ್ಯಾಶ್ವವನ್ನೇರಿ ಮುಂದಕ್ಕೆ ಹೊರಟನು. ಆ ಕಾಲದಲ್ಲಿ ಕುದುರೆಯು ಆನಂದಾತಿಶಯದಿಂದ ಒಮ್ಮೆ ಹೇಷಿಸಿತು. ಕೂಡಲೇ ದೂರದಲ್ಲಿ ನಿಂತಿದ್ದ ಒಬ್ಬ ಭಟನು ಓಡಿಬಂದು, "ದೇವಾ! ಈ ತೇಜಿಯು ತಮ್ಮ ಇಷ್ಟಾನುಸಾರ ನಡೆಯಬಲ್ಲುದು. ತಾವು ಇಲ್ಲಿಂದ ಬೇಗನೆ ಪೂರ್ವ ದಿಕ್ಕಿಗೆ ಪ್ರಯಾಣ ಬೆಳೆಸಿದಲ್ಲಿ ಸ್ವಲ್ಪ ಮುಂದೆ, ಅಂಗರಕ್ಷಕ ಸೈನ್ಯ ವಿರುವುದು. ಅದೂ ತಮ್ಮ ಸಂಗಡಲೇ ಬರುವುದು. ಆ ಸೈನಿಕರೆಲ್ಲ ಕೃತಜ್ಞರೂ ಸತ್ಯಸಂಧರೂ ಆಗಿರುವುದರಿಂದ, ಅವರ ವಿಷಯದಲ್ಲಿ ಯಾವ ಸಂದೇಹಕ್ಕೂ ಅವಕಾಶವಿಲ್ಲ. ಬೇಗನೆ ಹೊರಡಬೇಕು. ಬೆಳಕು ಹರಿ ಯುತ್ತ ಬಂದಿತು" ಎಂದು ಹೇಳಿ ಅಲ್ಲಿಂದ ಬೀಳ್ಕೊಂಡು ತೆರಳಿದನು. ಶೂದ್ರಕನು ಅಂತೆಯೇ ಪೂರ್ವಾಭಿಮುಖವಾಗಿ ನಡೆತರುವಲ್ಲಿ, ಇನ್ನೂರು ಮಂದಿ ಅಶ್ವಾರೋಹಿಗಳು ಕಾದಿದ್ದರು. ಶೂದ್ರಕನನ್ನು ಕಂಡೊಡನೆಯೇ ಅವರು ತಮ್ಮ ಭಲ್ಲೆಗಳನ್ನು ಕೆಳಮೊಗವಾಗಿಟ್ಟು ಮೊಣಕಾಲೂರಿ ಕೈಮು ಗಿದು, ಎದ್ದು ನಿಂತರು. ಶೂದ್ರಕನು ಧೈರ್ಯದಿಂದ ಅವರನ್ನು ಹತ್ತಿರ ಬರ ಮಾಡಿ, ಅವರ ನಾಯಕನನ್ನು ಕುರಿತು, "ನೀವು ಯಾರು? ಇಲ್ಲಿಗೆ ನಿಮ್ಮನ್ನು ಕಳುಹಿದವರಾರು?" ಎಂಬುದಾಗಿ ಪ್ರಶ್ನೆ ಮಾಡಲಾಗಿ, ಆ ನಾಯ ಕನು "ಸ್ವಾಮಿ! ದಾರಿಯಲ್ಲಿ ಯಾವ ತೊಂದರೆಯೂ ಉಂಟಾಗದಂತೆ

ತಮ್ಮನ್ನು ಜಾಗರೂಕತೆಯಿಂದ ಗಡಿಯು ವರೆಗೆ ಅನುಸರಿಸುವಂತೆ ನಮಗೆ ರಾಜಾಜ್ಞೆ—ಅಲ್ಲ—ಅಲ್ಲ—ಅಪ್ಪಣೆ" ಎಂದರು.

ಶೂದ್ರಕನು "ನಾನು ಹೀಗೆ ಇತರರ ಕನಿಕರಕ್ಕೆ ಗುರಿಯಾಗಿ ಬದುಕಬೇಕೇ? ಛೀ! ಛಿ! ಶೂದ್ರಕಾ! ನಿನ್ನ ಜನ್ಮವು ವ್ಯರ್ಥ!" ಎಂಬುದಾಗಿ ತನ್ನಲ್ಲಿಯೇ ಮರುಗುತ್ತ ಆ ಸೈನಿಕರೊಂದಿಗೆ ನಡೆತಂದು, ಗಡಿಯ ಸಮೀಪ ದಲ್ಲಿ ಆ ಸೈನಿಕರನ್ನು ಬೀಳ್ಕೊಟ್ಟು, ಅರಣ್ಯಮಾರ್ಗವಾಗಿ ಪ್ರಯಾಣ ಮಾಡುತ್ತಿರಲು, ದೂರದಲ್ಲಿ ಒಂದು ಎತ್ತರವಾದ ಕುದುರೆಯು ಕಂಡು ಬಂದಿತು. ಅದರ ಸಮೀಪದಲ್ಲಿಯೇ ಒಬ್ಬ ಮನುಷ್ಯನು ಇದ್ದಂತೆ ತೋರಿತು. ಶೂದ್ರಕನು ಹತ್ತಿರ ಬರುವಷ್ಟರಲ್ಲಿ ಆ ಪುರುಷನು ಕುದುರೆ ಯನ್ನು ಹಲ್ಲಣಿಸಿ, ಸಿದ್ಧವಾಗಿ ನಿಂತು, ಅವನು ಹತ್ತಿರ ಬಂದ ಕೂಡಲೇ ಅಡ್ಡ ಬಿದ್ದು, ಎದ್ದು ನಿಂತು ಕಯ್ಮುಗಿದು "ಪ್ರಭೋ! ನಾನು ಹೊಸಬನಲ್ಲ. ಹಿಂದೆ ತಾವು ಮಾಹಿಷ್ಮತೀ ಪಟ್ಟಣದಲ್ಲಿದ್ದಾಗ ಒಂದು ಲೇಖವನ್ನು ತಂದು ಕೊಟ್ಟು, ತಮ್ಮನ್ನು ಸಂದರ್ಶಿಸದೆ ಹೊರಟು ಹೋದವನು ನಾನೇ. ನನ್ನನ್ನು ಸಿಂಹಭಟನೆನ್ನುವರು. ತಮ್ಮೊಡನೆಯೇ ಇದ್ದು ಶುಶ್ರೂಷೆ ಮಾಡು ವಂತೆ ಅಪ್ಪಣೆಯಾಗಿದೆ" ಎಂದನು.

ಶೂದ್ರಕನು "ಅಯ್ಯಾ! ನಿನಗೆ ಇಂತು ಆಣತಿ ಕೊಟ್ಟವರಾರು?" ಎಂಬುದಾಗಿ ಕೇಳಿದನು.

"ಸ್ವಾಮೀ! ಅದನ್ನು ಮಾತ್ರ ತಾವು ಪ್ರಶ್ನೆ ಮಾಡಬಾರದು" ಎಂದು ಹೇಳಿದ ಸಿಂಹಭಟನನ್ನು ಕುರಿತು ಶೂದ್ರಕನು, "ಅಯ್ಯಾ! ಹಾಗಾದರೆ, ನೀನು ಉಜ್ಜಯಿನಿಯ ರಾಣಿಯವರನ್ನು ಬಲ್ಲೆಯಾ?" ಎಂದನು.

ಆ ಪ್ರಶ್ನೆಗೆ ಸಿಂಹಭಟನು "ದೇವಾ! ಉಜ್ಜಯಿನೀ ಪಟ್ಟಣಕ್ಕೆ ಹೋಗಿ, ಮಹಾಕಾಳೀ ದೇವಿಯನ್ನು ಸಂದರ್ಶಿಸಬೇಕೆಂಬ ಕುತೂಹಲವು ಅತ್ಯುತ್ಕಟವಾಗಿದ್ದರೂ ದೇವರ ಚಿತ್ತಕ್ಕೆ ಇನ್ನೂ ಬರಲಿಲ್ಲ. ನಾನು ಏನು ಮಾಡಬಲ್ಲೆನು?" ಎಂಬುದಾಗಿ ವಿನಯದಿಂದ ಪ್ರತ್ಯುತ್ತರವನ್ನಿತ್ತನು.

ಈ ಮಾತುಗಳಿಂದ ಶೂದ್ರಕನಿಗೆ ಅವನಲ್ಲಿ ಭರವಸೆ ಹುಟ್ಟಲು, ಅವನೊಡನೆ ಕೆಲವು ದಿನಗಳು ಪ್ರಯಾಣ ಮಾಡುತ್ತ, ನರ್ಮದಾನದೀ

ತೀರದಲ್ಲಿರುವ ಮಾಹಿಷ್ಮತೀ ಪಟ್ಟಣವನ್ನು ಹೊಕ್ಕು, ಒಬ್ಬ ಬ್ರಾಹ್ಮಣನ ಮನೆಯುನ್ನು ಸೇರಿ ತಾನು ಒಬ್ಬ ದೊಡ್ಡ ವಿದ್ವಾಂಸನೆಂತಲೂ, ದೇಶಾಟನ ಮಾಡುವ ಉದ್ದೇಶದಿಂದ ಬಂದನೆಂತಲೂ ತಿಳಿಸಿ, ಕೆಲಕಾಲ ಅಲ್ಲಿಯೇ ಇದ್ದನು. ಸಂಗಡ ಬಂದಿದ್ದ ಭಟನು ಊರ ಹೊರಗಣ ಸತ್ರದಲ್ಲಿ ಇಳಿದಿದ್ದು ಆಗಾಗ್ಗೆ ಬಂದು ಶೂದ್ರಕನನ್ನು ಸಂದರ್ಶಿಸಿ ಹೋಗುತ್ತಿದ್ದನು ಒಂದು ದಿನ ಆ ಮನೆಯ ಯಜಮಾನನೊಂದಿಗೆ ಲೋಕಾಭಿರಾಮವಾಗಿ ಮಾತನಾಡುತ್ತ, ದೇಶದೇಶಗಳ ಸುದ್ದಿಗಳನ್ನು ಹೇಳುತ್ತಿರುವಲ್ಲಿ, ಆ ಗೃಹಸ್ಥನು ಶೂದ್ರಕನೊಡನೆ ಇಂತೆಂದನು.—

"ಪಂಡಿತೋತ್ತಮಾ! ನಮ್ಮ ಅರಸನು ಶಾರದೆಯ ಪುರುಷಾವತಾರವೇ ಸರಿ ಆತನಿಗೆ ತಿಳಿಯದ ಕಳೆಗಳಾವುವೂ ಇಲ್ಲ ನೃತ್ತ, ಗೀತ ವಾದ್ಯಗಳಲ್ಲಿ ಅದ್ವಿತೀಯನು ಶಿಲ್ಪವಿದ್ಯೆಯಲ್ಲಿ ಆತನ ಪ್ರತಿಭಾಶಕ್ತಿಯನ್ನು ಮಿಾರಿದವರೇ ಇಲ್ಲ. ಅಶ್ವಶಾಸ್ತ್ರ ಗಜಶಾಸ್ತ್ರಗಳಲ್ಲಿ ಶಾಲಿಹೋತ್ರ, ಪಾಲಕಾಪ್ಯರನ್ನಾದರೂ ಆಕ್ಷೇಪಿಸಬಲ್ಲನು ಧನುರ್ವೇದ ವಿಷಯದಲ್ಲಿ ಸೂತ್ರಭಾಷ್ಯಕಾರರಾದ ಈಶಾನ, ಶಾಂಡಿಲ್ಯರನ್ನಾದರೂ ಸೋಲಿಸತಕ್ಕವನು. ಮೂರು ತಿಂಗಳ ಹಿಂದೆ ಗೌತಮನೆಂಬ ಚಿತ್ರಕಾರನೊಬ್ಬನು ಈ ಪಟ್ಟಣದ ರಾಜಬೀದಿಯಲ್ಲಿ ಚಿತ್ರಶಾಲೆಯನ್ನು ಸ್ಥಾಪಿಸಿದನು. ಆತನ ಕೀರ್ತಿಯು ಅರಸನ ವರೆಗೂ ವ್ಯಾಪಿಸಿತು. ಅನೇಕರು ತಮ್ಮ ಅಭಿಮತವಾದ ಚಿತ್ರಗಳನ್ನು ಬರೆಯಿಸಿ ಕೊಂಡರು. ಅದನ್ನು ಕೇಳಿದ ನಮ್ಮ ಮಹಾರಾಜನು, ಮೊನ್ನೆಯ ದಿನ ಆತನನ್ನು ಬರಮಾಡಿಸಿ ಆತನ ಚಿತ್ರಗಳ ನೈಪುಣ್ಯವನ್ನು ಪರೀಕ್ಷಿಸುವ ಉದ್ದೇಶದಿಂದ, 'ಅರ್ಧನಾರೀಶ್ವರ ರೂಪಿಯಾದ ಶಿವನು, ತನ್ನ ಅರ್ಧಾಂಗಿಯಾದ ಪಾರ್ವತಿಯ ಪ್ರತಿಬಿಂಬವನ್ನು ಕನ್ನಡಿಯಲ್ಲಿ ನೋಡಿ ಮಿಕ್ಕ ತನ್ನ ದೇಹವೂ ಆದರೊಡನೆ ಕಲೆತು, ಮತ್ತೊಂದು ಅರ್ಧನಾರೀಶ್ವರ ರೂಪವೇ ತನ್ನ ಇದಿರಾಗಿ ನಿಂತಿದೆಯೋ ಎಂಬಂತೆ ಅಚ್ಚರಿಗೊಂಡ ಭಾವವನ್ನು ಹೊರ ಪಡಿಸುವಂತೆ ಒಂದು ಚಿತ್ರವನ್ನು ಬರೆಯ ಬಲ್ಲೆಯಾ ?' ಎಂಬುದಾಗಿ ಪ್ರಶ್ನೆ ಮಾಡಲಾಗಿ ಆ ದ್ವಿಜಪುಂಗವನು ಅರಸನು ತನ್ನನ್ನು ಪರೀಕ್ಷಿಸುವ ಸಲುವಾಗಿಯೇ ಇದನ್ನು ಬರೆಯುವಂತೆ ಆಣತಿಯಿತ್ತನೆಂಬುದಾಗಿ ತಿಳಿದು, ಆ ಭೂಪಾಲನನ್ನು ಮನ್ನಿಸಿ ಕುಳ್ಳಿರಿಸಿ, ರಸಭಾವಗಳಿಗೆ ಕುಂದು ಬಾರದಂತೆಯೂ, ದೇಶಕಾಲಗಳಿಗೆ ವಿರೋಧವಾಗದಂತೆಯೂ ಒಂದು ಗಳಿಗೆ

ಯೊಳಗಾಗಿ ಚಿತ್ರವನ್ನು ಉಲ್ಲೇಖಿಸಿ ಅರಸನ ಮುಂದಿಟ್ಟನು. ದೊರೆಯು ವಿಸ್ಮಯ ಪರವಶನಾಗಿ, ಮರುದಿನ ತನಗೆ ಅರಮನೆಯಲ್ಲಿ ದರ್ಶನವನ್ನಿತ್ತು ತನ್ನನ್ನು ಕೃತಾರ್ಥನನ್ನಾಗಿ ಮಾಡಬೇಕೆಂಬುದಾಗಿ ಪ್ರಾರ್ಥಿಸಿ, ಆ ಭೂಸುರನನ್ನು ಬೀಳ್ಕೊಂಡು ಅರಮನೆಯನ್ನು ಸೇರಿದನು. ನೆನ್ನೆಯು ದಿನ ಆ ಚಿತ್ರಕಾರನು ರಾಜಾಸ್ಥಾನಕ್ಕೆ ಹೊರಟಾಗ ಬೀದಿಯಲ್ಲಿ ಆತನನ್ನು ನೋಡಬೇಕೆಂಬ ಕುತೂಹಲದಿಂದ ನೆರೆದಿದ್ದ ಜನಗಳ ಸಂದಣಿಯನ್ನು ನಾನೇನೆಂದು ಹೇಳಲಿ! ರಾಜಾಸ್ಥಾನವನ್ನು ಸೇರಿದ ಕೂಡಲೇ ಅರಸನು ಇದಿರ್ಗೊಂಡು, ಸತ್ಕರಿಸಿ, ಸಂಭಾಷಿಸುವ ಸಂದರ್ಭದಲ್ಲಿ, ಚಿತ್ರಕಲೆಯ ವಿಷಯವಾದ ಗ್ರಂಥಗಳಾವುವೆಂದು ಪ್ರಶ್ನೆಮಾಡಿದನು. ಆಗ ದ್ವಿಜವರ್ಯನು 'ನೃಪಕುಲಲಲಾಮಾ! ಊರ್ವಶಿಯು ನರನಾರಾಯಣರ ಅನುಗ್ರಹದಿಂದ ಮೂಲ ಸೂತ್ರಗಳನ್ನು ರಚಿಸಿದಳು ಬಳಿಕ ಚತುರ್ಮುಖನೂ ಶಾರದೆಯೂ ತಮ್ಮ ತಮ್ಮ ಹೆಸರುಗಳಿಂದ ಬೇರೆಬೇರೆ ಎರಡು ಗ್ರಂಥಗಳನ್ನು ಬರೆದಿರುವರು. ಗೌತಮ ಮುನಿಯೂ ಭರದ್ವಾಜ ಮಹರ್ಷಿಯೂ ಬರೆದ ರಸಚಿತ್ರ ವಿಧಾನಗಳು ಈಗ ದೊರೆಯುವುದಿಲ್ಲ. ಪಶುಪಕ್ಷಿ ವರ್ಗವನ್ನು ಚಿತ್ರಿಸುವ ಭಾಗವನ್ನು ಬೋಧಿಸುವ ಗ್ರಂಥಕ್ಕೆ ಜಾತಿಚಿತ್ರವೆಂತಲೂ, ಆಕಾರ ಮುಂತಾದ ಸನ್ನಿವೇಶಗಳನ್ನೂ, ಋಜುಗತಿ, ತಿರ್ಯಗ್ಗತಿ, ಸಾಚಿಗತಿ, ಪಾರ್ಶ್ವಗತಿ ಮೊದಲಾದ ಗಮನ ವಿಶೇಷಗಳನ್ನೂ, ದೃಷ್ಟಿ ವಿಶೇಷಗಳನ್ನೂ ತಿಳಿಸುವ ಗ್ರಂಥಕ್ಕೆ ರೂಪಚಿತ್ರವೆಂತಲೂ, ವ್ಯಾಪಾರವಿಶೇಷಗಳನ್ನು ಬೋಧಿಸುವ ಚಿತ್ರಗಳಿಗೆ ಕ್ರಿಯಾಚಿತ್ರಗಳೆಂತಲೂ ವ್ಯವಹಾರವು ದೇವಸ್ಥಾನಗಳು, ಅರಮನೆಗಳು, ಉಪ್ಪರಿಗೆಗಳು ಮೊದಲಾದುವುಗಳ ಗೋಡೆಗಳ ಚಿತ್ರಗಳು ಸಾಮಾನ್ಯ ಮಾರ್ಗಚಿತ್ರಗಳೆನಿಸುವುವು' ಎಂದು ಮುಂತಾಗಿ ವಿವರಿಸಿದನು. ಇದರಿಂದ ಅರಸನಿಗೆ ಸಂತೋಷವು ಮಿತಿಮೀರಿ ಆತನನ್ನು ತನ್ನ ಆಸ್ಥಾನಭೂಷಣವಾಗಿ ನೇಮಿಸಿ ವಿಶೇಷವಾದ ಮರ್ಯಾದೆಯೊಂದಿಗೆ ತನ್ನ ಮಗಳನ್ನು ಆತನಲ್ಲಿ ಚಿತ್ರಕಲಾಭ್ಯಾಸಕ್ಕಾಗಿ ಕರೆತರಿಸಿದನು. ಆಗ ಭೂಸುರಶ್ರೇಷ್ಠನು ಅದಕ್ಕೆ ತಕ್ಕ ಪೂರ್ವಾಂಗಗಳನ್ನು ನೆರವೇರಿಸುವಲ್ಲಿ ರಾಣಿಯು ತನ್ನ ಸಮೀಪ ಬಂಧುವರ್ಗಕ್ಕೆ ಸೇರಿದ ಚಂದ್ರಲೇಖೆಯನ್ನು ತನ್ನ ಮಗಳಾದ ಲಾವಣ್ಯವತಿಯೊಂದಿಗೆ ಉಪದೇಶ ಸಮಯದಲ್ಲಿ ಹತ್ತಿರ ಕುಳಿತು ಅಭ್ಯಾಸ ಮಾಡಲು ಅನುಜ್ಞೆ ಕೊಡುವಂತೆ ಕೇಳಿಕೊಳ್ಳಲಾಗಿ ಅದಕ್ಕೂ ಸಮ್ಮತಿಸಿ, ನೆನ್ನೆಯು

ಮೊದಲು ಚಿತ್ರಕಲೆಯನ್ನು ಅಭ್ಯಾಸ ಮಾಡಿಸುತ್ತಿರುವನು. ಅರಸನಿಗೆ ಆತನಲ್ಲಿ ಋಷಿಸಮಾನವಾದ ಪ್ರತಿಪತ್ತಿಯಿರುವುದು."

ಹೀಗೆಂದು ಹೇಳಿ ಆ ಗೃಹಸ್ಥನು "ಸ್ವಾಮಿ! ತಮ್ಮ ಸಮಾಚಾರಗಳೇನೆಂಬುದಾಗಿ ನಾನು ತಿಳಿಯುವಷ್ಟು ಭಾಗ್ಯಶಾಲಿಯಾಗಿದ್ದರೆ" ಎಂದು ಪೀಠಿಕಾರಚನ ಮಾಡುತ್ತಿದ್ದನು.

ಅಷ್ಟರಲ್ಲಿ ಶೂದ್ರಕನು "ಸ್ವಾಮಿ! ನಾನು ಭಾರದ್ವಾಜಕುಲಪ್ರಸೂತನು. ನನ್ನನ್ನು ವಿಶ್ವಂಭರನೆಂಬುದಾಗಿ ಕರೆಯುತ್ತಾರೆ. ನಾನು ಕೆಲಕಾಲ ಗುರುಶುಶ್ರೂಷೆಮಾಡಿ ಕೆಲಕೆಲವು ವಿಷಯಗಳಲ್ಲಿ ಪರಿಶ್ರಮವುಳ್ಳವನಾಗಿರುವೆನೆಂದರೆ ಆತ್ಮಸ್ತುತಿಯಾಗಲಾರದು ಆದರೆ ಶಿಲ್ಪಶಾಸ್ತ್ರದಲ್ಲಿ ನನಗೆ ವಿಶೇಷವಾದ ಪರಿಶ್ರಮವಿರುವುದೆನ್ನಬಹುದು" ಎಂದು ಹೇಳಿದನು. ಇದರಿಂದ ಆ ಗೃಹಸ್ಥನಿಗೆ ಶೂದ್ರಕನ ವಿಷಯದಲ್ಲಿ ಗೌರವವು ಹೆಚ್ಚಿತು. ಆ ಊರಿನಲ್ಲಿರುವ ವರೆಗೆ ತನ್ನಲ್ಲಿಯೇ ಇರಬೇಕೆಂಬುದಾಗಿ ಒತ್ತಾಯಮಾಡಿದನು. ಹೀಗೆಯೇ ಎರಡು ಮೂರು ದಿನಗಳು ಕಳೆದುವು. 26-11-48

ಒಂದು ದಿನ ಶೂದ್ರಕನು ಪ್ರಾತಃಕಾಲದಲ್ಲಿ ತನ್ನ ನಿತ್ಯಕೃತ್ಯಗಳನ್ನು ನೆರವೇರಿಸಿ, ಆ ಚಿತ್ರಕಾರನ ಮನೆಗೆ ಹೋಗಿ, ಆತನ ಸಂದರ್ಶನಾರ್ಥವಾಗಿ ದ್ವಾರಪಾಲಕನನ್ನು ಕಂಡು ಮಾತನಾಡಲಾಗಿ, 'ಆತನು ಯಾರೊಂದಿಗೂ ಮಾತನಾಡುವುದಿಲ್ಲ. ಯಾರೊಬ್ಬರನ್ನೂ ನೋಡುವುದೂ ಇಲ್ಲ. ನಿಮಗೆ ಯಾವುದಾದರೂ ಚಿತ್ರವು ಬೇಕಾಗಿರುವುದಾದರೆ, ನಿಮ್ಮ ಅಭೀಷ್ಟವನ್ನು ತಿಳಿಯಪಡಿಸಿದಲ್ಲಿ ಕ್ಲುಪ್ತಕಾಲದೊಳಗಾಗಿ ಆ ಚಿತ್ರವನ್ನು ಮಾತ್ರ ಬರೆದು ಕೊಡುವನು. ಪರೀಕ್ಷಾರ್ಥವಾಗಿ ಯಾರಾದರೂ ಪದ್ಯಗಳನ್ನು ಬರೆದು ಕಳುಹಿಸಿದರೆ ಒಡನೆಯೇ ತಕ್ಕ ರೀತಿಯಿಂದ ಚಿತ್ರಗಳನ್ನು ಬರೆದು ಕಳುಹಿಸುವನು" ಎಂಬ ಉತ್ತರವು ದೊರೆಯಿತು. ಇದನ್ನು ಕೇಳಿ ಶೂದ್ರಕನು ಆಶ್ಚರ್ಯಭರಿತನಾಗಿ "ಅಹಾ! ಕಾಲಧರ್ಮವನ್ನು ಮೀರುವುದು ಯಾರಿಗೂ ತರವಲ್ಲ. ಆದರೆ, ದೈವವು ಇಷ್ಟು ಮಾತ್ರವಾದರೂ ನಮ್ಮ ವಿಷಯದಲ್ಲಿ ದಯೆಯನ್ನು ತೋರಿರುವುದಕ್ಕೆ ನಾವು ಸಂತೋಷಪಡಲೇಬೇಕು. ಕಾಲವು ಎಷ್ಟು ವಿಪರೀತವಾಗಿ ವಕ್ರಿಸಿತು! ಈ ಬಗೆಯ ಅಜ್ಞಾತವಾಸವು ಮುಗಿಯುವುದಾದರೂ ಎಂದಿಗೆ?" ಎಂಬ ಅರ್ಥವುಳ್ಳ ಒಂದು ಪದ್ಯವನ್ನು ಸಂಸ್ಕೃತ ಭಾಷೆಯಲ್ಲಿ ಬರೆದು, ಆ ದ್ವಾರಪಾಲಕನ ಮೂಲಕ ಕಳುಹಿಸಿದನು.

ಆ ಭೂಸುರನು ಆ ಸಂಸ್ಕೃತ ಪದ್ಯವನ್ನು ಓದಿ, ಶೂದ್ರಕನೇ ಅದನ್ನು ಬರೆದವನೆಂಬುದಾಗಿ ಊಹಿಸಿ, ಆತನನ್ನು ಒಳಗೆ ಕರೆತರುವಂತೆ ಅಪ್ಪಣೆಕೊಡಲಾಗಿ, ದ್ವಾರಪಾಲಕನು ನಡೆತಂದು ಶೂದ್ರಕನನ್ನು ಒಳಕ್ಕೆ ಕರೆದುಯ್ದನು. ಆಲಿಂಗನ ಕುಶಲಪ್ರಶ್ನಾದಿಗಳು ನಡೆದ ಬಳಿಕ, ಗೌತಮನು ಆನಂದ ಬಾಷ್ಪಪೂರಿತಗಳಾದ ನಯನಗಳಿಂದ ಶೂದ್ರಕನ ಸರ್ವಾವಯವಗಳನ್ನು ತೊಯಿಸಿ, ಗದ್ಗದ ಧ್ವನಿಯಿಂದ ಬಿಕ್ಕಿಬಿಕ್ಕಿ ಅಳತೊಡಗಿದನು. ಕಣ್ಣೀರು ಹಾಕಿದವನು ಶೂದ್ರಕನ ಪ್ರಾಣಮಿತ್ರನಾದ ಬಂಧುದತ್ತನ್ನು ಬಳಿಕ ಅವರಿಬ್ಬರಿಗೆ ಈ ರೀತಿಯಿಂದ ಪ್ರಶ್ನೋತ್ತರಗಳು ನಡೆದುವು.

ಶೂದ್ರಕ—“ಅಯ್ಯೋ! ಇದೆಂತಹ ಗ್ರಹಚಾರ! ಜನ್ಮದೇಶವನ್ನು ಬಿಟ್ಟು, ಪರದೇಶಿಯಂತೆ ಹೀಗೆ ಅಜ್ಞಾತವಾಸಮಾಡಬೇಕಾಯಿತಲ್ಲವೇ? ಇದೆಲ್ಲವೂ ನನ್ನಿಂದಲೇ ನಿನಗೆ ಪ್ರಾಪ್ತವಾಯಿತು.”

ಬಂಧುದತ್ತ—“ಪಾಂಡವರಿಗಿಂತ ನಾವು ಎಷ್ಟೋ ಭಾಗ್ಯಶಾಲಿಗಳೆನ್ನಬೇಕಲ್ಲವೇ? ಇದೆಲ್ಲಾ ಹಾಗಿರಲಿ. ನೀನು ನನ್ನನ್ನು ಬಿಡಿಸಿದ ಬಳಿಕ ಅಲ್ಲಿ ಏನು ಮಾಡಿದೆ?”

ಶೂ.—“ಅನಂಗಲೇಖೆಯು ಪುರುಷವೇಷದಿಂದ ಸರುಹೊತ್ತಿನಲ್ಲಿ ಬಂದು ನನ್ನನ್ನು ಬಿಡಿಸಿದಳು. ಆ ಸಮಯದಲ್ಲಿ ಆಕೆಯು ನನ್ನನ್ನು ಬಿಡಿಸದಿದ್ದರೆ ಆ ಮರುದಿನ ಬೆಳಗಾಗುತ್ತಲೇ ನನ್ನನ್ನು ಉರುಲು ಹಾಕಿ ಕೊಲ್ಲುತ್ತಿದ್ದರು.”

ಬಂ.—“ಆಹಾ! ಇದಲ್ಲವೇ ದೈವಬಲವೆನ್ನುವುದು? ಇಂತಹ ಹೆಡ್ಡದೊರೆಗಳ ದುರುದುಂಬಿತವನ್ನು ದೈವವಾದರೂ ಹೇಗೆ ಸಹಿಸಬಲ್ಲುದು?”

ಶೂ—“ಅನಂಗಲೇಖೆಯು ನನ್ನೊಡನೆ ಮಾತನಾಡುತ್ತಿದ್ದಾಗಲೇ ವಿನಯವತಿಯೂ ತನ್ನ ವೇಷವನ್ನು ಮಾರ್ಪಡಿಸಿಕೊಂಡು ಅಲ್ಲಿಗೆ ಬಂದಳು.”

ಬಂ.—“ಎಂತಹ ವಿಪತ್ಪರಂಪರೆ! ಅವರಿಬ್ಬರೂ ಒಬ್ಬರನ್ನೊಬ್ಬರು ಗುರುತಿಸಿದರೇನು?”

ಶೂ.—“ವಿಧಿಯಿಲ್ಲ! ವಿನಯವತಿಯು ಅನಂಗಲೇಖೆಯನ್ನು ಕಂಡಕ್ಷಣವೇ ಮೂರ್ಛೆಹೋದಳು. ಕೂಡಲೇ ನಾನು ಅಲ್ಲಿಗೆ ಓಡಿಬಂದು ಅವಳನ್ನು ಸಂತಯಿಸಿದೆನು.”

ಬಂ.—"ಹೀಗೆ ಎಲ್ಲವನ್ನೂ ಹವಣಿಸಿದ ದೈವವು ಮುಂದೆ ಏನು ಮಾಡುವುದೋ ನೋಡಬೇಕು. ಇಲ್ಲಿ ನೀನು ಹೇಗೆ ಜೀವಿಸಬೇಕೆಂದಿರುವೆ? ನಮಗೆ ಹೆದರಿಕೆ ಇಲ್ಲವಾದರೂ ಅರಸರು ಯಾವಾಗಲೂ ನಂಬತಕ್ಕವರಲ್ಲವಷ್ಟೆ!"

ಶೂ.—"ನಮ್ಮಿಬ್ಬರಿಗೂ ಪರಿಚಯವಿರುವಂತೆ ನಾವು ಎಷ್ಟು ಮಾತ್ರವೂ ಹೊರಪಡಿಸಿಕೊಳ್ಳಬಾರದು ನಮ್ಮ ಕುಲಗೋತ್ರಗಳನ್ನು ಮರೆಯಿಸಿಕೊಂಡಿರಬೇಕು. ಈ ಕಾರಣದಿಂದ, ನಾನು ಇಳಿದಿರುವ ಮನೆಯ ಯಜಮಾನನಲ್ಲಿ ನಾನು ಶಿಲ್ಪವಿಶಾರದನೆಂತಲೂ, ನನ್ನ ಹೆಸರು ವಿಶ್ವಂಭರನೆಂತಲೂ ಹೇಳಿರುವೆನು. ನಿನಗೂ ಈ ವಿಷಯವು ಜ್ಞಾಪಕವಿರಲಿ."

ಬಂ.—"ಒಳ್ಳೆಯದು. ಅದೂ ಅನುಕೂಲವೇ ಸರಿ."

ಈ ರೀತಿಯಿಂದ ಅವರಿಬ್ಬರೂ ರಹಸ್ಯವಾಗಿ ಕೆಲವು ಹೊತ್ತು ಮಾತಾನಾಡುತ್ತಿದ್ದು, ಹೊರಬಂದು ಪಟ್ಟಣದ ಬಾಹ್ಯೋದ್ಯಾನವನ್ನು ಸೇರಿದರು. ಆ ಸಮಯಕ್ಕೆ ಸರಿಯಾಗಿ ರಾಜಪುತ್ರಿಯು ತನ್ನ ಗೆಳತಿಯೊಂದಿಗೆ ವಿಹಾರಾರ್ಥವಾಗಿ ಅಲ್ಲಿಗೆ ನಡೆತಂದು, ಒಂದು ಅಶೋಕವೃಕ್ಷದ ಅಡಿಯಲ್ಲಿ ತನ್ನ ಗುರುವನ್ನೂ ಇನ್ನೊಬ್ಬ ಬ್ರಾಹ್ಮಣನನ್ನೂ ಕಂಡು, ಹತ್ತಿರ ಬಂದು ತಲೆವಾಗಿ, ವಿನಯದಿಂದ ದೂರವಾಗಿ ನಿಂತಳು. ಆಗ ಬಂಧುದತ್ತನು ಅವರಿಬ್ಬರಿಗೂ ವಿಶ್ವಂಭರನ ಸಮಾಚಾರವನ್ನು ತಿಳುಹಿ, ರಾಜಕುವರಿಯನ್ನು ಆಶೀರ್ವದಿಸಿ ಅನುಜ್ಞೆಯನ್ನೀಯಲು, ಅವರಿಬ್ಬರು ಅಲ್ಲಿಂದ ತೆರಳಿದರು. ಬಳಿಕ ಬಂಧುದತ್ತನು ಶೂದ್ರಕನನ್ನು ಕುರಿತು "ಇವರಿಬ್ಬರೂ ಈಗ ನನ್ನಲ್ಲಿ ಚಿತ್ರಕಲೆಯನ್ನು ಅಭ್ಯಾಸಮಾಡುತ್ತಿರುವರು. ಹಿರಿಯವಳು ಅರಸುಗುವರಿ. ಕಿರಿಯವಳು ಮಂತ್ರಿಯ ಬಂಧುವರ್ಗಕ್ಕೆ ಸೇರಿದವಳು. ಇವಳ ಬುದ್ಧಿಚಾತುರ್ಯವನ್ನು ನಾನು ಏನೆಂದು ಹೇಳಲಿ! ಇವಳ ರೂಪ ಲಾವಣ್ಯಾದಿಗಳನ್ನು ನೀನೇ ಕಣ್ಣಾರೆ ಕಂಡಿರುವೆ. ಸಕಲ ವಿಧಗಳಲ್ಲಿಯೂ ಇವಳು ವಿನಯವತಿಯನ್ನು ಮೀರಿರುವಳು. ಬ್ರಾಹ್ಮಣಕನ್ಯೆಯರಲ್ಲಿ ಇಂತಹ ರೂಪವತಿಯನ್ನು ನಾನು ಇದು ವರೆಗೂ ನೋಡಿದವನಲ್ಲ ಇವಳು ಹನ್ನೊಂದು ವರ್ಷದ ಪ್ರಾಯದವಳಾಗಿದ್ದರೂ ಯಾವ ಕಾರಣದಿಂದಲೋ ಇನ್ನೂ ಇವಳಿಗೆ ಮದುವೆಯಾಗಿಲ್ಲ. ಇವಳ ಮುಖ, ನೇತ್ರ, ಕೇಶ,

ಪಾದಗಳನ್ನು ನೋಡಿದರೆ ಇವಳು ಖಂಡಿತವಾಗಿಯೂ ಚಕ್ರವರ್ತಿನಿಯಾಗು ವಳೆಂದು ತೋರುವುದು ಚಿತ್ರಕಲೆಯಲ್ಲಿ ಇವಳ ಹಸ್ತಕೌಶಲವನ್ನು ನಾನು ಅಷ್ಟಿಷ್ಟೆಂದು ಬಣ್ಣಿಸಲಾರೆನು. ಒಮ್ಮೆ ನಾನು ರೇಖಾವಿನ್ಯಾಸವನ್ನು ತೋರಿ ದರೆ ಅದನ್ನು ಸಾವಿರಾರು ಬಗೆಯಿಂದ ಬರೆದು ತೋರುವಳು. ಪಾರ್ವತೀ ದೇವಿಗೆ ಹಿಂದಣ ಜನ್ಮದ ಸಂಸ್ಕಾರದಿಂದ ಸಕಲ ಕಲೆಗಳು ತಾನಾಗಿ ಬಂದು ಸೇರಿದಂತೆ ಇವಳಿಗೆ ತಿಳಿಯದ ಕಲೆಯೇ ಇಲ್ಲವೆನ್ನಬಹುದು" ಎಂದು ಮುಂತಾಗಿ ಮಾತನಾಡುತ್ತ ತಮ್ಮತಮ್ಮ ಬಿಡದಿಗಳನ್ನು ಸೇರಿದರು.

ಮರುದಿನ ಪ್ರಾತಃಕಾಲದಲ್ಲಿ ಬಂಧುದತ್ತನು ಪಾಠಶಾಲೆಯಲ್ಲಿ ಚಿತ್ರ ಕಲೆಯನ್ನು ಅಭ್ಯಾಸ ಮಾಡಿಸುತ್ತಿರುವ ಸಮಯದಲ್ಲಿ ರಾಜನು ಅಲ್ಲಿಗೆ ಬಂದು, ಆ ಇಬ್ಬರು ಕನ್ಯೆಯರ ಬುದ್ಧಿಶಕ್ತಿಯನ್ನು ಪರಿಕಿಸುತ್ತ ನಿಂತಿರು ವಲ್ಲಿ, ರಾಜಪುತ್ರಿಯು "ಅಪ್ಪಾಜಿ! ನೀವು ಶಿಲ್ಪಿವರ್ಯರನ್ನು ಹುಡುಕುತ್ತಿರು ವಿರಷ್ಟೆ! ನಮ್ಮ ಉಪಾಧ್ಯಾಯರ ಮಿತ್ರರೊಬ್ಬರು ಬಿಜಮಾಡಿಸಿರುವರು. ನೆನ್ನೆಯ ಸಾಯಂಕಾಲ ನಮ್ಮ ಪುರದ ಬಾಹ್ಯೋದ್ಯಾನದಲ್ಲಿ ನಮ್ಮ ಆಚಾರ್ಯ ರೊಂದಿಗೆ ಆ ಮಹಾಮಹಿಮರು ಸಂಭಾಷಿಸುತ್ತಿದ್ದಾಗ ಇವರ ಮೂಲಕ ವಾಗಿ ಅವರನ್ನು ನಾವಿಬ್ಬರು ಸಂದರ್ಶಿಸಿದೆವು ಅವರನ್ನು ಕರೆಕಳುಹಿದರೆ ನಮ್ಮ ಬೊಂಬೆಗಳ ಅರಮನೆಯನ್ನು ಅಂದವಾಗಿ ಕಟ್ಟಿಕೊಡಬಲ್ಲರು" ಎಂಬುದಾಗಿ ತಿಳಿಸಿದಳು ಅರಸನು ಒಡನೆಯೇ ಗೌತಮನ ಕಡೆಗೆ ತಿರುಗಿ, "ಭೂಸುರೋತ್ತಮಾ! ಆತನಾರು? ಅವರ ದರ್ಶನದಿಂದ ನನ್ನನ್ನು ಕೃತಾ ರ್ಥನನ್ನಾಗಿಸಬೇಡುವೆನು" ಎಂದನು ಆಗ ಬಂಧುದತ್ತನು 'ನಾಳೆಯ ದಿನ ಆತನನ್ನು ಕರೆತರುವೆನು' ಎನಲು ಅರಸನು ಆತನ ಆಗಮನವನ್ನೇ ಕುತೂಹಲದಿಂದ ಇದಿರು ನೋಡುತ್ತಿದ್ದನು. ಮರುದಿನ ಗೌತಮನು ವಿಶ್ವಂ ಭರನೊಂದಿಗೆ ರಾಜಾಸ್ಥಾನವನ್ನು ಹೊಕ್ಕನು. ಅರಸನು ಪ್ರತ್ಯುತ್ಥಾನಾದಿ ಗಳಿಂದ ಮನ್ನಿಸಿ ಪೀಠವನ್ನಿತ್ತು ಕುಳ್ಳಿರಿಸಿ, ಆಗಂತುಕನಾದ ಪಂಡಿತನನ್ನು ಕುರಿತು, "ವಿಪ್ರಕುಲಾವತಂಸಾ! ತಮ್ಮ ಕುಲ, ಗೋತ್ರ, ವಿದ್ಯಾ, ವಿಜಯಾದಿ ವೃತ್ತಾಂತಗಳನ್ನು ಶ್ರವಣಮಾಡುವುದರ ಮೂಲಕ ನಮ್ಮ ಕಿವಿಗಳನ್ನು ಸಾರ್ಥಕಗೊಳಿಸಬೇಡುವೆನು" ಎಂದನು.

ಅದಕ್ಕೆ ಶೂದ್ರಕನು "ನಾನು ಭಾರದ್ವಾಜಕುಲ ಪ್ರಸೂತನು. ನನ್ನನ್ನು ವಿಶ್ವಂಭರನೆನ್ನುವರು. ನಾನು ಸಾಮಾನ್ಯವಾಗಿ ಸಕಲ ಕಲೆ

ಗಳಲ್ಲಿಯೂ ನುರಿತವನಾಗಿರುವೆನು. ಆದರೂ ಶಿಲ್ಪಕಲೆಯಲ್ಲಿ ನನ್ನ ಅಭಿರುಚಿಯು ಅತ್ಯುತ್ಕಟವಾದುದು. ಭಗವಂತನ ಶಿಲ್ಪಚಾತುರ್ಯವನ್ನು ನೋಡುವ ಉದ್ದೇಶದಿಂದ ದೇಶಸಂಚಾರ ಮಾಡತೊಡಗಿ, ಅಲ್ಲಲ್ಲಿ ದಿವ್ಯವಾದ ದೇವಮಂದಿರಗಳನ್ನೂ ಅರಮನೆಗಳನ್ನೂ ನೋಡುತ್ತ, ಧರ್ಮದಿಂದಲೂ ಸಸ್ಯಾದಿಸಮೃದ್ಧಿಯಿಂದಲೂ ಕಂಗೊಳಿಸುವ ತಮ್ಮ ಈ ರಾಜ್ಯವನ್ನು ಹೊಕ್ಕು ಆನಂದಭರಿತನಾಗಿ, ಇಲ್ಲಿರುವ ಪುರಾತನ ಶಿಲ್ಪಿವಿರಚಿತಗಳಾದ ದಿವ್ಯಭವನಗಳನ್ನು ಕಂಡು ಅತ್ಯಲ್ಪವಾದ ನನ್ನ ಶಿಲ್ಪಚಾತುರ್ಯವೆಂಬ ಗದ್ದೆಗೆ ಸ್ವಲ್ಪ ನೀರನ್ನು ಚೆಲ್ಲಿಕೊಂಡು ಅಭಿವೃದ್ಧಿಗೊಳಿಸಬೇಕೆಂಬ ಕುತೂಹಲದಿಂದ ಇಲ್ಲಿ ನಿಂತೆನು. ಇಷ್ಟರಲ್ಲಿ ನೆನ್ನೆಯ ಸಾಯಂಕಾಲದಲ್ಲಿ ತಮ್ಮ ಆಸ್ಥಾನರತ್ನದಂತಿರುವ ಈ ಮಹಾತ್ಮರ ದರ್ಶನವು ದೊರೆಯಿತು" ಎಂಬುದಾಗಿ ವಿನಯ ಮಧುರೋಕ್ತಿಗಳಿಂದ ಬಿನ್ನಯಿಸಿದನು

ಆಗ ಅರಸನು "ಅತಿತೀಕ್ಷ್ಣವಾದ ತಮ್ಮ ಬುದ್ಧಿಯು ಇತರ ಯಾವ ಯಾವ ಕಲೆಗಳಲ್ಲಿ ಪ್ರಸರಿಸಿರುವುದೆಂಬುದನ್ನು ನಾನು ತಿಳಿಯತವಕಗೊಂಡಿರುವೆನು" ಎಂಬುದಾಗಿ ಪಶ್ನೆಮಾಡಿದನು.

ವಿಶ್ವಂಭರನು "ಶಿಲ್ಪವೇ ನನ್ನ ಮುಖ್ಯ ಜೀವನ ಆದರೆ ಒಂಟೆಯು ಬೇವಿನ ಮರದ ಚಿಗುರುಗಳನ್ನು ಮಾತ್ರವೇ ಮೆಲ್ಲುವಂತೆ ನಾನೂ ಈ ಶಿಲ್ಪಕಲೆಗೆ ಅಂಗಭೂತಗಳಾಗಿರುವ ನಾಟ್ಯಶಾಸ್ತ್ರಕಾವ್ಯಾಲಂಕಾರಗಳಲ್ಲಿ ಪೂರ್ಣ ಪರಿಚಯವನ್ನು ಪಡೆದು, ತಕ್ಕ ಮಟ್ಟಿಗೆ ಷಡ್ದರ್ಶನಗಳನ್ನೂ ಅಭ್ಯಾಸ ಮಾಡಿರುವೆನು. ಲೋಹಾರ್ಗಳ ಜಲಾರ್ಗಳಗಳನ್ನೂ ಸ್ವಲ್ಪ ಓದಿರುನೆನು. ಅರ್ಥಶಾಸ್ತ್ರದಲ್ಲಿಯೂ ದಂಡನೀತಿಯಲ್ಲಿಯೂ ಪರಿಚಯವಿಲ್ಲವೆಂದು ಹೇಳಲಾರೆನು" ಎಂಬುದಾಗಿ ವಿಸ್ತರಿಸಿದನು.

ಅದನ್ನು ಕೇಳಿ ಅರಸನು "ತಮ್ಮ ಹೆಸರಿಗೆ ತಕ್ಕಂತೆಯೇ ತಾವು ಸಕಲಕಲಾಧುರೀಣರೆನ್ನಲು ಸಂಶಯವಿಲ್ಲ" ಎಂದನು.

ವಿಶ್ವಂಭರನು "ದೇವಾ! ನಾನು ಅಷ್ಟು ಹೊಗಳಿಕೆಗೆ ಪಾತ್ರನಲ್ಲ. ವಿಶ್ವಂಭರನೆಂಬ ಮಹರ್ಷಿಯು ಶಿಲ್ಪಸೂತ್ರಗಳನ್ನು ಬರೆದು ಪ್ರಖ್ಯಾತಿವೆತ್ತ ಕಾರಣ ನಮ್ಮ ಪಿತೃಪಾದರು ಪುತ್ರವ್ಯಾಮೋಹದಿಂದ ನನಗೆ ಆ ಹೆಸರನ್ನೇ ಇಟ್ಟರು. ಶಿಲ್ಪಕಲೆಯಲ್ಲಿ ಆರು ಪ್ರಭೇದಗಳಿವೆ. ದೇವಾಲಯ, ರಾಜ

ಮಂದಿರ, ಪುರ, ವನ, ತಟಾಕ, ಗೃಹ ಮುಂತಾದುವುಗಳನ್ನು ಪ್ರತಿಷ್ಠೆ ಮಾಡುವುದು. ಈ ರೀತಿಯಾಗಿ ಶಿಲ್ಪವು ಆರು ಬಗೆಯಾಗಿರುವುದು. ಇವುಗಳಲ್ಲಿ ರಾಜಮಂದಿರ ಮುಂತಾದುವು ಶಾರೀರಗಳು, ಅವುಗಳಲ್ಲಿ ರಸ ಭಾವಗಳನ್ನು ಹೊರಪಡಿಸುವ ಬೊಂಬೆಗಳನ್ನು ತಿದ್ದುವುದು ಮಾನಸಗಳು. ಈ ಶಾಸ್ತ್ರಕ್ಕೆ ವಿಶ್ವಕರ್ಮ, ವಿಶ್ವಂಭರ, ಪಿಂಗಳ, ಉತ್ಪಲ, ಮಯ, ಪರಿಮಳರೆಂಬ ಆರು ಮಂದಿ ಮಹರ್ಷಿಗಳು ಪ್ರಸ್ಥಾನ ಕರ್ತರೆನಿಸಿರುವರು. ಅಗಸ್ತ್ಯ, ಪುರಂದರ, ಬ್ರಹ್ಮ ಮೊದಲಾದವರು ಈ ವಿಷಯದಲ್ಲಿ ಗ್ರಂಥಗಳನ್ನು ಬರೆದಿರುವರು. "ಏಕಸ್ಮಿನ್ ಜನ್ಮನಿ ಶಾಸ್ತ್ರಮೇಕಮೇವ" ಎಂಬ ಲೋಕೋಕ್ತಿಯಂತೆ ಒಬ್ಬ ಮನುಷ್ಯನು ತನ್ನ ಯಾವದಾಯುಷ್ಯವೂ ಓದಿದರೂ ಈ ವಿದ್ಯೆಯನ್ನು ಕೊನೆಗಾಣಿಸ ಶಕ್ಯವಲ್ಲ" ಎಂಬುದಾಗಿ ಬಣ್ಣಿಸಿದನು.

ಈ ಮಾತನ್ನು ಕೇಳಿ ಆನಂದಭರಿತನಾದ ಭೂಪಾಲಕನು "ದೇವತೆಗಳಿಗೂ ಅರಸರಿಗೂ ಯೋಗ್ಯಗಳೆನಿಸಿದ ಕಟ್ಟಡಗಳಾವುವು? ಅವುಗಳನ್ನು ನಿರ್ಮಿಸುವ ರೀತಿ ಯಾವುದು?" ಎಂಬುದಾಗಿ ಕೇಳಲಾಗಿ ಆ ಭೂಸುರೋತ್ತಮನು "ನೃಪಕುಲಾವತಂಸ! ಅವುಗಳನ್ನು ಇಷ್ಟು ಸುಲಭವಾಗಿ ವಿವರಿಸಲು ಶಕ್ತನಲ್ಲ ಪ್ರಾಸಾದಗಳಲ್ಲಿ ತೊಂಭತ್ತಾರು ಬಗೆಗಳಿವೆ. ಅವುಗಳಲ್ಲಿ ನಳಿನಕ, ಸ್ವಸ್ತಿಕ, ಸರ್ವತೋಭದ್ರ ಮುಂತಾದ ಇಪ್ಪತ್ತು ಕಟ್ಟಡಗಳು ತ್ರಿಮೂರ್ತಿಗಳಿಗೆ ಪ್ರತಿಷ್ಠಾರ್ಹವಾದುವು. ಮೇರು, ಮಂದರ, ಕೈಲಾಸ ಮುಂತಾದ ಮೂವ್ವತ್ತಾರು ಮಿಕ್ಕ ದೇವತೆಗಳಿಗೂ, ಶ್ರೀವರ್ಧನ, ಕುಡ್ಯ, ನಂದ್ಯಾವರ್ತ ಮೊದಲಾದ ಹನ್ನೆರಡು ಬ್ರಾಹ್ಮಣರಿಗೂ, ಮಾಹಿಷ, ಆವಂತ್ಯ, ವಿಜಯಾಂಕ ಮೊದಲಾದ ಇಪ್ಪತ್ತನಾಲ್ಕು ಕ್ಷತ್ರಿಯರಿಗೂ, ತುರಂಗವದನ, ಚತುಷ್ಪಾದಿಕ ಮುಂತಾದ ಎಂಟು ವೈಶ್ಯ ಶೂದ್ರರಿಗೂ ನಿಯಮಿತಗಳಾಗಿರುವುವು. ಇವುಗಳಲ್ಲಿಯೂ ಅನೇಕ ಪ್ರಭೇದಗಳಿರುತ್ತವೆ" ಎಂಬುದಾಗಿ ವಿವರಿಸಿದನು. ಇದನ್ನು ಕೇಳಿ ಅಚ್ಚರಿಗೊಂಡ ಭೂಮಾಧವನು, "ಮಹಾಮಹಿಮಾ! ಇನ್ನೊಂದು ಸಂದೇಹವಿರುವುದು. ದಯೆಮಾಡಿ, ಅದನ್ನು ಪರಿಹಾರಮಾಡಿದಲ್ಲಿ ಧನ್ಯನಾಗುವೆನು. ದೇಶಗಳಲ್ಲಿ ಎಷ್ಟು ಭೇದಗಳಿವೆ? ಅವುಗಳ ವಿನ್ಯಾಸ ಕ್ರಮವೆಂತು?" ಎಂಬುದಾಗಿ ಕುತೂಹಲದಿಂದ ಪ್ರಶ್ನೆಮಾಡಿದನು ವಿಶ್ವಂಭರನು ವಿವರಿಸತೊಡಗಿದನು:—

"ಗ್ರಾಮ, ಖೇಟ, ಖರ್ವಟ, ದುರ್ಗ, ನಗರ, ರಾಜಧಾನಿ, ಪಟ್ಟಣ, ದ್ರೋಣ

ಮುಖ, ಶಿಬಿರ, ಸ್ಕಂಧಾವಾರ, ಸ್ಥಾನೀಯ, ವಿಡಂಬಕ, ನಿಗಮ, ಶಾಖಾ ನಗರ—ಹೀಗೆ ಜನಪದಗಳು ಹದಿನಾಲ್ಕು ಭೇದಗಳನ್ನೊಳಗೊಂಡಿರುವುವು. ಒಂದೊಂದಕ್ಕೂ ವಿಸ್ತೀರ್ಣ ಮುಂತಾದುವುಗಳಲ್ಲಿ ಭೇದವಿರುವುದು. ದುರ್ಗವು ಪಾರ್ವತ, ವನ್ಯ, ಔದಕ, ಚೈರಿಕ, ದೈವಿಕ, ಧಾನ್ವನ, ಕೃತಕ ಗಳೆಂಬುದಾಗಿ ಏಳು ಬಗೆಯಾಗಿರುವುದು. ಸ್ವಸ್ತಿಕ, ಸರ್ವತೋಭದ್ರ ನಂದ್ಯಾವರ್ತಗಳೆಂಬ ಎಂಟು ಭೇದಗಳಿಂದ ಇವುಗಳ ವಿನ್ಯಾಸವನ್ನು ಅಂಗೀ ಕರಿಸಿರುವರು."

ಬಳಿಕ ರಾಜನು "ಭೂಸುರೋತ್ತಮಾ! ತಮ್ಮ ಜನ್ಮವು ಸಾರ್ಥಕ ವಾದುದು. ನನ್ನಂತಹ ಮನುಷ್ಯಕೀಟಗಳು ಅತ್ತಿಯ ಹಣ್ಣಿನೊಳಗಡೆ ಇರುವ ಹುಳುಗಳಂತೆ ಎಷ್ಟು ಮಂದಿ ಹುಟ್ಟಿದರೇನು ಫಲ? ತಮ್ಮ ಸಂದರ್ಶನದಿಂದ ಇಂದು ನಾವು ಆನಂದಭರಿತರಾದೆವು. ತಮ್ಮ ಪಾಂಡಿತ್ಯದ ಒಂದು ಅಂಶವನ್ನಾದರೂ ಜ್ಞಾಪಕಾರ್ಥವಾಗಿ ದಯೆಪಾಲಿಸಿದರೆ ನಾವು ಕೃತಕೃತ್ಯರಾಗುವೆವು. ಈ ಋಣವನ್ನು ಎಷ್ಟು ಜನ್ಮಗಳನ್ನೆತ್ತಿದ್ದರೂ ನಾವು ತೀರಿಸಲಾರೆವು" ಎಂಬುದಾಗಿ ಪ್ರಾರ್ಥಿಸಿದನು.

ಆಗ ವಿಶ್ವಂಭರನು "ಪ್ರಭೋ! ವಿದ್ಯೆಯೆಂಬುದು ಬುದ್ಧಿಯೆಂಬ ತಿನಿಸಿಗೆ ದಿವ್ಯವಾದ ಔಷಧ. ತಮ್ಮಂತಹ ವಿದ್ಯಾಭಿಮಾನಿಗಳಾದ ಪ್ರಭು ವರ್ಯರು ಕಯ್‌ಹಿಡಿದರಲ್ಲವೇ ನಮ್ಮ ವಿದ್ಯಾಬುದ್ಧಿಗಳನ್ನು ಹೊರಪಡಿಸು ವುದಕ್ಕೆ ಅವಕಾಶ ದೊರೆಯುವುದು. ಇಲ್ಲವಾದರೆ ಅರಣ್ಯಚಂದ್ರಿಕೆಯೇ ಸರಿ. ನಾನು ವಿನೋದವಾಗಿ ಕಾಲಕಳೆಯಲು ವಿದ್ಯೆಯನ್ನು ಅಭ್ಯಾಸಮಾಡಿದವ ನಲ್ಲದೆ ಜೀವನಾರ್ಥವಾಗಿ ಇದನ್ನು ಮಾರಿ ಹೊಟ್ಟೆತುಂಬಿಕೊಳ್ಳತಕ್ಕವನಲ್ಲ. ನನಗೆ ಹಣದ ಅವಶ್ಯಕತೆಯೂ ಇಲ್ಲ. ನನ್ನ ಚಾತುರ್ಯವನ್ನೆಲ್ಲ ವೆಚ್ಚ ಗೊಳಿಸಿ, ಅತ್ಯಲ್ಪಕಾಲದಲ್ಲಿಯೇ ಸನ್ನಿಧಾನದಲ್ಲಿ ಕ್ರಿಯಾರೂಪವಾಗಿ ತೋರ್ಪಡಿಸುವೆನು. ಆದರೆ, ಒಂದು ದುರ್ಗಮ ಪ್ರದೇಶದಲ್ಲಿ ಬ್ರಹ್ಮನಿರ್ಮಿತ ವಾದ, ಶಿಲ್ಪಸಾಮ್ರಾಜ್ಯಸರ್ವಸ್ವಕ್ಕೂ ಕಿರೀಟಪ್ರಾಯವಾದ, ದಿವ್ಯಸೌಂದರ್ಯ ದಿಂದೊಪ್ಪುವ ಒಂದು ಮೂರ್ತಿ ಇರುವುದು. ಅದನ್ನು ಹೇಗಾದರೂ ಪಾಡು ಪಟ್ಟು ತಂದು ನನ್ನ ಮನೆಯಲ್ಲಿ ಇರಿಸಿಕೊಳ್ಳಬೇಕೆಂಬುವ ಚಾಪಲವು ಬಹಳ ಕಾಲದಿಂದ ನನ್ನ ಚಿತ್ತವನ್ನು ಆಕ್ರಮಣ ಮಾಡಿರುವುದು. ಆದರೆ ಆ ಪ್ರದೇಶವು ನನಗೆ ಸುಲಭಸಾಧ್ಯವಲ್ಲ. ಈಗ ನನ್ನ ಶಿಲ್ಪವಿದ್ಯಾಪರಿಶ್ರಮವು

ತಮ್ಮ ಮೆಚ್ಚುಗೆಯನ್ನು ಪಡೆಯಿತೆಂದರೆ ಕಾಲಾಂತರದಲ್ಲಿ ತಾವು ನನಗೆ ತಕ್ಕ ಸಹಾಯವನ್ನು ದಯೆಪಾಲಿಸುವುದಾದರೆ ಆ ವಿಗ್ರಹವನ್ನು ತಂದು ಕೊಳ್ಳುವೆನು. ಇದಕ್ಕಿಂತ ನನಗೆ ಪ್ರೇಮಾಸ್ಪದ ವಸ್ತುವೆನ್ನುವುದು ಈ ಜನ್ಮದಲ್ಲಿ, ಈ ಭೂಮಂಡಲದಲ್ಲಿ, ಬೇರೆ ಯಾವುದೂ ಇಲ್ಲ" ಎಂಬುದಾಗಿ ವಿಜ್ಞಾಪಿಸಿದನು

ಅರಸನು "ಭೂಸುರೋತ್ತಮಾ! ನಾನೂ, ನನ್ನ ಪರಿಜನವೂ, ನನ್ನ ಐಶ್ವರ್ಯವೂ, ರಾಜ್ಯಾಧಿಕಾರವೂ ಎಲ್ಲವೂ ತಮ್ಮ ಅಧೀನವಲ್ಲದೆ ಬೇರೆ ವಿಧವಾಗಿ ಭಾವಿಸಬಾರದು. ಪುರುಷವೇಷವನ್ನು ತಳೆದ ಶಾರದೆಯೆಂತಲೇ ತಮ್ಮನ್ನು ಭಾವಿಸಿರುವೆನು ನಾನಾಗಲಿ, ನನ್ನ ಐಶ್ವರ್ಯ ರಾಜ್ಯಾಧಿಕಾರ ಗಳಾಗಲಿ ತಮ್ಮ ಯೋಗ್ಯತೆಯ ಒಂದು ಭಾಗಕ್ಕೆ ಈಡಾಗಬಲ್ಲವೇ ?" ಎಂದು ಹೊಗಳಿ ಶೂದ್ರಕನಿಗೆ ಕರ್ಪೂರ ವೀಳೆಯವನ್ನಿತ್ತು ಮನ್ನಿಸಿ, ಬೀಳ್ಕೊಟ್ಟನು

ಬಳಿಕ ಒಂದು ದಿನ ಶುಭಮುಹೂರ್ತದಲ್ಲಿ ವಿಶ್ವಂಭರನು ಸ್ನಾನಾದಿ ನಿತ್ಯಕೃತ್ಯಗಳನ್ನು ನೆರವೇರಿಸಿ, ದೀಕ್ಷೆಯನ್ನು ಕೈಕೊಂಡು, ಪ್ರಾಸಾದ ನಿರ್ಮಾಣಕರ್ಮವನ್ನು ಕೈಕೊಂಡು, ಪಟ್ಟಣದ ಬಾಹ್ಯೋದ್ಯಾನದಲ್ಲಿ ಒಂದು ವಿಹಾರಮಂಟಪವನ್ನೂ, ಶಿಶಿರಜಲಧಾರೆಗಳಿಂದೊಪ್ಪುವ, ವಸಂತ ವಿಹಾರ ಯೋಗ್ಯವಾದ ಜಲಕ್ರೀಡಾಸರೋವರವನ್ನೂ, ನೃತ್ಯಗೀತಮಂಟಪಗಳನ್ನೂ ನಿರ್ಮಿಸಿದನು. ಆ ತರುವಾಯ ಅಂತಃಪುರದಲ್ಲಿ ಕನ್ಯೆಯರಿಗೂ, ಸಖಿ ಯರಿಗೂ, ರಾಜಭೃತ್ಯರಿಗೂ, ಅಂತಃಪುರವಿಲಾಸಿನಿಯರಿಗೂ, ರಾಜಸ್ತ್ರೀ ಯರಿಗೂ, ಪಟ್ಟರಸಿಗೂ, ಅವರವರ ಅಂತಸ್ತಿಗೆ ತಕ್ಕ ರೀತಿಯಿಂದ ಹದಿ ನೆಂಟು ಬಗೆಯ ಮಹಲುಗಳನ್ನೂ ಜನಗಳ ಕಣ್ಮನಗಳಿಗೆ ಮೋಹಕ ವಾಗಿರುವ ರೀತಿಯಿಂದ ನಿರ್ಮಾಣಗೊಳಿಸಿ, ಸಜೀವಗಳೆಂಬ ಭ್ರಾಂತಿ ಯನ್ನುಂಟುಮಾಡುವ ಚಿತ್ರಪರಂಪರೆಗಳನ್ನು ಬರೆದು, ಒಂದು ಸಂವತ್ಸರ ದೊಳಗಾಗಿ ಅತ್ಯದ್ಭುತವಾದ ರೀತಿಯಿಂದ ಸಿದ್ಧಪಡಿಸಿದನು ಈ ಮೂಲಕ ವಿಶ್ವಂಭರನ ಕೀರ್ತಿಯು ಲೋಕದಲ್ಲೆಲ್ಲ ಹರಡಿತು. ಆ ಮೇಲೆ ಉದ್ಯಾನವನ ದಲ್ಲಿ ಔಪಚ್ಛಂದಕವೆಂಬ ಉಪ್ಪರಿಗೆಯನ್ನು ಕಟ್ಟಿ, ಅದರ ಮೇಲ್ಮಹಡಿಯ ತುದಿಯಲ್ಲಿ ಗಂಧರ್ವದಂಪತಿಗಳ ಪ್ರತಿಮೆಗಳನ್ನು ಬರೆದು, ಅವುಗಳಲ್ಲಿ ಗಂಡು ಪ್ರತಿಮೆಯಲ್ಲಿ, ದಕ್ಷಿಣನಾಯಕತ್ವವನ್ನೂ, ಸ್ತ್ರೀವಿಗ್ರಹದಲ್ಲಿ ರೂಪ

ಲಾವಣ್ಯಾದಿಗಳನ್ನೂ ರಸಭರಿತವಾಗಿರುವಂತೆ ವಿನ್ಯಾಸಮಾಡಿ, ಮರುದಿನ ಪ್ರಾತಃಕಾಲದಲ್ಲಿ ಆ ಸೌಧವನ್ನು ಅರಸನಿಗೆ ತೋರಿ, ಸಂತೋಷಗೊಳಿಸ ಬೇಕೆಂದಿದ್ದನು.

ವಿಶ್ವಂಭರನೆಂಬುವ ಶಿಲ್ಪಿಯು ಮಾಹಿಷ್ಮತಿಯಲ್ಲಿ ದಿವ್ಯಸೌಧಗಳನ್ನು ಶಿಲ್ಪಶಾಸ್ತ್ರೋಕ್ತವಾಗಿ ರಚಿಸಿದ ಸಮಾಚಾರವು ಕ್ರಮೇಣ ಉಜ್ಜಯಿನಿಯಲ್ಲಿಯೂ ಹರಡಿತು. ಇದನ್ನು ಕೇಳಿ, ಚಕೋರಾದಿಗಳು ತತ್ತರಗೊಂಡರು. ಒಡನೆಯೇ ಸಂಘಿಲಕನು ಅಲ್ಲಿಂದ ಶಪಥಮಾಡಿ ಹೊರಟನು. ಇತ್ತ ವಿಶ್ವಂಭರನು ಮರುದಿನ ಬೆಳಗ್ಗೆ ಅರಸನನ್ನು ಕರೆತಂದು, ಆ ಉಪ್ಪರಿಗೆಯ ರಚನಾವಿಶೇಷಗಳನ್ನೆಲ್ಲ ತೋರಿಸಿ ಬಣ್ಣಿಸುತ್ತ, ಕ್ರಮವಾಗಿ ಮೇಲ್ಮಹಡಿಗೆ ಬಂದನು. ಆಗ, ಗಂಧರ್ವದಂಪತಿಗಳಲ್ಲಿ ಪುರುಷಪ್ರತಿಮೆಯ ಕಣ್ಣಿನಲ್ಲಿ ಹೂವು ಬಿದ್ದಂತೆ ಕಾಣಿಸಿತು ಅಚ್ಚರಿಗೊಂಡವನಾಗಿ ಸುತ್ತಲೂ ನೋಡುವಲ್ಲಿ, ಅಲ್ಲಿ ಒಂದು ಬಾಣವು ಕಂಡುಬಂದಿತು. ಅದನ್ನು ತೆಗೆದುಕೊಂಡು ನೋಡುವಲ್ಲಿ ಸಂಘಿಲಕ ಎಂಬ ಅಕ್ಷರಗಳು ಕಾಣಬಂದುವು ಆಹಾ! ಅಸೂಯಾಪಿಶಾಚವೇ! ಇಲ್ಲಿಯೂ ನನ್ನನ್ನು ಬಿಡಲೊಲ್ಲೆಯಾ? ಬುದ್ಧಮತಾವಲಂಬಿಯಾದ ಇವನಿಗೆ ಇಷ್ಟೊಂದು ಈರ್ಷ್ಯೆಯೇ? ಒಳ್ಳೆಯದು ಇನ್ನು ನಿಮ್ಮ ನಿರ್ಮೂಲನೋಪಾಯವನ್ನು ಕುರಿತು ದೂರವಾಗಿ ಯೋಚಿಸಿದಲ್ಲದೆ ವಿಧಿಯಿಲ್ಲ ಎಂಬುದಾಗಿ ಮನಸ್ಸಿನಲ್ಲಿಯೇ ಯೋಚಿಸಿ, ಯಾರಿಗೂ ತಿಳಿಯದಂತೆ, ಆ ವಿಗ್ರಹದ ಕಣ್ಣನ್ನು ಸರಿಮಾಡಿ, ಅರಸನಿಗೂ ಪರಿವಾರಕ್ಕೂ ಆಶ್ಚರ್ಯಾನಂದಗಳನ್ನುಂಟುಮಾಡಿ, ಆ ದೇಶದ ಜನರ ಮೆಚ್ಚುಗೆಗೆ ಪಾತ್ರನಾದನು.

ಇತ್ತ ಉಜ್ಜಯಿನಿಯಲ್ಲಿ ಶಕಾರನಿಗೂ ವಿನಯವತಿಗೂ ಪಾಣಿಗ್ರಹಣ ಮಹೋತ್ಸವವು ನಿಶ್ಚಿತವಾಯಿತು ಭೂಮಂಡಲದ ಸಕಲ ರಾಜಾಧಿರಾಜರಿಗೂ ಆಹ್ವಾನಪತ್ರಗಳನ್ನು ಕಳುಹಿದರು. ಮಾಹಿಷ್ಮತಿಯ ಅರಸನಿಗೆ ಮಾತ್ರ ಆಹ್ವಾನಪತ್ರವು ಬರಲಿಲ್ಲ. ಇಷ್ಟರಲ್ಲಿ ಒಂದು ದಿನ ಮಾಹಿಷ್ಮತೀಪತಿಯು ಒಡ್ಡೋಲಗದಲ್ಲಿದ್ದಾಗ, "ಮಂತ್ರಿವರ್ಯಾ! ಉಜ್ಜಯಿನೀಶನು ನಮ್ಮಲ್ಲಿ ದ್ವೇಷಭಾವವನ್ನು ತಳೆದಿರುವನು. ಕೆಲವು ದಿನಗಳ ಹಿಂದೆ ಉಜ್ಜಯಿನಿಯಿಂದ ಒಬ್ಬ ಬೌದ್ಧದೂತನು ಬಂದನು. ಉಚಿತರೀತಿಯಿಂದ ಸತ್ಕಾರಗಳು ನಡೆದ ಕೂಡಲೇ ಆ ದೂತನು ತಾನು ತಂದಿದ್ದ ಲೇಖವನ್ನು

ಒಪ್ಪಿಸಿದನು. ಅದನ್ನು ಬಿಚ್ಚಿ ಓದಿಸುವಲ್ಲಿ, ಉಜ್ಜಯಿನೀ ದೇಶಾಧಿಪನ ತಂಗಿಯಾದ ವಿನಯವತಿಗೆ ಪಾಣಿಗ್ರಹಣಮಹೋತ್ಸವವು ನಡೆಯುವುದು. ಪಟ್ಟಣವನ್ನೂ ಅರಮನೆಗಳನ್ನೂ ಸಿಂಗರಿಸಲು, ಮಾಹಿಷ್ಮತಿಯಲ್ಲಿರುವ ವಿಶ್ವಂಭರನೆಂಬ ಶಿಲ್ಪಿವರನನ್ನು ಕೆಲ ಕಾಲ ಅಲ್ಲಿಗೆ ಕಳುಹಿಸಿಕೊಡ ಬೇಕೆಂಬುದಾಗಿ ಬರೆದಿದ್ದಿತು. ಅದನ್ನು ಕೇಳಿ ನಾನು 'ನಮ್ಮಲ್ಲಿರುವ ವಿಶ್ವಂಭರನೆಂಬ ಭೂಸುರೋತ್ತಮನು ನಮ್ಮ ಪ್ರೇಷ್ಯ ವರ್ಗಕ್ಕೆ ಸೇರಿದವ ನಲ್ಲ. ಆತನು ಅಭ್ಯಾಗತನಾಗಿ, ತನಗೆ ಶಿಲ್ಪಕಲೆಯಲ್ಲಿ ಸಹಜವಾಗಿರುವ ಅಭಿರುಚಿಯಿಂದ ಮಾತ್ರವೇ ನಮ್ಮಲ್ಲಿ ಕೆಲವು ಶಿಲ್ಪಚಾತುರ್ಯಗಳನ್ನು ನಿರ್ಮಿ ಸಿದನಲ್ಲದೆ, ಆತನ ಕಲಾಚಾತುರ್ಯಗಳಿಗೆ ಚತುಸ್ಸಮುದ್ರಮಧ್ಯವರ್ತಿನಿ ಯಾದ ಭೂಮಂಡಲವನ್ನೇ ಪಾರಿತೋಷಿಕವಾಗಿ ಕೊಟ್ಟರೂ ಸರಿಯೆನಿ ಸದು. ಆತನು ನಮ್ಮ ಆಶ್ರಿತನೂ ಅಲ್ಲ. ಸಂಬಳಸಾರಿಗೆಗಳಿಂದ ನಿರ್ಬಂಧಕ್ಕೆ ಒಳಗಾಗತಕ್ಕವನೂ ಅಲ್ಲ' ಎಂಬ ಪ್ರತಿಲೇಖವನ್ನು ಬರೆದು ಬೀಳ್ಕೊಟ್ಟೆನು. ಈ ಅಲ್ಪಕಾರ್ಯದಿಂದ ಉಜ್ಜಯಿನೀಶನು ನಮ್ಮೊಡನೆ ಯುದ್ಧ ಮಾಡುವುದಾಗಿ ಸಮಾಚಾರವಿದೆ. ಇಷ್ಟು ಮಾತ್ರದಿಂದಲೇ ರಾಜಮರ್ಯಾದೆ ಯನ್ನು ಅತಿಕ್ರಮಿಸುವುದು ತರವಲ್ಲ" ಎಂಬುದಾಗಿ ಹೇಳಿದನು.

ಅದಕ್ಕೆ ಮಂತ್ರಿಗಳು "ದೇವಾ ! ಶೂರಸೇನದೇಶಾಧಿಪನು ಅವರಿಗೆ ಜನ್ಮಶತ್ರುವು. ಆತನು ನಮ್ಮೊಂದಿಗೆ ಮೈತ್ರಿಯಿಂದಿರುವನು. ಇದನ್ನು ಸಹಿಸ ಲಾರದೆ ಹೀಗೆ ಮಾಡಿರಬಹುದು. ಕಾಲಬಂದರೆ ಎಲ್ಲವೂ ಸರಿಹೋಗು ವುದು. ಈಗ ಪ್ರಭುವು ಈ ವಿಷಯಕ್ಕಾಗಿ ಮರುಗ ಕೆಲಸವಿಲ್ಲ" ಎಂದು ಬಿನ್ನಯಿಸಿದರು. ಅಂದಿಗೆ ಆ ಸಭೆಯು ಮುಗಿಯಿತು.

ಆ ದಿನವೇ ಸಾಯಂಕಾಲದಲ್ಲಿ ಮಾಹಿಷ್ಮತೀಶನು ಉಪಸ್ಥಾನ ಮಂದಿ ರದಲ್ಲಿರುವಾಗ ವಿಶ್ವಂಭರನು ಪ್ರತೀಹಾರಿಯೊಂದಿಗೆ ರಾಜಸನ್ನಿಧಿಯನ್ನೈದಿ, ಸತ್ಕೃತನಾಗಿ ಉಚಿತಾಸನದಲ್ಲಿ ಕುಳಿತು, ವಿವಿಧ ವಿಷಯಗಳನ್ನು ಕುರಿತು ಮಾತನಾಡುತ್ತ ಸಂದರ್ಭವಶದಿಂದ "ಪ್ರಭೋ ! ಉಜ್ಜಯಿನಿಯಲ್ಲಿ ಒಂದು ದಿವ್ಯಸುಂದರಮೂರ್ತಿ ಇರುವುದೆಂತಲೂ ಅದನ್ನು ನಾನು ತೆಗೆದುಕೊಂಡು ಬರಬೇಕೆಂತಲೂ ಹಿಂದೆಯೇ ವಿಜ್ಞಾಪಿಸಿರುವೆನಷ್ಟೆ! ಈಗ ಆ ವಿಗ್ರಹವನ್ನು ಇಲ್ಲಿಗೆ ತರಬೇಕೆಂದಿರುವೆನು. ಆ ಮೂರ್ತಿಯು ನನ್ನ ಶಿಲ್ಪಕಲೆಗೆ ಅಧಿ ದೇವತೆಯಂತಿರುವುದು. ಇದನ್ನು ತರುವುದಕ್ಕೆ ಸ್ವಲ್ಪ ಪರಿವಾರವು ಅವಶ್ಯಕ ವಾಗಿರುವುದು" ಎಂದನು.

ಅರಸನು "ಭೂಸುರೋತ್ತಮಾ! ಇದಕ್ಕಾಗಿ ಇಷ್ಟೊಂದು ಕೇಳಬೇಕೇ? ತಮ್ಮ ಮಹೋಪಕಾರಕ್ಕೆ ನಾನೂ ನನ್ನ ಪರಿವಾರವೂ ಯಾವಜ್ಜೀವವೂ ತಮ್ಮಲ್ಲಿ ಊಳಿಗಮಾಡಿದರೂ ತೀರಲಾರದು. ಆವಶ್ಯಕವಾಗಿಯೂ ತಮಗೆ ಬೇಕಾದಷ್ಟು ಪರಿವಾರವನ್ನು ತೆಗೆದುಕೊಂಡು ಹೊರಡಬಹುದು. ಒಂದು ವೇಳೆ ನಾನೇ ಬೇಕಾದರೂ ತಮ್ಮ ಸಂಗಡ ಬಂದು ಆ ಮೂರ್ತಿಯನ್ನು ತಂದು ತಮ್ಮ ವಶದಲ್ಲಿ ಒಪ್ಪಿಸಬೇಕಾದರೂ ಸಿದ್ಧನಾಗಿರುವೆನು" ಎಂಬುದಾಗಿ ಹೇಳಿ, ಒಡನೆಯೇ ಸೇನಾಪತಿಯನ್ನು ಕರೆಯಿಸಿ, "ಇವರಿಗೆ ಬೇಕಾದಷ್ಟು ಸಿಬ್ಬಂದಿಯನ್ನು ಕೊಟ್ಟು, ಇವರ ಆಣತಿಯನ್ನು ನನ್ನ ಅಪ್ಪಣೆಯಂತೆಯೇ ಮನ್ನಿಸತಕ್ಕದು" ಎಂದು ಕಟ್ಟಳೆಮಾಡಿ, ವಿಶ್ವಂಭರನನ್ನು ಕುರಿತು, "ಮಹಾನುಭಾವಾ! ನಿಮ್ಮ ಅಂತರಂಗವು ಸಂತಸಗೊಂಡಿತಾದರೆ ನನ್ನ ಜೀವಿತವು ಸಫಲವಾಗುವುದು ತಮಗೆ ನಾನು ಯಾವ ರೀತಿಯಿಂದ ಸಹಾಯಮಾಡಬಲ್ಲೆನು? ಭಗವಂತನು ಸರ್ವವಿಧದಲ್ಲಿಯೂ ತಮ್ಮ ಇಷ್ಟಾರ್ಥವನ್ನು ಈಡೇರಿಸಲೆಂದು ಪ್ರಾರ್ಥಿಸುವೆನು. ಇದಕ್ಕಿಂತ ಅತಿಶಯವಾಗಿ ಮಾತುಗಳಿಂದ ನನ್ನ ಕೃತಜ್ಞತೆಯನ್ನು ಹೊರಪಡಿಸಲಾರೆನು" ಎಂದು ಸಾಷ್ಟಾಂಗವೆರಗಿ ಮುಗಿಸಿದನು.

ಆಗ ಶೂದ್ರಕನು "ರಾಜಕುಲಲಲಾಮಾ! ನಿನಗಿಂತ ನನಗೆ ಆಪ್ತರೂ ಮಿತ್ರರೂ ಯಾರಿರುವರು? ನಿನ್ನ ಮಹೋಪಕೃತಿಯನ್ನು ನನ್ನ ಯಾವಜ್ಜೀವವೂ ಮರೆಯಲಾರೆನು. ಈಗ ನಾನು ತರಬೇಕೆಂದಿರುವ ಮೂರ್ತಿಯು ಕೈವಶವಾಗಿ ನನ್ನ ಮನೆಯನ್ನು ಸೇರಿತೆಂದರೆ ನಾನೇ ಧನ್ಯನು" ಎಂಬುದಾಗಿ ಹೇಳಿ ಬೀಳ್ಕೊಂಡು, ಸೇನಾಪತಿಗೆ ತಕ್ಕ ಸಲಹೆಗಳನ್ನು ಕೊಟ್ಟು, ಪ್ರಿಯಮಿತ್ರನಾದ ಬಂಧುದತ್ತನೊಂದಿಗೆ ಪುರದ ಬಾಹ್ಯೋದ್ಯಾನವನ್ನು ಸೇರಿ, ಸಂಧ್ಯಾಕಾಲದ ರಾಮಣೀಯಕತೆಯನ್ನು ಶೂನ್ಯದೃಷ್ಟಿಯಿಂದ ನೋಡುತ್ತ, ಕಾಲಹರಣ ಮಾಡುತ್ತಿದ್ದನು.

ಅಷ್ಟರಲ್ಲಿ ಸುಂದರನಾದ ಯುವಕನೊಬ್ಬನು ಒಂದು ಪತ್ರವನ್ನು ತಂದು, ಶೂದ್ರಕನಿಗೆ ನಮಸ್ಕರಿಸಿ "ದೇವಾ! ಚಿತ್ತಯಿಸಬೇಕು" ಎನಲು, ಅದನ್ನು ತೆಗೆದು ಬಿಚ್ಚಿ ಓದುವಲ್ಲಿ—

"ಯಜಮಾನನೇ ವಿವೇಕಶೂನ್ಯನಾಗಿ ಯಜ್ಞೀಯವಾದ ಹವಿಸ್ಸನ್ನು ನಾಯಿಯ ಪಾಲು ಮಾಡಬೇಕೆಂದಿರುವನು. ಓ ಬ್ರಾಹ್ಮಣಶ್ರೇಷ್ಠನೇ!

ನೀನು ಬೇಗನೆ ಇಲ್ಲಿಗೆ ಬಂದು, ಯಜಮಾನನಿಗೆ ತಕ್ಕ ರೀತಿಯಿಂದ ಬುದ್ಧಿ ಗಲಿಸಿ, ಧರ್ಮವನ್ನು ನೆಲೆಗೊಳಿಸಿ ಲೋಕದಲ್ಲಿ ಧರ್ಮಸಂಸ್ಥಾಪಕನೆಂಬ ಬಿರುದನ್ನು ಪಡೆದು ಸಲಹಬೇಕು" ಎಂಬುದಾಗಿ ಬರೆದಿದ್ದಿತು. ಆಹಾ! ಏನೀಕಾಲವೈಪರೀತ್ಯವು! ಅನಂಗಲೇಖೆಯ ದುರುದುಂಬಿತನವು ಇಷ್ಟರ ಮಟ್ಟಿಗೆ ಪರಿಣಮಿಸಿತೇ? ಇನ್ನು ಉದಾಸೀನನಾಗಿರುವುದು ಎಷ್ಟು ಮಾತ್ರಕ್ಕೂ ತರವಲ್ಲವೆಂಬುದಾಗಿ ಮನಸ್ಸಿನಲ್ಲಿಯೇ ಯೋಚಿಸಿ, "ಧರ್ಮ ಸಂಸ್ಥಾಪನೆಗಾಗಿಯೇ ಜನ್ಮವನ್ನೆತ್ತಿರುವೆನು. ಧರ್ಮಕಾರ್ಯದ ಸಲುವಾಗಿ ಕರೆದರೆ ಬಾರದಿರುವೆನೇ? ಭಗವತಿಯಾದ ಮಹಾಕಾಳಿಯು ನಿನಗೆ ಮಂಗಳವನ್ನು ದಯೆಪಾಲಿಸುವಳು" ಎಂಬುದಾಗಿ ಪ್ರತ್ಯುತ್ತರವನ್ನು ಬರೆದು, "ಎಲೈ ತರಳನೆ! ಇದನ್ನು ತೆಗೆದುಕೊಂಡು ಹೋಗಿ ನಿನಗ ಪತ್ರವನ್ನು ಕೊಟ್ಟವರಿಗೆ ಮುಟ್ಟಿಸು" ಎಂಬುದಾಗಿ ಅವನನ್ನು ಬೀಳ್ಕೊಟ್ಟು, ಬಂಧುದತ್ತನಿಗೆ ಅದರ ವಿವರವನ್ನೆಲ್ಲ ತಿಳುಹಿ, ಅವನನ್ನು ಬೀಳ್ಕೊಂಡು, ತನ್ನ ಬಿಡದಿಯನ್ನು ಸೇರಿ, ಭೋಜನಾದಿಗಳನ್ನು ನೆರವೇರಿಸಿ, ಪ್ರಯಾಣ ಸನ್ನಾಹಗಳನ್ನು ಮಾಡಿಕೊಂಡು ಹೊರಟುಬರುತ್ತಿರುವಲ್ಲಿ, ಮಂತ್ರಿಯೂ ಆತನ ಪಾಲಿತಪುತ್ರಿಯಾದ ಚಂದ್ರರೇಖೆಯೂ ಇದಿರಾಗಿ ಬಂದರು. ಅವ ರಿಬ್ಬರು ಆಗ ತಾನೇ ನಾಟಕವಿನೋದವನ್ನು ನೋಡಿ ಹಿಂದಿರುಗುತ್ತಿರು ವರೆಂಬ ವಿಷಯವನ್ನು ಅವರಿಂದ ಕೇಳಿ ತಿಳಿದು ಮಂತ್ರಿವರ್ಯನನ್ನು ಕುರಿತು 'ಆರ್ಯಾ! ನಾನು ಕಾರ್ಯಗೌರವದಿಂದ ಈ ಪಟ್ಟಣವನ್ನು ಬಿಟ್ಟು, ಹೊರಟಿರು ವೆನು' ಎಂಬುದಾಗಿ ವಿಜ್ಞಾಪಿಸಿದನು. ಆತನು ಚಿರಪರಿಚಿತನಾದ ವಿಶ್ವಂಭರನನ್ನು ಅಗಲಲೊಲ್ಲದ ಚಿಂತಾವ್ಯಗ್ರನಾಗಿ ಮಾತನಾಡುವುದಕ್ಕೆ ಬಾಯಿಲ್ಲದೆ ಮೌನದಿಂದಿರಲು, ಚಂದ್ರರೇಖೆಯು ವಿಶ್ವಂಭರನ ಅಡಿಗೆರಗಿ "ನಾನು ತಮ್ಮ ಅನುಗ್ರಹವನ್ನು ಬಯಸಿರುವೆನು" ಎನ್ನುತ್ತಿರುವಷ್ಟ ರಲ್ಲಿಯೇ, ನಳಿನೀಕಾಂಡಸದೃಶವಾದ ಆಕೆಯ ತೋಳನ್ನು ಹಿಡಿದು, ಮೇಲಕ್ಕೆ ಎತ್ತಿ 'ಎಲ್ಲರನ್ನೂ ಅವರವರ ಇಷ್ಟಾರ್ಥಸಿದ್ಧಿಯಿಂದ ಕಾಪಾಡು ವವನು ಸರ್ವಶಕ್ತನಾದ ಭಗವಂತನಲ್ಲವೇ? ಯಾವುದೂ ಮನುಷ್ಯರ ಅಧೀನವಲ್ಲ' ಎನ್ನುವಾಗ ದೇವಾಲಯದಲ್ಲಿ ಪ್ರಥಮಯಾಮದ ಮಂಗಳಾ ರತಿಯ ಮಂಗಳವಾದ್ಯಗಳು ಮೊಳಗಿದುವು ಶೂದ್ರಕನ ದೇಹವೆಲ್ಲವೂ ಪುಳಕಿತವಾಯಿತು. ತಕ್ಕ ಮಾತುಗಳಿಂದ ಅವರಿಬ್ಬರನ್ನೂ ಬೀಳ್ಕೊಟ್ಟು

ತನ್ನ ದಿವ್ಯಾಶ್ವವನ್ನೇರಿ ಹೊರಡುವಷ್ಟರಲ್ಲಿ ಪರಿವಾರದವರು ಸಿದ್ಧರಾಗಿ ಬಂದು ಸೇರಿದರು. ಬಳಿಕ ವಿಶ್ವಂಭರನು ಅವರಿಂದ ಮಾನಿತನಾಗಿ, ಕರ್ತವ್ಯವೇನೆಂಬುದನ್ನು ತಿಳುಹಿ, ಉಜ್ಜಯಿನೀನಗರಾಭಿಮುಖವಾಗಿ ಅವರೊಂದಿಗೆ ಪ್ರಯಾಣಮಾಡಿ, ವಿಂಧ್ಯಾರಣ್ಯವನ್ನು ದಾಟಿ, ಉಜ್ಜಯಿನಿಯ ಎಲ್ಲೆಯನ್ನು ಸೇರಿದನು.

ಕಿರಾತರಾಜನೂ ಅಪರಿಮಿತವಾದ ಗೂಢಸೈನ್ಯದೊಂದಿಗೆ ಬಂದು ಸೇರಿದನು. ಕಿರಾತಾಧಿಪನ ಉತ್ಸಾಹವನ್ನು ಕಂಡು ಶೂದ್ರಕನು ' ಮಿತ್ರವರ್ಯಾ! ಎಂಬುದಾಗಿ ಮಾತನಾಡಬೇಕೆಂದಿರುವಲ್ಲಿ, ಬೇಡರ ನಾಯಕನು "ದೇವಾ! ವಿಂಧ್ಯವಾಸಿನಿಯ ಅಣತಿಯಂತೆ ನನ್ನ ಸೇನೆಯನ್ನೆಲ್ಲ ನಿನ್ನ ಅಂಕೆಗೆ ಒಪ್ಪಿಸಿರುವೆನು. ಸಿಂಹದಮನನೆಂಬುವನು ಇವರ ಮುಂದಾಳು. ಇವನು ಬಗಬಗೆಯ ವ್ಯೂಹರಚನದಲ್ಲಿಯೂ, ಮೂವತ್ತೆರಡು ಬಗೆಯ ಸೇನಾಪ್ರಚಾರಗಳಲ್ಲಿಯೂ ಆನೆ, ತೇರು, ಕುದುರೆ ಕಾಲಾಳು—ಇವನ್ನು ಸಮಯಕ್ಕೆ ತಕ್ಕಂತೆ ನಿಲ್ಲಿಸಿ ಹೋರಾಡುವುದರಲ್ಲಿಯೂ ಮಹಾನಿಪುಣನು. ಇವನನ್ನು ತಮ್ಮ ಮುಖ್ಯದೇಹರಕ್ಷಕನನ್ನಾಗಿಟ್ಟು, ನನ್ನನ್ನೂ ತಮ್ಮ ಮಿತ್ರಕೋಟಿಯಲ್ಲಿಒಬ್ಬನೆಂಬುದಾಗಿ ಭಾವಿಸಿದರೆ ಮಹೋಪಕಾರ' ಎಂಬುದಾಗಿ ಕೈಮುಗಿದು ಬೀಳ್ಕೊಂಡು ತನ್ನ ಪಾಳೆಯಕ್ಕೆ ತೆರಳಿದನು ಬಳಿಕ ಶೂದ್ರಕನು ಆ ಸೇನಾಪತಿಯನ್ನು ಹತ್ತಿರ ಕರೆದು, ಮಿತ್ರ ಸಿಂಹದಮನಾ! ನಿನ್ನ ಸೈನ್ಯವನ್ನು ಹತ್ತು ಭಾಗವಾಗಿ ಏರ್ಪಡಿಸಿ ಬೇರೆಬೇರೆ ದೇಶದವರ ವೇಷಗಳನ್ನು ಧರಿಸುವಂತ ಹೇಳಿ, ಮಹಾಕಾಳೇಶ್ವರ ದೇವಾಲಾಯದ ಪ್ರಾಕಾರದಲ್ಲಿ ಒಂದು ದಳವನ್ನೂ ಗರ್ಭಗುಡಿಯ ಸುತ್ತಲು ಒಂದು ಪಡೆಯನ್ನೂ, ಮತ್ತೊಂದು ಭಾಗವನ್ನು ದೇವೀಮಂದಿರಕ್ಕೆ ಇದಿರಾಗಿಯೂ ನಿಲ್ಲುವಂತೆ ಕಟ್ಟಳೆ ಇಡು. ನಾಲ್ಕು ಭಾಗಗಳನ್ನು ಉಜ್ಜಯಿನಿಯ ನಾಲ್ಕು ಹೆಬ್ಬಾಗಿಲುಗಳಲ್ಲಿಯೂ ಅಲ್ಲಲ್ಲಿ ನಿಲ್ಲಿಸು. ಒಂದು ಭಾಗವನ್ನು ಅರಮನೆಯ ಗೋಪುರದ ಬಳಿ ಇರುವಂತೆ ಹೇಳು, ಒಂದು ಭಾಗವನ್ನು ಪಟ್ಟಣದ ಕಿಬ್ಬಾಗಿಲ ಬಳಿ ಇರಿಸು. ಮಿಕ್ಕ ಭಾಗವು ನನ್ನ ಸಂಗಡಲೇ ಇರಲಿ. ಇವರಲ್ಲಿ ಯಾರೊಬ್ಬರೂ ಸೈನಿಕರಂತ ಇತರರ ಕಣ್ಣಿಗೆ ಕಾಣಬಾರದು. ವಿವಾಹ ವೈಭವವನ್ನು ನೋಡುವುದಕ್ಕೆ ಬಂದವರಂತೆಯೇ ತೋರಬೇಕು. ಯಾರೊಬ್ಬರೂ ತಮ್ಮ ಆಯುಧಗಳನ್ನು ಹೊರಗೆ ತೋರಬಾರದು.

ಯಾರಾದರೂ ಪ್ರಶ್ನೆಮಾಡಿದರೂ, ಸ್ವಲ್ಪವಾದರೂ ಸಂದೇಹಕ್ಕೆ ಎಡೆಗುಡದಂತೆ ಜಾಗರೂಕರಾಗಿರತಕ್ಕುದು. ಸಮಯ ಬಂದ ಕೂಡಲೇ ಅವರವರ ಸಾಹಸಗಳನ್ನು ತೋರಬೇಕು. ಮಾಹಿಷ್ಮತೀ ನಗರದ ಸೇನೆಯವರನ್ನು ತಮ್ಮ ಪ್ರತಿಕಕ್ಷಿಗಳೆಂದು ಭಾವಿಸಿ ಇದಿರಿಸದಂತೆ ನೋಡಿಕೊಳ್ಳಬೇಕು. ಇನ್ನು ಮಿಕ್ಕ ವಿಷಯಗಳನ್ನು ನೀನು ಮಾತ್ರವೇ ಆಗಾಗ್ಗೆ ನನ್ನಲ್ಲಿ ಬಂದು ತಿಳಿದುಕೊಳ್ಳಬಹುದು" ಎಂಬುದಾಗಿ ಸೂಚಿಸಿದನು.

ಇದೆಲ್ಲವನ್ನು ಕೇಳಿ ಸಿಂಹದಮನನು ತಲೆಬಾಗಿ ಕಯ್ಮುಗಿದು ತನ್ನ ಪರಿವಾರದೊಂದಿಗೆ ತೆರಳಿದನು. ಬಳಿಕ ಶೂದ್ರಕನು ತನ್ನ ಸೇನೆಯೊಡನೆ ಪ್ರಯಾಣಮಾಡಿ, ಉಜ್ಜಯಿನಿಯ ಹೊರಗಡೆ ಸಿಪ್ರಾ ನದಿಯ ತೀರವನ್ನು ಮರು ದಿನ ಅಸ್ತಮಯ ಸಮಯಕ್ಕೆ ಸೇರಿದನು. ಬಳಿಕ ಮಾಹಿಷ್ಮತಿಯ ಸೇನಾಪತಿಯನ್ನು ಕರೆದು "ನೀನು ಉಜ್ಜಯಿನಿಯನ್ನು ಹೊಕ್ಕು ನಿನ್ನ ಸೈನಿಕರಲ್ಲಿ ಕೆಲವರು ನಟರಂತೆಯೂ, ಹಲಬರು ವಿದೂಷಕರ ಹಾಗೆಯೂ ಇತರರು ದೊಂಬರ ರೀತಿಯಲ್ಲಿಯೂ, ಪಲವರು ಬೈರಾಗಿಗಳಂತೆಯೂ, ಮಿಕ್ಕವರು ಗುರುಶಿಷ್ಯರಂತೆಯೂ, ಮಾವುತರಂತೆಯೂ, ಸಾಮುದ್ರಿಕರಂತೆಯೂ, ಜ್ಯೋತಿಷಿಕರಂತೆಯೂ ಅಲ್ಲಲ್ಲಿ ಸತ್ರಗಳಲ್ಲಿಯೂ, ಅಂಗಡಿಬೀದಿಗಳಲ್ಲಿಯೂ, ಮನೆಗಳ ಕೈಸಾಲೆಗಳಲ್ಲಿಯೂ ಬಿಡಾರಮಾಡಿಕೊಂಡು ಹಗಲೆಲ್ಲಾ ಊರುಸುತ್ತಿ ಅಲೆಯುತ್ತ, ಗೂಢಚಾರರಿಗೆ ಸ್ವಲ್ಪವೂ ಸಂದೇಹವುಂಟಾಗದಂತೆ ನಿಯಮಿಸು ಈ ನಕಾಶೆಯು ನಿನ್ನಲ್ಲಿಯೇ ಜ್ಯೋಪಾನವಾಗಿರಲಿ. ಸಮಯ ಬಂದಾಗ ಈ ಚಿತ್ರಪಠದ ಸಹಾಯದಿಂದ ನೀನು ನನ್ನಲ್ಲಿಗೆ ಬರಬಹುದು" ಎಂಬುದಾಗಿ ಹೇಳಿ ಅವನನ್ನು ಬೀಳ್ಕೊಟ್ಟು ತಾನು ದೀವಿಗೆಯ ಸಹಾಯದಿಂದ ಮಿಕ್ಕ ಪರಿವಾರದೊಂದಿಗೆ ಸುರಂಗವನ್ನು ಹೊಕ್ಕು, ತನ್ನ ಹಿಂಬಲದವರನ್ನು ಕುರಿತು "ನೀವೆಲ್ಲರೂ ಇಲ್ಲಿ ಆಯುಧಪಾಣಿಗಳಾಗಿ ಜಾಗರೂಕರಾಗಿರಬೇಕು. ನಾನು ದೇವೀಮಂದಿರದ ಗೂಢದ್ವಾರವನ್ನು ತೆರೆದೊಡನೆಯೇ ನೀವೆಲ್ಲರೂ ನುಗ್ಗಿ ನಮ್ಮ ಶತ್ರುಗಳನ್ನು ಇದಿರಿಸಬೇಕಾಗುವುದು. ಮಾಹಿಷ್ಮತಿಯವರನ್ನು ಹಗೆಗಳೆಂದು ತಿಳಿದು ಇದಿರಿಸದಂತೆ ಜಾಗರೂಕರಾಗಿರಬೇಕು" ಎಂಬುದಾಗಿ ನಿಯಮಿಸಿ, ಸ್ವಲ್ಪ ಹೊತ್ತು ವಿಶ್ರಮಿಸಿಕೊಂಡ ಬಳಿಕ, ಪಟ್ಟಣದ ವಿದ್ಯಮಾನಗಳನ್ನೂ ಕಿರಾತಸೇನೆಯವರ ನಡೆವಳಿಯನ್ನೂ ತಿಳಿಯಲು ಬೈರಾಗಿಯ ವೇಷದಿಂದ ಏಕಾಕಿಯಾಗಿ ಅಲ್ಲಿಂದ ಹೊರಟನು

ಇಂತು ಶೂದ್ರಕನು ಸಕಲ ಸನ್ನಾಹಗಳೊಂದಿಗೆ ಬಂದಿರುವ ಸಂಗತಿಯು ಅರಸನಿಗೆ ತಿಳಿಯಲಿಲ್ಲ. ಅನಂಗಲೇಖೆಯು ಅರಸನನ್ನು ಹೇಗೋ ಒಡಂಬಡಿಸಿ, ವಿನಯವತಿಯನ್ನು ತನ್ನ ಸೋದರನಿಗೆ ಪಾಣಿ ಗ್ರಹಣಮಾಡಿಕೊಟ್ಟಲ್ಲಿ, ಸ್ವಯಂವರವನ್ನು ಏರ್ಪಡಿಸಬೇಕಾದ ಆವಶ್ಯಕತೆ ಯಿಲ್ಲವೆಂತಲೂ, ಆ ಮೂಲಕ ಸಂಸ್ಥಾನಕ್ಕೆ ವಿಶೇಷವಾದ ಆದಾಯವಾಗು ವುದೆಂತಲೂ ಮಂತ್ರಿಯೇ ಮೊದಲಾದ ಪ್ರಮುಖರನ್ನು ಸಮ್ಮತಿಗೊಳಿಸಿ ವಿವಾಹಮಹೋತ್ಸವಕ್ಕೆ ಬೇಕಾದ ಸಲಕರಣೆಗಳನ್ನೆಲ್ಲ ಹವಣಿಸುವಂತೆ ನೇಮಿಸಿದಳು. ಅರಸನು ಚಕೋರನ ಮೂಲಕ ಸಕಲ ಭೂಪಾಲರಿಗೂ ಶುಭರೇಖೆಗಳನ್ನು ಕಳುಹಿಸಿ, ಮಿಕ್ಕ ಬಂಧುಬಳಗದವರನ್ನು ಆಪ್ತೇಷ್ಟ ರನ್ನೂ ಪುರೋಹಿತರ ಮೂಲಕವಾಗಿ ಕರೆಯುಕಳುಹಿ, ಬಂದವರಿಗೆಲ್ಲ ತಕ್ಕ ರೀತಿಯಿಂದ ಬಿಡದಿಗಳನ್ನು ಏರ್ಪಡಿಸಿದನು. ಈ ಸಮಯಕ್ಕೆ ಸರಿಯಾಗಿ ಸಂಘಿಲಕನು ಸಕಲ ದೇಶಸಂಚಾರವನ್ನು ಮುಗಿಸಿ, ಉಜ್ಜ ಯಿನಿಯನ್ನು ಸೇರಿ, ಮಾಹಿಷ್ಮತೀ ನಗರಿಯಲ್ಲಿ ಶೂದ್ರಕನು ಶಿಲ್ಪವೃತ್ತಿ ಯನ್ನು ಕೈಕೊಂಡು ಪ್ರಸಿದ್ಧಿಪಡೆದಿರುವುದಾಗಿಯೂ, ತಾನು ಅವನಿಗೆ ಮಾನಭಂಗವನ್ನು ಮಾಡಿಬಂದಿರುವುದಾಗಿಯೂ ಅರಸನ ಸನ್ನಿಧಿಯಲ್ಲಿ ವಿಜ್ಞಾಪಿಸಿದನು. ಮಾಹಿಷ್ಮತಿಯ ಅರಸನಿಗೆ ಆಹ್ವಾನಪತ್ರವನ್ನು ಕಳುಹಿ ದಲ್ಲಿ ಆತನೊಂದಿಗೆ ಶೂದ್ರಕನು ತಪ್ಪದೆ ಬರುವನೆಂತಲೂ, ಅವನು ಬಂದಲ್ಲಿ ಮಂಗಳಮಹೋತ್ಸವಕ್ಕೆ ಬಗೆಬಗೆಯಾದ ತೊಂದರೆಗಳು ಸಂಭವಿಸುವುವೆಂತಲೂ, ಆ ಕಾರಣ ಆ ಅರಸನಿಗೆ ಶುಭರೇಖೆಯನ್ನು ಕಳುಹಿಸದಿರುವುದೇ ಶ್ರೇಯಸ್ಕರವೆಂತಲೂ ಚಕೋರಾದಿಗಳು ಬಿನ್ನಯಿಸಿ ದರು. ಅರಸನೂ ಇದಕ್ಕೆ ಸಮ್ಮತಿಸಿದನು ಆದರೆ, ಮಾಹಿಷ್ಮತಿಯ ಅರಸನಾದ ಚೇದಿರಾಜನು ಮಾತ್ರ ಇದನ್ನು ದೊಡ್ಡ ಅವಮಾನವೆಂತಲೇ ಭಾವಿಸಿದನು.

ಇತ್ತ ವಿವಾಹಕ್ಕೆ ಬೇಕಾದ ಸಲಕರಣೆಗಳೆಲ್ಲವು ಅಣಿಯಾದುವು. ಆಹೂತರಾದವರೆಲ್ಲರು ಒಬ್ಬೊಬ್ಬರಾಗಿ ಬಂದು ತಮ್ಮತಮ್ಮ ಬಿಡದಿಗಳಲ್ಲಿ ಇಳಿಯುತ್ತಿದ್ದರು. ವಿವಾಹಮಂಟಪವು ನಕ್ಷತ್ರಮಂಡಲವೇನಾದರೂ ಭೂಮಿಗೆ ಇಳಿದುಬಂದಿರುವುದೋ ಎಂಬಂತೆ ಅತ್ಯುತ್ತಮ ರೀತಿಯಿಂದ ಅಲಂಕೃತವಾಗಿ ಕಂಗೊಳಿಸುತ್ತಿದ್ದಿತು. ಮದುವಣಿಗನಾದ ಶಕಾರನ

ಉತ್ಸಾಹಸಂತೋಷಗಳಿಗೆ ಮಿತಿಯೇ ಇರಲಿಲ್ಲ. ಅವನು ನಿಮಿಷನಿಮಿಷಕ್ಕೆ ತನ್ನ ವೇಷವನ್ನು ಮಾರ್ಪಡಿಸುತ್ತ ವಿವಾಹಮಂಟಪದಲ್ಲಿ ಗಂಭೀರವಾಗಿ ಸಂಚರಿಸತೊಡಗಿದನು. ಇತ್ತ ಅಂತಃಪುರವೃದ್ಧಿಸುಮಂಗಲಿಯರು ಮದು ವಣಗಿತ್ತಿಯಾದ ವಿನಯವತಿಯನ್ನು ಭುವನಮೋಹಕಗಳಾದ ವಸ್ತ್ರ ಭೂಷಣಾದಿಗಳಿಂದ ಸಿಂಗರಿಸಿದರು. ಪರಿಹಾಸಚದುರೆಯರಾದ ಸಖಿಯರು ಆಗಾಗ್ಗೆ ವಿನಯವತಿಯನ್ನು ಹಂಗಿಸುತ್ತಲೂ, ಹಾಸ್ಯಮಾಡುತ್ತಲೂ, ವಧುವಿನ ಆಗ್ರಹಕ್ಕೆ ಗುರಿಯಾಗುತ್ತಿದ್ದರು. ಈ ಸಂದರ್ಭದಲ್ಲಿ ರಾಣಿ ಯಾದ ಅನಂಗಲೇಖೆಯೂ ಇವರೊಡನೆ ಪಾಲುಗಾತಿಯಾಗದಿರಲಿಲ್ಲ. ವಿವಾಹಮಹೋತ್ಸವಕ್ಕೆ ಪೂರ್ವಾಂಗಗಳಾದ ಪ್ರತ್ಯುದ್ಗಮನ ಮುಂತಾದ ಮಹೋತ್ಸವಗಳೆಲ್ಲವು ಬಹಳ ವೈಭವದಿಂದ ಒಂದೊಂದಾಗಿ ನಡೆಯು ತೊಡಗಿದುವು. ಬಳಿಕ ವಿವಾಹಮಹೋತ್ಸವದ ದಿನದಲ್ಲಿ ಕುಲಪದ್ಧತಿ ಯಂತೆ ವಧುವನ್ನು ಮಂಗಳದೇವತೆಯಾದ ಗೌರೀಪೂಜೆಯ ಸಲುವಾಗಿ ಮಹಾಕಾಳೀ ದೇವಸ್ಥಾನಕ್ಕೆ ಕರೆದುಕೊಂಡು ಹೊರಟರು. ರಾಜಸ್ತ್ರೀ ಯರೂ ಪರಿಚಾರಿಕೆಯರೂ ಹಿಂಬಾಲಿಸಿ ಬರುತ್ತಿರುವಲ್ಲಿ, ಮಂತ್ರಿ, ಪುರೋ ಹಿತ, ಸಾಮಂತಪ್ರಮುಖರದ ಪರಿವಾರವು ಮಂಗಳವಾದ್ಯಗಳೊಂದಿಗೆ ಮಹಾವೈಭವದಿಂದ ಮಹಾಕಾಳೀಮಂದಿರಕ್ಕೆ ಹೊರಟುಬರುತ್ತಿದ್ದಿತು.

ಅತ್ತ ಶೂದ್ರಕನು ಮೊದಲೇ ಉಜ್ಜಯಿನಿಯನ್ನು ಸೇರಿದ್ದನೆಂಬ ವಿಷಯವನ್ನು ವಾಚಕರು ಮರೆತಿರಲಾರರು. ಶೂದ್ರಕನು ತನ್ನ ಗುಪ್ತ ಸೇನೆಯನ್ನು ಸುರಂಗದಲ್ಲಿ ನಿಲ್ಲಿಸಿ ಪಟ್ಟಣವನ್ನು ಹೊಕ್ಕು ಅಲ್ಲಲ್ಲಿ ಸಂಚ ರಿಸುತ್ತ ಕೋಟೆಯ ಒಳಗಡೆ ಹೊಕ್ಕು ರಾಜಬೀದಿಯಲ್ಲಿ ಹರಿದಾಡ ತೊಡಗಿದನು. ಅವನಿಗೆ ಉಜ್ಜಯಿನೀ ಪಟ್ಟಣವು ಅಂದಿನ ದಿನದಲ್ಲಿ ನೂತನವಾಗಿ ಕಂಡುಬಂದಿತು. ಬಗೆಬಗೆಯ ಅಚ್ಚರಿಗಳು ಕಾಣಬಂದುವು. ನಾನಾ ದೇಶಗಳಿಂದ ಬಿಜಗೈದ ಅರಸರೆಲ್ಲರೂ ಅಲ್ಲಲ್ಲಿ ರಾಜಬೀದಿಗಳಲ್ಲಿ ಸುಳಿದಾಡುತ್ತಿದ್ದರು. ಅವರಲ್ಲಿ ಕೆಲವರು ತಮ್ಮ ಔದಾರ್ಯವನ್ನು ಪ್ರಕಟ ಗೊಳಿಸಲು ಅಲ್ಲಿ ನೆರೆದಿದ್ದ ಭೂಸುರರಿಗೂ ತಿರುಕರಿಗೂ ಬಡಬಗ್ಗರಿಗೂ ಹಣಕಾಸನ್ನೂ ಬಟ್ಟೆಬರೆಯನ್ನೂ ಹಂಚುತ್ತಿದ್ದರು. ಹಲಬರು ತಮ್ಮ ಸೌಂದರ್ಯವನ್ನೂ ವೈಭವವನ್ನೂ ಹೊರಪಡಿಸಲು, ಮಣಿಮಯಾಲಂಕಾರ ಭೂಷಿತರಾಗಿ, ಶೃಂಗಾರಚೇಷ್ಟಾವಿಲಾಸಗಳಿಂದ ಅಲ್ಲಲ್ಲಿ ವಿಹರಿಸುತ್ತಿದ್ದರು.

ಮತ್ತು ಇತರರು ಕಣ್ಣುಗಳನ್ನು ಮಂಕುಗೊಳಿಸುವ ಕಾಂತಿಯಿಂದ ಥಳಥಳಿಸುವ ರತ್ನರಾಶಿಗಳಿಂದ ನಿಬಿಡವಾದ ಅಂಗಡಿಗಳಲ್ಲಿ ವ್ಯಾಪಾರ ಮಾಡತೊಡಗಿ ತಮ್ಮತಮ್ಮ ಬುದ್ಧಿ ಕುಶಲತೆಗಳನ್ನು ಪ್ರಕಾಶಗೊಳಿಸು ತ್ತಿದ್ದರು. ಇಂತೆಯೇ ನಾಟಕಶಾಲೆಗಳಲ್ಲಿಯೂ, ಉದ್ಯಾವನಗಳಲ್ಲಿಯೂ, ದೇವಾಲಯಗಳಲ್ಲಿಯೂ, ಕಮಲಸರೋವರದ ಸೋಪಾನಗಳಲ್ಲಿಯೂ, ಸಿಪ್ರಾ ನದಿಯ ಪುಳಿನರಾಶಿಯ ಮೇಲೆಯೂ, ಮಹಾಕಾಳೇಶ್ವರ ದೇವ ಸ್ಥಾನದ ತೆಪ್ಪಕೊಳದ ಸೋಪಾನಪಙ್ಕ್ತಿಯ ಮೇಲೆಯೂ, ಅರವಟಿಗೆ ಗಳಲ್ಲಿಯೂ, ವೀಣಾವೇಣುಮೃದಂಗ ವಾದ್ಯ ನಿಬಿಡಗಳಾದ ಸಂಗೀತ ಗೋಷ್ಠಿಗಳಲ್ಲಿಯೂ, ದ್ಯೂತದ ಚಾವಡಿಗಳಲ್ಲಿಯೂ, ನಾಟ್ಯಸೌಧಗಳಲ್ಲಿ ಯೂ ಅನೇಕರು ನೆರೆದು ವಿನೋದದಿಂದ ಕಾಲಕಳೆಯುತ್ತಿದ್ದರು. ಪಟ್ಟ ಣದ ಸೌಧರಾಜಿಗಳು ಯುವತೀಮುಖಕಮಲಗಳಿಂದಲೂ, ನಯನೇಂದೀ ವರಗಳಿಂದಲೂ, ನಾಸಾಚಂಪಕಗಳಿಂದಲೂ, ದಂತಕುಟ್ಮಲಗಳಿಂದಲೂ, ಅಧರಬಿಂಬಗಳಿಂದಲೂ ಪರಿಪೂರ್ಣಗಳೆನಿಸಿ ಕಂಗೊಳಿಸುತ್ತಿದ್ದುವು.

ಎಲ್ಲಿ ನೋಡಿದರೂ ಹೂವಿನ ಪರಿಮಳವೂ ದಿವ್ಯಾಂಗರಾಗದ ವಾಸ ನೆಯೂ, ಷಡ್ರಸಭರಿತಗಳಾದ ಭಕ್ಷ್ಯ ವಸ್ತುಗಳೂ ಅಲ್ಲಿ ನೆರೆದಿದ್ದ ಜನಗಳ ಇಂದ್ರಿಯಗಳನ್ನು ಆಕರ್ಷಿಸುತ್ತಿದ್ದುವು.

ಶೂದ್ರಕನು ಈ ಜನಸಂದಣಿಯಲ್ಲಿ ಸೇರಿ, ವಿನೋದವನ್ನು ನೋಡ ತಕ್ಕವನಂತೆಯೇ ಸಂಚರಿಸುತ್ತ, ತನ್ನ ಗುಪ್ತಸೇನೆಯವರು ಯಾವ ರೀತಿ ಯಿಂದ ನಡೆಯುತ್ತಿರುವರೆಂಬುದನ್ನು ತಿಳಿಯುತ್ತಲೂ, ಉಜ್ಜಯಿನಿಯ ಗೂಢಚಾರರು ತನ್ನ ಸೈನಿಕರನ್ನು ಎಲ್ಲಿಯಾದರೂ ಗುರುತಿಸಿದರಾದರೆ ತನ್ನ ಸಂಕಲ್ಪಸೌಧವು ಕುಸಿದು ಬೀಳುವುದರ ಮೂಲಕ ಸರ್ವ ನಾಶ ವಾಗಬಹುದೆಂಬ ಭೀತಿಯಿಂದ ದೃಷ್ಟಿಯನ್ನು ಸುತ್ತ ಹರಡುತ್ತಲೂ ಬೇಗನೆ ರಾಜಬೀದಿಯಲ್ಲಿ ನಡೆಯತೊಡಗಿದನು. ಒಮ್ಮೆ ನೂರಾರು ಸೂಜಿ ಗಳಿಂದ ಚುಚ್ಚಿದವನಂತೆ ತತ್ತರಿಸುತ್ತಲೂ, ಇನ್ನೊಮ್ಮೆ ತ್ರಿಭುವನರಾಜ್ಯ ವನ್ನು ಸಂಪಾದಿಸಿದವನಂತೆ ಸಂತೋಷದಿಂದ ಉಬ್ಬುತ್ತಲೂ, ಮತ್ತೊಮ್ಮೆ ಸರ್ವಸ್ವವನ್ನು ಕಳೆದುಕೊಂಡವನಂತೆ ದೀನವದನನಾಗಿ ಕಂಬನಿಯನ್ನು ಸುರಿಸುತ್ತಲೂ, ಮಗುದೊಮ್ಮೆ ಧೈರ್ಯವನ್ನು ತಾಳಿ ಗಂಭೀರವಾಗಿ ನಡೆಯು ತ್ತಲೂ, ತನ್ನಂತೆಯೇ ವಿನಯವತಿಯೂ ಪ್ರಚ್ಛನ್ನವೇಷದಿಂದ ತನ್ನನ್ನು

ಹುಡುಕುತ್ತಿರುವಳೋ ಎಂಬುದಾಗಿ ಯೋಚಿಸುತ್ತಲೂ, ತದೇಕಚಿತ್ತನಾಗಿ ಬಾಹ್ಯವ್ಯಾಪಾರಗಳನ್ನು ಮರೆತು ಜನಸಮ್ಮರ್ದ ನಿಬಿಡವಾದ ಒಂದು ರಾಜಬೀದಿಯಲ್ಲಿ ನಿಂತುಬಿಟ್ಟನು. ಇದನ್ನು ಕಂಡು ಪುರಪಾಲಕ ಭಟ ನೊಬ್ಬನು ಇವನ ಬಳಿಸಾರ್ದು, "ಎಲೋ! ಹಳ್ಳಿಯ ಗೌಡ! ಏಕೆ ಹೀಗೆ ಮಂಕನಂತೆ ನಿಂತಿರುವೆ? ದಾರಿಬಿಟ್ಟು ನಿಲ್ಲು" ಎನಲು, ತನ್ನ ಮಂಕು ತನಕ್ಕೆ ನಾಚುಗುತ್ತ, ಚೇತರಿಸಿಕೊಂಡು ಮುಂದೆ ನಡೆಯುತ್ತ ಕಡೆಗೆ ದೇವಸ್ಥಾನದ ಮಹಾದ್ವಾರದ ಬಳಿಗೆ ಬಂದು ಸೇರಿದನು. ತಳಿರು ತೋರಣಗಳಿಂದಲೂ, ಪಚ್ಚೆಯ ಚಪ್ಪರಗಳಿಂದಲೂ, ಮುತ್ತಿನ ರಂಗವಲ್ಲಿ ಗಳಿಂದಲೂ ಮಹಾದ್ವಾರದ ಪ್ರಾಂಗಣವು ಅಲಂಕೃತವಾಗಿದ್ದಿತು. ಜನ ಗಳೆಲ್ಲರೂ ಸಾಲಾಗಿ ಎರಡು ಪಕ್ಕಗಳಲ್ಲಿಯೂ ನಿಂತಿದ್ದರು.

ಪುರಪಾಲಕಭಟರು ಜನಗಳನ್ನು ನಡುಬೀದಿಯಲ್ಲಿ ಸಂಚರಿಸದಂತೆ ಅಡ್ಡಗಿಸಿ, ಅತ್ತಿತ್ತ ಒತ್ತುತ್ತಿದ್ದರು ಇಂತಹ ನಿರೋಧಕ್ಕೆ ಕಾರಣವೇನೆಂದು ವಿಚಾರಿಸಲಾಗಿ ರಾಜಪುತ್ರಿಯು ವಿವಾಹಮಹೋತ್ಸವಕ್ಕೆ ಮುಂಚಿತವಾಗಿ ಕುಲಸಂಪ್ರದಾಯಾನುಸಾರ ಸರ್ವಮಂಗಳೆಯಾದ ಭಗವತಿಯನ್ನು ಪೂಜಿ ಸುವ ಸಲುವಾಗಿ ಅರೆಗಳಿಗೆಯೊಳಗೆ ದೇವೀಮಂದಿರಕ್ಕೆ ಪರಿವಾರ ದೊಂದಿಗೆ ಬಿಜಮಾಡಿಸುವಳೆಂಬುದಾಗಿ ಶೂದ್ರಕನಿಗೆ ತಿಳಿಯ ಬಂದಿತು. ಆಗ ಶೂದ್ರಕನು ಹೀಗೆ ಯೋಚಿಸಿದನು "ಅಯ್ಯೋ! ಇದೇನು ನನ್ನ ದುರದೃಷ್ಟ! ಧರ್ಮದೇವತೆಗೆ ತವರ್ಮನೆಯಾದ ಬ್ರಹ್ಮಕುಲದಲ್ಲಿ ಜನಿಸಿ, ಸಕಲಪುರುಷಾರ್ಥವಶೀಕರಣಸಾಧನವೂ, ಆತ್ಮಸಂತಾರಕವೂ, ಬುದ್ಧಿ ಜಾಡ್ಯನಿವಾರಕವೂ ಎನಿಸಿದ ಸಾರಸ್ವತ ರಸಾಯನವನ್ನು ಸವಿದು, ವೇದಾ ಕ್ಷರಪರಿಪೂರ್ಣವೆನಿಸಿದ ನಾಲಗೆಯಿಂದ ಸಕಲಶಾಸ್ತ್ರಸಾರಗಳನ್ನೂ ರುಚಿ ನೋಡಿ, ಕಟ್ಟಕಡೆಗೆ ಕ್ಷತ್ರಕುಲೋಚಿತವಾದ ಧೈರ್ಯಪರಾಕ್ರಮಗಳೇ ಕೀರ್ತಿ ಲತೆಯ ಕಂದಗಳೆಂತಲೂ, ಸಾಹಸವೇ ಜಯಲಕ್ಷ್ಮೀ ಕಚಗ್ರಹಣಸಾಧನ ವೆಂತಲೂ, ಕುಟಿಲವಾದ ರಾಜನೀತಿಯೇ ಸಕಲಭೋಗಸಾಧಕವೆಂತಲೂ ಬಗೆದು ಉನ್ಮತ್ತನಂತೆ ತಿರುಗುತ್ತ, ಬ್ರಹ್ಮಕುಲೋಚಿತಗಳೆನಿಸಿದ ಶಾಂತಿ, ದಾಂತಿ, ತಿತಿಕ್ಷಾದಿ ಸುಗುಣಸಂಪತ್ತಿಯನ್ನು ಒತ್ತಟ್ಟುಮಾಡಿ, ಈರ್ಷ್ಯಾ, ಕ್ರೋಧ, ಮಾನ, ಮದಗಳಿಗೆ ಅಡಿಯಾಳಾಗಿ, ಆಶಾಪಿಶಾಚಕ್ಕೆ ಒಳಪಟ್ಟು, ತಡಿಯಿಲ್ಲದ ಘೋರವಾದ ಈ ಚಿಂತಾಸಮುದ್ರದಲ್ಲಿ ಮುಳುಗುತ್ತಲೂ

ತೇಲುತ್ತಲೂ ಇರುವೆನಲ್ಲ! ಈ ಹುಚ್ಚು ನನಗೆ ಏಕೆ ಹಿಡಿಯಿತು! ತಾನಾಗಿ ದೊರೆತ ವಸ್ತುವಿನಿಂದ ಸಂತುಷ್ಟನಾದವನಲ್ಲವೇ ಬ್ರಾಹ್ಮಣನೆನಿಸತಕ್ಕವನು. ತುಷ್ಟಿಯೇ ಮೋಕ್ಷದ್ವಾರವನ್ನು ಭೇದಿಸಲು ಯೋಗ್ಯವಾದ ಸಾಧನವಲ್ಲವೇ! ಇಂತಹ ತುಷ್ಟಿಯು ಇಲ್ಲವಾದರೆ ಎಷ್ಟು ಸಂಪಾದಿಸಿದರೇನಾಗುವುದು ? ಇದಕ್ಕೆ ಪಾರವಾದರೂ ಇರುವುದೇ ? ನಾನು ತೃಪ್ತನು. ನನಗೆ ಇನ್ನಾವ ವಸ್ತುಗಳಿಂದಲೂ ಆವಶ್ಯಕತೆಯಿಲ್ಲವೆನ್ನುವುದಾದರೂ ಎಂದಿಗೆ ? ಇದು ನನಗೆ ಯೋಗ್ಯವಾದುದೇ ? ತನ್ನ ಕಯ್ಯಿಂದಲೇ ಹಿಡಿದಿರುವ ಕೊಡೆಯು ಹಾಗೆ ರಾಜತಂತ್ರದಿಂದ ಸಂಪೂರ್ಣವಾದ ಸುಖವು ದೊರೆಯುವುದೇ ? ತೃಪ್ತನಾದ ಬ್ರಾಹ್ಮಣನಿಗೆ ಮೂಲೋಕದ ಅಧಿಕಾರವೂ ಲಕ್ಷ್ಯವಲ್ಲ ಸ್ವಧರ್ಮವನ್ನು ಬಿಟ್ಟು ಇಂತು ಪರಧರ್ಮವನ್ನು ಕೈಕೊಂಡೆನಾದರೆ ಇದರಿಂದ ನನಗೇನು ಫಲ ? ಮೊತ್ತಮೊದಲನೆಯ ಧರ್ಮವನ್ನೇ ಹಾಳು ಮಾಡಿದೆನೆಂದ ಬಳಿಕ, ಉಳಿದ ಅರ್ಥಕಾಮಗಳು ಏನು ಮಾಡಬಲ್ಲುವು ? ಅದು ಹಾಗಿರಲಿ! ಈ ಕಲಿಯುಗದಲ್ಲಿ ಅರ್ಥ ಕಾಮಗಳೆರಡು ಮಾತ್ರವೇ ಸೇವಿಸ ತಕ್ಕುವಾದರೆ, ಸಂದೇಹಾಸ್ಪದವಾದ ಧರ್ಮವನ್ನು ಕಟ್ಟಿಕೊಂಡು ಏಕೆ ಶ್ರಮ ಪಡಬೇಕು? ಇಂತಹ ನಾಸ್ತಿಕವಾದವನ್ನು ಕೈಕೊಂಡರೂ, ಈ ಅರ್ಥ ಕಾಮಗಳಾದರೂ ಶಾಶ್ವತಗಳಲ್ಲ. ವಿನಯವತಿಯ ಅನುರಾಗವಾದರೋ ಸ್ಫಟಿಕಶಿಲೆಯಂತೆ ಸ್ವಚ್ಛವಾದ ನನ್ನ ಅಂತರಂಗವನ್ನು ಹೊಕ್ಕು, ಗಂಗಾ ನದಿಯಲ್ಲಿ ಮಾರ್ಪೊಳೆದ ಸಂಧ್ಯಾರಾಗದಂತೆ ಕಾಣುವುದು. ರಾಜಕನ್ಯೆ ಯರು ರಾಜಲಕ್ಷ್ಮಿಯನ್ನು ಎಡೆಬಿಟ್ಟಿರಲಾರರು. ತಮ್ಮ ಸಖಿಯರು ಕುಣಿಸಿದಂತೆ ಕುಣಿಯುವರು. ಸಾಮಾನ್ಯ ಯುವತಿಯರಂತೆ ರಾಜಕನ್ಯೆ ಯರಲ್ಲಿ ಸ್ವಚ್ಛಂದವಿಹಾರಗಳಿಗೆ ಅವಕಾಶವಿಲ್ಲ. ನಾನಾದರೋ ಒಬ್ಬ ಸಾಮಾನ್ಯಬ್ರಾಹ್ಮಣನು. ಒಂದು ವೇಳೆ ವಿನಯವತಿಯನ್ನು ಕೈಹಿಡಿದೆನಾ ದರೆ ನನಗೆ ನಿಲ್ಲಲು ಮನೆಗೂ ಗತಿಯಿಲ್ಲ. ಇನ್ನು ರಾಜ್ಯಕೋಶಗಳೆಲ್ಲಿಂದ ಬರಬೇಕು? ಮಹಾರಾಜಾಧಿರಾಜರು ಕೂಡ ಅಧಿಕಾರಿಗಳ ಏರ್ಪಾಡು ಗಳಿಗೆ ಒಳಪಡಬೇಕಲ್ಲವೇ? ಅರಮನೆಗಳಲ್ಲಿ ಬಗೆಬಗೆಯ ಭೋಗಸಾಮಗ್ರಿ ಗಳಿದ್ದರೂ ಕೆಲವು ದಿನಗಳಲ್ಲಿಯೇ ಅರಸನಿಗೆ ಅವುಗಳಲ್ಲಿನ ಆಸೆಯು ಮಾಸಿಹೋಗುವುದು. ಭಕ್ಷ್ಯಭೋಜ್ಯಗಳು ರೋಗಬೀಜಗಳಾಗುವುವು. ವನವಿಹಾರಾದಿಗಳು ಪ್ರಜೆಗಳಿಗೆ ಆಡಂಬರಗಳೆನಿಸುವುವು. ಅಧಿಕಾರ

ಪಿಶಾಚಗ್ರಸ್ತರಾದ ಅರಸರು ತನ್ಮಲ್ಲಿಯೇ ಮರುಗುತ್ತಿರುವರಲ್ಲವೇ ? ಅವರಿಗಾದರೂ ಸುಖವು ಎತ್ತಣದು ? ರಾಜ್ಯದ ಆಸೆಯೂ ರಮಣಿಯ ಆಸೆಯೂ ಮಾನವನ ಮನಸ್ಸಿಗೆ ಬಲವತ್ತರಗಳಾದ ಪಾಶಗಳು. ರಾಜ್ಯವನ್ನು ಸಂಪಾದಿಸುವುದೆಂದರೆ ಬಾಯಿ ಮಾತಲ್ಲ. ಅದನ್ನು ಸ್ಥಿರಪಡಿಸಿಕೊಳ್ಳುವುದು ಎಷ್ಟೋ ಕಷ್ಟ. ಧರ್ಮಕೀರ್ತಿಗಳಿಗೆ ಕುಂದುಬಾರದಂತೆ ಕಾಪಾಡುವುದು ಇನ್ನೂ ಶ್ರಮವಾದುದು. ನಾನು ವಿನಯವತಿಯನ್ನು ಸಂಪಾದಿಸುವುದು ಸುಲಭ ಆದರೆ ರಾಜಕನ್ಯೆಯಾದ ಇವಳು ಬ್ರಾಹ್ಮಣ ಕನ್ಯೆಯಂತೆ ನನ್ನನ್ನು ಆದರಿಸಿ ಉಪಚರಿಸ ಬಲ್ಲಳೇ? ಅಗ್ನಿಹೋತ್ರ, ಪಾಕ ಸಂಸ್ಥೆಗಳಲ್ಲಿ ಧರ್ಮಪತ್ನಿಯೆಂಬುದಾಗಿ ಸಭೆಯ ಇದಿರಾಗಿ ನಿಲ್ಲಬಲ್ಲಳೇ ? ಅನುದಿನವು ಅಡಿಗೆಮಾಡಿ, ಹೊಗೆಯಿಂದ ಮಸುಕಾದ ಬ್ರಾಹ್ಮಣಿಯ ಮುಖದಲ್ಲಿ ಶರತ್ಕಾಲದ ನಕ್ಷತ್ರಗಳನ್ನು ಹೋಲುವ ಬೆವರಿನ ಹನಿಗಳು ಎಷ್ಟು ಅಂದವಾಗಿ ಕಂಗೊಳಿಸುವುವೋ ಅದನ್ನು ರಾಜಪುತ್ರಿಯು ಅನುಕರಿಸಬಲ್ಲಳೇ ? ಆದರೆ ನಾನೆಷ್ಟು ಬಗೆಯಿಂದ ವಿವೇಕವನ್ನು ತಳೆದರೂ ದೈವವು ನನ್ನನ್ನು ಮರೆಮಾಚಿಸುತ್ತ ತನ್ನ ಇಷ್ಟಾನುಸಾರವಾಗಿಯೇ ಒಯ್ಯುತ್ತಿರುವುದು. ಭಗವದ್ವಿಲಾಸಕ್ಕೆ ಇದಿರಾಗಿ ನಾನು ಈ ಸಂಸಾರ ಸಾಗರದಲ್ಲಿ ಈಸಲು ಸಾಧ್ಯವೇ ? ಸಮುದ್ರವೆಂದ ಮೇಲೆ ಸುಳಿಗಳಿಲ್ಲದಿರುವುದುಂಟೇ ? ಅವುಗಳಿಗೆ ಸಿಲುಕದಿರುವುದಾದರೂ ಹೇಗೆ ? ಪುರುಷ ಪ್ರಯತ್ನದಿಂದ ಅವುಗಳನ್ನು ತಪ್ಪಿಸಿಕೊಂಡು ಪಾರಾಗುವುದಲ್ಲವೆ ವಿವೇಕಿಯ ಲಕ್ಷಣ? ದೈವ ವಿಲಾಸಕ್ಕೆ ಒಳಪಡದೆ ನಿರ್ಭಯವಾಗಿ ಸ್ವೇಚ್ಛೆಯಿಂದ ತಿರುಗತಕ್ಕ ಧನ್ಯನಾದರೂ ಯಾವನು? ” ಎಂಬುದಾಗಿ ಯೋಚಿಸುತ್ತಿರುವಷ್ಟರಲ್ಲಿಯೇ ರಾತ್ರಿಯ ಮೊದಲನೆಯ ಯಾಮವು ಕಳೆಯುತ್ತ ಬಂದಿತು. ಆ ಸಮಯಕ್ಕೆ ಸರಿಯಾಗಿ ರಾಜಪುತ್ರಿಯು ಮಂಗಳವಾದ್ಯಘೋಷದೊಂದಿಗೆ ದೇವೀಮಂದಿರದ ಬಳಿಗೆ ಬರುತ್ತಿದ್ದಳು ದೇವಳದ ಹತ್ತಿರಕ್ಕೆ ಬರುತ್ತಲೇ ಅರಸುಗುವರಿಯು ಪಾದಚಾರಿಣಿಯಾಗಿ, ಒಂದು ಪಕ್ಕದಲ್ಲಿ ಅನಂಗಲೇಖೆಯೂ, ಮತ್ತೊಂದು ಪಕ್ಕದಲ್ಲಿ ಮಾಧವಿಯೂ, ನಡೆದುಬರುತ್ತಿರುವಾಗ ದಾಸದಾಸೀಪರಿವಾರದವರು ಪೂಜೋಪಕರಣಗಳನ್ನು ಕಯ್ಗಳಲ್ಲಿಯೂ ತಲೆಯ ಮೇಲೆಯೂ ಹೊತ್ತು ಹಿಂಬಾಲಿಸುತ್ತಿದ್ದರು. ಸುಮಂಗಲಿಯರು ಹಾಡುಗಳನ್ನು ಹೇಳುತ್ತ ಸಂತಸದಿಂದ ನಡೆದುಬರುತ್ತಿದ್ದರು.

ಇದನ್ನು ಕಂಡು ಶೂದ್ರಕನು ಬೇಗನೆ ಮಹಾದ್ವಾರವನ್ನು ಹೊಕ್ಕು ಎಲ್ಲಿಯೋ ಕಣ್ಮರೆಯಾದನು.

ಬಳಿಕ ರಾಜಪುತ್ರಿಯು ಮಂದಿರದ ಪ್ರಾಕಾರವನ್ನು ಹೊಕ್ಕು, ಭಕ್ತಿಯಿಂದ ತಲೆವಾಗಿ ಪ್ರಾಕಾರವನ್ನು ಬಲವಂದು ಕ್ರಮವಾಗಿ ಬಲಿ ಪೀಠ, ಕಲ್ಯಾಣಮಂಟಪ, ನಿತ್ಯೋತ್ಸವಶಾಲೆಗಳನ್ನು ದಾಟಿ ಗುಡಿಯನ್ನು ಹೊಕ್ಕಳು. ಗರ್ಭಗೃಹವು ಇಕ್ಕಟ್ಟಾಗಿದ್ದ ಕಾರಣ, ಅನಂಗಲೇಖೆ, ಮಾಧವಿ, ವಿನಯವತಿ, ಇಬ್ಬರು ಸುಮಂಗಲಿಯರು ಮಾತ್ರವೇ ದೇವಿಯ ಸನ್ನಿಧಿ ಯಲ್ಲಿ ನಿಂತರು. ಉಳಿದವರೆಲ್ಲರೂ ಗರ್ಭಗೃಹದ ಮುಂಭಾಗದ ಹಜಾರ ದಲ್ಲಿಯೇ ನಿಲ್ಲಬೇಕಾಯಿತು. ಅರ್ಚಕನು ದೇವಿಯನ್ನು ಅನೇಕಾಲಂ ಕಾರಗಳಿಂದ ಸಿಂಗರಿಸಿದ್ದನು. ರಾಜಪುತ್ರಿಯು ದೇವಿಯ ಇದಿರಾಗಿ ನಿಂತ ಕೂಡಲೇ ಸಂಕಲ್ಪವನ್ನು ಹೇಳಿಸಿ, ರಾಜಪುತ್ರಿಯಿಂದ ದೇವಿಗೆ ಷೋಡ ಶೋಪಚಾರ ಪೂಜೆಯನ್ನು ಮಾಡಿಸತೊಡಗಿದನು ಹೊರಗಣ ಹಜಾರ ದಲ್ಲಿ ನಿಂತಿದ್ದ ಪುರಂಧ್ರಿಯರು ಸೀತಾಸ್ವಯಂವರ, ಗೌರೀಕಲ್ಯಾಣದ ಹಾಡುಗಳನ್ನು ಮೃಧುಮಧುರವಾಗಿ ಹಾಡತೊಡಗಿದರು. ಮಂಗಳವಾದ್ಯ ಗಳು ಗಂಧರ್ವಗಾಯನವನ್ನು ಅಲ್ಲಗಳೆಯುವಂತೆ ಮೊಳಗುತ್ತಿದ್ದುವು, ವಿನಯವತಿಯು ದೇವಿಯನ್ನು ಭಕ್ತಿಪುರಸ್ಸರವಾಗಿ ಪೂಜಿಸಿದ ಬಳಿಕ, ದೇವಳದ ಪೂಜಾರಿಯು ಭಗವತಿಗೆ ಧೂಪ, ದೀಪ, ನೈವೇದ್ಯ, ತಾಂಬೂಲ ಗಳನ್ನು ಸಮರ್ಪಿಸಿ, ಕರ್ಪೂರಾರತಿಯನ್ನು ಬೆಳಗಿ, ಎಲ್ಲರ ಕಯ್ಯಲ್ಲಿಯೂ ಲಾಜಾಕ್ಷತೆಗಳನ್ನು ಕೊಟ್ಟು, ಮಂತ್ರಪುಷ್ಪವನ್ನಿಟ್ಟು, ವಿನಯವತಿಯೇ ಮೊದಲಾದವರೆಲ್ಲರಿಗೂ ತೀರ್ಥಪ್ರಸಾದಗಳನ್ನು ಹಂಚತೊಡಗಿದನು.

ರಾಜಪುತ್ರಿಯು ಭಕ್ತಿಭರದಿಂದ ತಲೆವಾಗಿ ಭಗವತಿಯ ಇದಿರಾಗಿ ನಿಂತು ಕಯ್ಮುಗಿದು, ಆನಂದಪರವಶೆಯಾಗಿ ನಮಸ್ಕರಿಸಿ, ಗದ್ಗದಕಂಠ ದಿಂದ ದೇವಿಯನ್ನು ಹೊಗಳತೊಡಗುವಷ್ಟರಲ್ಲಿ, ದೇವಿಯ ಹಿಂಭಾಗದಲ್ಲಿ ಗಂಟೆಗಳ ಘಣಘಣಧ್ವನಿಯು ಕೇಳಬಂದಿತು. ಎಲ್ಲರೂ ವಿಸ್ಮಯಭೀತಿ ಗಳನ್ನು ಅಭಿನಯಿಸುತ್ತ, ದಿಕ್ಕುತೋರದೆ, ಚಿತ್ರದ ಬೊಂಬೆಗಳಂತೆ ನಿಂತು ಬಿಟ್ಟರು. ಇಷ್ಟರಲ್ಲಿ ಭಗವತಿಯ ಹಿಂಭಾಗದ ಬಾಗಿಲು ತೆರೆಯಿತು. ಸುಂದರಾಕಾರನಾದ ತರುಣನೊಬ್ಬನು ಹೊರಬಂದನು. ಆತನ ಆಕಾರವು

ಮನೋಹರವಾಗಿದ್ದರೂ ಭಯಂಕರವಾಗಿ ಕಾಣುತ್ತಿದ್ದಿತು. ದೀರ್ಘ ಕಾಯನಾಗಿದ್ದರೂ ಮುಖದಲ್ಲಿ ಭ್ರೂಲತೆಗಳು ವಿಕಟಭಾವವನ್ನು ತಳೆದಿದ್ದುವು. ಕಯ್ಯಲ್ಲಿ ಪುಷ್ಪಮಾಲೆಯೊಂದಿಗೆ ಖಡ್ಗವೂ ಝಳಪಿಸುತ್ತಿದ್ದಿತು. ಇಂತು ಭೀಕರನೂ ಸುಂದರನೂ ಆದ ತರುಣನು ಮಂದಹಾಸವನ್ನು ಬೀರುತ್ತ ಅರಸುಗುವರಿಯ ಬಳಿಸಾರ್ದು ತನ್ನ ಕಯ್ಯಲ್ಲಿದ್ದ ಮಾಲತೀ ಮಾಲೆಯನ್ನು ಆಕೆಯ ಕೊರಳಿನಲ್ಲಿ ಹಾಕಿಬಿಟ್ಟನು. ದೇವಳದ ಅರ್ಚಕನು ತೊದಲ್ನುಡಿಯಿಂದ ವಿನಯವತಿಯ ಮೇಲೆ ಮಂತ್ರಾಕ್ಷತೆಗಳನ್ನು ಚೆಲ್ಲಿ, "ದೀರ್ಘಸುಮಂಗಲೀಭವ, ಸಕಲ ಸಂಪದಭಿವೃದ್ಧಿರಸ್ತು" ಎಂಬುದಾಗಿ ಆಶೀರ್ವದಿಸಿ, ಪಕ್ಕದಲ್ಲಿಯೇ ನಿಂತಿದ್ದ ಅನಂಗಲೇಖೆಯನ್ನು ನೋಡಿ ಬೆಚ್ಚುಬಿದ್ದನು. ಅನಂಗಲೇಖೆಯೂ ಅನಿಮಿಷಾಂಗನೆಯಂತೆ ನಿಂತುಬಿಟ್ಟಳು ಮಾಧವಿಯು ಈ ಸನ್ನಿವೇಶಗಳನ್ನೆಲ್ಲ ನೋಡಿ, ಅನಂಗಲೇಖೆಯನ್ನು ಕುರಿತು "ದೇವೀ ! ಅನುಗ್ರಹಿಸು" ಎಂದಳು.

ಆಗ ರಾಣಿಯು ಮಹಾಕಾಳಿಯನ್ನು ನೋಡಿ, "ಭಗವತೀ ! ನಿನ್ನ ಮನೋವಿಲಾಸವನ್ನು ಮೀರಬಲ್ಲವರು ಯಾರು ? ನಾವೆಲ್ಲರೂ ನಿನ್ನ ಕಯ್ಯೊಳಗಣ ಬೊಂಬೆಗಳು" ಎನ್ನುತ್ತ ವಿನಯವತಿಯ ಕಡೆಗೆ ತಿರುಗಿ "ಅಮ್ಮಾ! ನಿನ್ನ ಇಷ್ಟಾರ್ಥವು ಈಡೇರಿತು. ನಿನ್ನ ನೋಂಪಿಗಳು ಫಲಿಸಿದುವು. ನಿನ್ನ ಕೊರಳಲ್ಲಿರುವ ಪೂದಂಡೆಯನ್ನು ಶೂದ್ರಕನ ಕಂಠದಲ್ಲಿ ಹಾಕಿ, ಆತನ ಧೈರ್ಯಸಾಹಸಗಳಿಗೆ ಮೆಚ್ಚಿ, ವರಿಸಿ, ಅರ್ಧಾಂಗಿಯಾಗಿ ಸುಖವಾಗಿ ಚಿರಕಾಲ ಬಾಳು" ಎನ್ನುತ್ತ ಬಲಾತ್ಕಾರವಾಗಿ ತಾನೇ ಅವಳ ಕುತ್ತಿಗೆಯ ಹಾರವನ್ನು ತೆಗೆಸಿ ಶೂದ್ರಕನ ಕೊರಳಲ್ಲಿ ಹಾಕಿಸಿದಳು. ಅರಸುಗುವರಿಗೆ ಮಯ್ಮೇಲೆ ಎಚ್ಚರವೇ ಇಲ್ಲವಾಯಿತು. ಪಕ್ಕದಲ್ಲಿದ್ದ ಮಾಧವಿಯು ಹೆಗಲ ಮೇಲೆ ಕಯ್ಯಿಟ್ಟು ನಿಶ್ಚೇತನೆಯಾಗಿ ನಿಂತುಬಿಟ್ಟಳು.

ಇತ್ತ ನಮ್ಮ ಕಥಾನಾಯಕನು ಲೀಲೆಯಿಂದ ರಾಜಪುತ್ರಿಯ ಪಾಣಿಯನ್ನು ಗ್ರಹಿಸುವಷ್ಟರಲ್ಲಿ ಗರ್ಭಗೃಹದ ಹೊರಗಡೆ ದೊಡ್ಡ ಕೋಲಾಹಲ ಧ್ವನಿಯು ಕೇಳಿಸಿತು. ಉಜ್ಜಯಿನಿಯ ಸೈನಿಕರು ದೇವಳವನ್ನು ನುಗ್ಗಿದರೆಂಬ ಸಮಾಚಾರವನ್ನು ಕೇಳಿ ಅವನು ಖಡ್ಗವನ್ನು ಬಿಗಿಯಾಗಿ ಹಿಡಿದು ಅನಂಗಲೇಖೆಯನ್ನು ಕುರಿತು "ಈ ಜೀವವಿರುವ ವರೆಗೂ ನಾನು ನಿನ್ನ

ಈ ಮಹೋಪಕಾರವನ್ನು ಮರೆಯಲಾರೆನು. ಇನ್ನು ಘೋರಯುದ್ಧವು ನಡೆಯುವುದು. ನನ್ನ ಸೇವಕರ ಮೂಲಕ ನಿನ್ನನ್ನು ಗೂಢಬಿಲದ್ವಾರದ ದಾರಿಯಿಂದ ಅಂತಃಪುರಕ್ಕೆ ಕಳುಹುವೆನು" ಎನ್ನುತ್ತಿರುವಷ್ಟರಲ್ಲಿಯೇ ರಾಣಿಯು "ಶೂದ್ರಕಾ! ನಿನ್ನ ಸಲಹೆಯನ್ನು ನಾನು ಅನುಮೋದಿಸ ಲಾರೆನು. ನನ್ನ ನಡೆವಳಿಯೂ ಕೀರ್ತಿಯೂ ನೀರುಪಾಲಾಗುವ ಯೋಚನೆ ಯನ್ನು ಮಾಡಬಹುದೇ? ಜನಗಳಾದರೂ ಏನೆನ್ನುವರು! ಎಂತಹ ಯೋಚನೆ" ಎಂದಳು. ಆಗ ಶೂದ್ರಕನು ಏನನ್ನೋ ಹೇಳಬೇಕೆಂದಿರು ವಷ್ಟರಲ್ಲಿ ಇಬ್ಬರು ಚಾರರು ಗೂಢದ್ವಾರದಿಂದ ಹೊರಬಂದು ವಿನಯದಿಂದ ತಲೆಬಾಗಿ ದೃಢತಮವಾದ ಒಂದು ಕವಚವನ್ನು ನೀಡಲಾಗಿ, ನಮ್ಮ ತರುಣನು ಅದನ್ನು ತೊಟ್ಟುಕೊಂಡನು. ಮಾಧವಿಯ ಮೂಲಕ ಮತ್ತೊಂದನ್ನು ವಿನಯವತಿಗೆ ತೊಡಿಸುವಂತೆ ಹೇಳಲಾಗಿ ಮಾಧವಿಯು ಅದನ್ನು ಅರಸುಗುವರಿಗೆ ತೊಡಿಸುತ್ತ ಕಂಬನಿಗರೆದು ರಾಜಪುತ್ರಿಯು ಮುಖವನ್ನು ನೋಡುತ್ತ "ಮುಂದೆ ನನಗೇನು ಗತಿ?" ಎನ್ನುವಷ್ಟರಲ್ಲಿ ಶೂದ್ರಕನು "ಮಾಧವೀ! ನೀನು ಇಲ್ಲಿಯೇ ಇದ್ದು ಈ ಕೋಲಾಹಲ ವೆಲ್ಲವು ಶಾಂತವಾದ ಬಳಿಕ ಅನಂಗಲೇಖೆಯ ಸಂಗಡ ಅಂತಃಪುರಕ್ಕೆ ಹೋಗು. ಆದಷ್ಟು ಬೇಗನೆ ನಿನ್ನನ್ನು ಕರೆಯಿಸುವೆನು. ದುಃಖಿಸಬೇಡ" ಎಂದನು.

ಆಗ ರಾಣಿಯಾದ ಅನಂಗಲೇಖೆಯು ಕಂಬನಿಗರೆಯುತ್ತ "ಶೂದ್ರಕಾ! ನನ್ನ ಅಂತರಂಗವನ್ನು ತೆರೆದು ಅದರ ನಿಷ್ಕಲಂಕತೆಯನ್ನು ನಾನೆಷ್ಟು ಪರಿಯಾಗಿ ನಿನಗೆ ತೋರಿದರೂ ಸ್ವಾರ್ಥತತ್ಪರನಾದ ನೀನು ಅದರ ಸ್ವಚ್ಛತೆಯನ್ನು ತಿಳಿಯಲಾರದೆ ಹೋದೆ! ಇದರಿಂದ ನನ್ನ ಕೆಲಸವು ಹಾಳಾಯಿತು. ನಾನು ನಿನ್ನನ್ನು ಪಾಶದಿಂದ ಎಳೆಯಬೇಕೆಂದಿರುವಲ್ಲಿ ನೀನೇ ಅಂತುಮಾಡಿದೆಯಲ್ಲವೇ! ಇನ್ನು ಈ ಜನ್ಮದಲ್ಲಿ ನಾನು ನಿನ್ನ ಮೊಗದಾವರೆಯನ್ನಾದರೂ ನೋಡಬಲ್ಲೆನೇ?" ಎನ್ನುತ್ತಿರುವಲ್ಲಿ ಶೂದ್ರಕನು "ದೇವಿ! ಕಿವುಡನ ಮುಂದೆ ವೀಣೆಯನ್ನು ನುಡಿಸಿದಂತೆ ಈ ವಿಷಮ ಸಮಯದಲ್ಲಿ ನಿನ್ನ ಗೂಢಚಮತ್ಕಾರಸಮಸ್ಯೆಗಳು ನನ್ನ ಕಿವಿಗೆ ಬೀಳ ಲಾರವು. ಉಕ್ಕುತ್ತಿರುವ ಸಮುದ್ರವು ಸ್ತಿಮಿತವಾದ ಬಳಿಕ ವಿಲಾಸ ನೌಕೆಯಲ್ಲಿ ಕುಳಿತು ಮಾತನಾಡುವ" ಎಂದನು.

ಇಷ್ಟು ಹೊತ್ತಿಗೆ ರಾತ್ರಿ ಎರಡು ಜಾವದ ಸಮಯವಾಯಿತು. ಗರ್ಭಮಂದಿರದಲ್ಲಿ ಶೂದ್ರಕನು ರಾಜಪುತ್ರಿಯನ್ನು ದೇವಿಯ ಸನ್ನಿಧಿಯಲ್ಲಿ ಪಾಣಿಗ್ರಹಣಮಾಡಿದ ಸಮಾಚಾರವು ಹಜಾರದಲ್ಲಿ ಹೊರಗಡೆ ನಿಂತಿದ್ದ ಸುಮಂಗಲಿಯರ ಮೂಲಕ ಕರ್ಣಾಕರ್ಣಿಕೆಯಾಗಿ ಹೊರಬೀಳದಿರಲಿಲ್ಲ. ಶೂದ್ರಕನು ಒಡನೆಯೇ ಅಲ್ಲಿಂದ ಹೊರಟು ಖಡ್ಗಪಾಣಿಯಾಗಿ ವಿನಯವತೀಸಮೇತನಾಗಿ ಹೊರಬರುವಷ್ಟರಲ್ಲಿಯೇ ವಿಜಯಸಿಂಹನು ಹಿಂಬಾಲಿಸಿದನು. ಭಗವತಿಯ ಹಿಂಭಾಗದಲ್ಲಿ ಸುರಂಗದೊಳಗೆ ಎರಡು ಸಾವಿರ ಯುದ್ಧವೀರರು ಶಸ್ತ್ರಪಾಣಿಗಳಾಗಿ ಸಿದ್ಧವಾಗಿದ್ದರು. ಪುರಂಧ್ರಿಯರ ಪಿಸುಮಾತುಗಳಿಂದ ಶೂದ್ರಕನು ಕನ್ಯಾಪಹರಣಮಾಡಿದ ಸಮಾಚಾರವು ಹೊರಬಿದ್ದ ಕೂಡಲೇ ಅವಂತಿಯ ಭಟರು ದೇವೀಮಂದಿರವನ್ನು ಹೊಕ್ಕು, ಗರ್ಭಗೃಹದ ಹಜಾರದಲ್ಲಿದ್ದ ಪುರಂಧ್ರಿಯರ ನಡುವೆ ನುಗ್ಗಿ ಗರ್ಭಗೃಹವನ್ನು ಪ್ರವೇಶಿಸುವಷ್ಟರಲ್ಲಿ ದೊಡ್ಡ ಹಾಹಾಕಾರವು ಕೇಳಿಸಿತು. ಪ್ರಚ್ಛನ್ನವೇಷಧಾರಿಗಳಾಗಿದ್ದ ಬೇಡರ ಸೈನ್ಯದವರು ಆಯುಧಗಳನ್ನು ಸಿದ್ಧಪಡಿಸಿ ನಿಂತರು. ಉಜ್ಜಯಿನೀ ಭಟರು ದೇವಳದ ಪ್ರಾಕಾರವನ್ನೂ ಸುತ್ತುಮುತ್ತಣ ಬೀದಿಗಳನ್ನೂ ಮುತ್ತಿಕೊಂಡರು. ವಿಜಯಸಿಂಹನು ಕಯ್ಯಲ್ಲಿ ಖಡ್ಗವನ್ನು ಹಿಡಿದು ಶೂದ್ರಕನನ್ನು ದಾಟಿ, ಮುಂದೆ ಬಂದು ನಿಂತನು. ಶೂದ್ರಕನು ನಿಶ್ಚೇಷ್ಟಿತನಾದನು ವಿನಯವತಿಯು ನಡುಗತೊಡಗಿದಳು. ಮಾಧವಿಯು ಗರ್ಭಗೃಹದಿಂದಲೇ ಈ ಸನ್ನಿವೇಶವನ್ನು ನೋಡಿ, "ಭಗವತಿ! ಈ ಆಪತ್ತನ್ನು ಪಾರುಮಾಡಲೊಲ್ಲೆಯಾ ?" ಎಂಬುದಾಗಿ ಪರಮೇಶ್ವರಿಯನ್ನು ಕಯ್ಮುಗಿದು ಬೇಡಿದಳು. ಅನಂಗಲೇಖೆಯು ಮೂಗಿನ ಮೇಲೆ ಬೆರಲಿಟ್ಟುಕೊಂಡು ಶೂನ್ಯದೃಷ್ಟಿಯಿಂದ ಭಗವತಿಯನ್ನೇ ಎವೆ ಇಕ್ಕದೆ ನೋಡುತ್ತ ನಿಂತಳು. ಅಂಜಿಕೆಯಿಂದ ಪೌರಜನರೆಲ್ಲರು ಅಲ್ಲಲ್ಲಿಯೇ ಅಡಗಿಕೊಂಡರು. ಇಷ್ಟರಲ್ಲಿ ಆನೆಗಳ ಘೀಂಕಾರವು ಕೇಳಿಸಿತು. ಸ್ವಲ್ಪ ಹೊತ್ತಿನಲ್ಲಿಯೇ ಒಂದು ಹಿಂಡು ದೇವಾಲಯವನ್ನು ಹೊಕ್ಕು ಪ್ರಾಕಾರವನ್ನು ಮುತ್ತಿತು. ಅದರ ಹಿಂಭಾಗದಲ್ಲಿ ಯುದ್ಧಭಟರು ನುಗ್ಗಿದರು. ಶೂದ್ರಕನೂ ವಿಜಯಸಿಂಹನೂ ಮೆಯ್ಯನ್ನು ಕಣ್ಣುಮಾಡಿಕೊಂಡು ನೋಡುತ್ತಿದ್ದರು. ಇಷ್ಟರಲ್ಲಿ ಒಂದು ದೊಡ್ಡ ಆನೆಯು ದೇವಾಲಯದ ಮುಂಭಾಗದಲ್ಲಿ ನಿಂತಿತು. ಅದರ ವಾಸನೆಯನ್ನು ಮೂಸಿನೋಡಿದ ಮಾತ್ರದಿಂದಲೇ

ಮಿಕ್ಕ ಆನೆಗಳೆಲ್ಲವು ಮರುಳಾಗಿ ದಾರಿಬಿಟ್ಟು ಚಿತ್ರಗಜಗಳಂತೆ ನಿಂತು ಬಿಟ್ಟವು. ಮಾವುತನು ಸನ್ನೆಮಾಡಲಾಗಿ ಆ ಮದಗಜವು ಮುಂಡಿಯೂರಿ ಕುಳಿತುಕೊಳ್ಳಲು, ಮಾವುತನು ಝುಗ್ಗನೆ ಇಳಿದು ಶೂದ್ರಕನ ಬಳಿಸಾರ್ದು, ತಲೆವಾಗಿ ಒಂದು ಪತ್ರಿಕೆಯನ್ನು ಕೊಟ್ಟು, ಸರಿದು ನಿಂತನು. ಇಷ್ಟರಲ್ಲಿ ಅವಂತಿಯ ಯುದ್ಧವೀರನೊಬ್ಬನು ನುಗ್ಗಿ ಆ ಮಾವುತನನ್ನು ಹಿಡಿದೆಳೆಯು ಲಾಗಿ, ಆ ಆನೆಯು ಅವನನ್ನು ಬರಸೆಳೆದು ನೆಲಕ್ಕೆ ಅಪ್ಪಳಿಸಿ ಮಹಾಕಾಳಿಗೆ ಮೊದಲನೆಯ ಉಪಹಾರವನ್ನಾಗಿಸಿ, ಸುತ್ತುಮುತ್ತಣ ವೀರಭಟರ ಎದೆ ಯೊಡೆಯುವಂತೆ ಘೀಂಕಾರ ಮಾಡಿತು. ಶೂದ್ರಕನು ಆ ಓಲೆಯನ್ನು ಬಿಚ್ಚಿ ಓದುವಲ್ಲಿ—

"ಈ ಮದಗಜವನ್ನು ಏರಿ, ವಿಪತ್ತಿನಿಂದ ಪಾರಾಗಿ, ಬೆಳಗಾಗುವುದ ರೊಳಗಾಗಿ ನಿರ್ವಿಂಧ್ಯಾನದಿಯನ್ನು ದಾಟಿ, ವಿಂಧ್ಯಾರಣ್ಯವನ್ನು ಹೊಕ್ಕು ಅಲ್ಲಿರುವ ಕೋಟೆಯನ್ನು ಪ್ರವೇಶಿಸತಕ್ಕುದು" ಎಂಬುದಾಗಿ ಬರೆದಿದ್ದಿತು. ಇದನ್ನು ಓದಿದ ಕೂಡಲೇ ಶೂದ್ರಕನು ಮಾವುತನ್ನು ಗುರುತಿಸಿನೋಡಿ, "ಸಿಂಹಭಟನೆ! ಈ ಓಲೆಯನ್ನು ನಿನ್ನ ಕಯ್ಗೆ ಕೊಟ್ಟವರಾರು?" ಎಂಬು ದಾಗಿ ಪ್ರಶ್ನೆಮಾಡಲು, ಆತನು "ಪ್ರಭೋ! ತಾವು ರಾಜಪುತ್ರಿಯೊಂದಿಗೆ ಈ ಮದಸಿಂಧುರವನ್ನು ಬೇಗನೆ ಏರಬೇಕು. ಇದಿರಿಸಿದ ಎಂತಹ ಸೇನಾ ಸಮುದ್ರವನ್ನಾದರೂ ಈ ಕುಂಜರವು ಉಲ್ಲೋಲಕಲ್ಲೋಲ ಮಾಡ ಬಲ್ಲುದು. ತಮ್ಮ ಇಷ್ಟಬಂದ ಕಡೆಗೆ ಬಿಜಮಾಡಿಸಬಹುದು" ಎಂಬು ದಾಗಿ ಹೇಳುತ್ತ ಸನ್ನೆ ಮಾಡಿ ತೋರಿಸಿದ ಕೂಡಲೇ "ಆಹಾ! ಎಂತಹ ಕಟ್ಟಾಣತಿ! ದೇವೀ! ನೀನೇ ಗತಿ" ಎನ್ನುತ್ತ ಮತ್ತೊಮ್ಮೆ ಮಹಾಕಾಳಿ ಯನ್ನು ಭಕ್ತಿಭರಿತದೃಷ್ಟಿಯಿಂದ ವಂದಿಸಿ ಬೀಳ್ಕೊಂಡು, ವಿನಯವತಿಯನ್ನು ಮೊದಲು ಆನೆಯ ಮೇಲೆ ಕುಳ್ಳಿರಿಸುವಷ್ಟರಲ್ಲಿ ದೇವಳದೊಳಗಿದ್ದ ಮಾಧ ವಿಯು ಬೇಗನೆ ಓಡಿಬಂದು, "ಸ್ವಾಮೀ! ತಮ್ಮ ತಪಃಫಲಕ್ಕೆ ಅಂಟಿ ಕೊಂಡಿರುವ ವೃಂತರೂಪವಾದ ನನ್ನನ್ನು ಬಿಸುಡುವುದು ಧರ್ಮವೇ?" ಎನ್ನಲಾಗಿ ಅವಳನ್ನೂ ಆನೆಯ ಮೇಲೆ ಕುಳ್ಳಿರಿಸಿದನು. ಬಳಿಕ ವಿಜಯ ಸಿಂಹನನ್ನು ಕುರಿತು "ವೀರಕುಲಾವತಂಸಾ! ಈ ಸುಖಸಾಮ್ರಾಜ್ಯವೆಲ್ಲವೂ ನೀನು ದಯೆಪಾಲಿಸಿದುದು. ಈಗ ಸ್ವಾರ್ಥತತ್ಪರನಾದ ನಾನು ನಿನ್ನನ್ನು ಶತ್ರುಮಧ್ಯದಲ್ಲಿ ಏಕಾಕಿಯಾಗಿ ಬಿಟ್ಟು ಮುಂದೆ ಹೊರಡಬೇಕಾಗಿ

ಬಂದಿತು. ಈ ಅರಸನಿಗೆ ಸೋದರೀವಿಯೋಗಪರಿಭವಗಳೊಂದಿಗೆ ರಾಜ್ಯ ಭ್ರಂಶನನ್ನು ಮಾಡದಿರು. ಮಹಾರಾಣಿಯಾದ ಅನಂಗಲೇಖೆಯು ಮಾನ ಮರ್ಯಾದೆಗಳಿಗೆ ಕುಂದು ಬಾರದಂತೆ ಅಂತಃಪುರವನ್ನು ಸೇರಿಕೊಳ್ಳುವ ಸದುಪಾಯವನ್ನು ಮಾಡು. ನಿಷ್ಕಾರಣವಾಗಿ ದುಡುಕಿ, ಕೈಮಾಡಿ ಉಭಯಪಕ್ಷದ ಸೇನೆಯಲ್ಲಿ ರಕ್ತಪಾತಕ್ಕೆ ಅವಕಾಶವನ್ನು ಕಲ್ಪಿಸ ಬೇಡ. ನಾಳೆಯ ಸಾಯಂಕಾಲದ ವರೆಗೆ ನಾನು ಇಂದ್ರಸರೋವರದ ತೀರದಲ್ಲಿ ಬಿಡಾರಮಾಡುವೆನು. ನೀನು ಅಲ್ಲಿ ನನ್ನನ್ನು ನೋಡುವೆ ಯಂತೆ" ಎನ್ನುತ್ತ ಬೀಳ್ಕೊಂಡು, ಮಾವುತನಾದ ಸಿಂಹಭಟನ ಮುಖವನ್ನು ನೋಡುತ್ತ, ವಿಲಾಸದಿಂದ ಆನೆಯನ್ನು ಏರಿದನು. ಬಳಿಕ ಸಿಂಹಭಟನು ಏರಲು ಆ ಮದೇಭವು ಒಮ್ಮೆ ಘೀಂಕಾರ ಮಾಡಲಾಗಿ ಅಲ್ಲಿದ್ದ ಜನರ ಗುಂಡಿಗೆಯು ತತ್ತರಿಸಿತು ಮಿಕ್ಕ ಆನೆಗಳೆಲ್ಲವು ಅದರ ಹಿಂದೆಯೇ ನಡೆಯತೊಡಗಿದುವು.

ಇಷ್ಟರಲ್ಲಿ ಇದನ್ನೆಲ್ಲಾ ದೂರದಿಂದ ನೋಡುತ್ತಿದ್ದ ಅವಂತಿಯ ಸೇನಾಪತಿಯೊಬ್ಬನು ತನ್ನ ಪರಿವಾರದೊಂದಿಗೆ ಆಯುಧಪಾಣಿಯಾಗಿ ಬಂದು ಆನೆಯನ್ನು ಇದಿರಿಸಿ, ಸುಂಡಿಲನ್ನು ಕತ್ತರಿಸಲು ಖಡ್ಗವನ್ನು ಎತ್ತಿದ ಕೂಡಲೇ ವಿಜಯಸಿಂಹನು ತನ್ನ ಹರಿತವಾದ ಖಡ್ಗದಿಂದ ಅವನ ತೋಳನ್ನು ಬೀಳಿಸಿದನು ಮತ್ತೊಬ್ಬ ಕಿರಾತಭಟನು ಆ ಸೇನಾಪತಿಯ ರುಂಡ ಮುಂಡಗಳನ್ನು ಬೇರ್ಪಡಿಸಿದನು ಇಷ್ಟರಲ್ಲಿ ಆನೆಯು ವೇಗವಾಗಿ ಮುಂದೆ ನಡೆಯತೊಡಗಿತು. ಆನೆಯು ಮುಂದರಿಸಿದ ಕೂಡಲೇ ಉಜ್ಜ ಯಿನಿಯ ಯೋಧರು ವಿಜಯಸಿಂಹನನ್ನು ಮುತ್ತಿದರು. ಆದರೆ ದೇವಳದ ಗರ್ಭಗೃಹದ ಹಿಂಭಾಗದಲ್ಲಿ ಅವಿತುಕೊಂಡಿದ್ದ ಕಿರಾತಸೇನೆಯವರು ಗೂಡಿ ನಿಂದ ಹೊರಹೊಮ್ಮಿದ ಇರುವೆಗಳ ಸಾಲಿನಂತೆ ಸಾವಿರಗಟ್ಟಲೆಯಾಗಿ ಬಂದು ಆಯುಧಪಾಣಿಗಳಾಗಿ ಉಜ್ಜಯಿನಿಯ ಭಟರನ್ನು ಕರೆಯತೊಡಗಿ ದರು. ಈ ಸಮಾಚಾರವು ಅರಸನ ಕಿವಿಗೆ ಬೀಳಲು ಬಹಳ ಕಾಲ ಹಿಡಿಯಲಿಲ್ಲ. ರಾಜನು ಮುಖ್ಯ ಸೇನಾಪತಿಯನ್ನು ಕರೆದು, ರಾಣಿ ಯನ್ನೂ ರಾಜಪುತ್ರಿಯನ್ನೂ ಹೇಗಾದರೂ ಈ ಆಪತ್ತಿನಿಂದ ಪಾರುಮಾಡಿ ಜಾಗರೂಕತೆಯಿಂದ ಕರೆತರುವಂತೆ ಕಟ್ಟಾಜ್ಞಾಪಿಸಿದನು. ಸೇನಾನಿಯು ಮಿತವಾದ ಸೈನ್ಯದೊಂದಿಗೆ ಬರುವಷ್ಟರಲ್ಲಿ ಆನೆಗಳ ಹಿಂಡು ರಾಜಬೀದಿಯಲ್ಲಿ

ಹೋಗುತ್ತಿದ್ದಿತು. ನೋಡುವಲ್ಲಿ ಆನೆಗಳ ಸಂಖ್ಯೆಯು ಸುಮಾರು ಐನೂರ ಕ್ಕಿಂತಲೂ ಹೆಚ್ಚಾಗಿರಬಹುದೆಂದು ತೋರಿತು. ತನ್ನಲ್ಲಿದ್ದ ರಾವುತರ ಸೇನೆಯು ಆ ಆನೆಗಳ ಹಿಂಡನ್ನು ಇದಿರಿಸಲು ಸಾಲದೆಂದು ಭಾವಿಸಿ, ಬೇಗನೆ ಆನೆಗಳ ಸೇನೆಯನ್ನು ತರುವಂತೆ ರಾವುತನೊಬ್ಬನನ್ನು ಅಟ್ಟಿ, ದೇವಳದಲ್ಲಿ ನಡೆದ ಅನಾಹುತವೇನೆಂಬುದಾಗಿ ವಿಚಾರಿಸುವಲ್ಲಿ, ಅರಸು ಗುವರಿಯನ್ನು ಮಾತ್ರವೇ ಅಪಹರಿಸಿರುವರೆಂತಲೂ, ರಾಣಿಯು ಗರ್ಭ ಮಂದಿರದಲ್ಲಿ ಸುಮಂಗಲಿಯರೊಡನೆ ಸುಖವಾಗಿರುವಳೆಂತಲೂ ತಿಳಿದು ಬಂದಕಾರಣ, "ಈಗ ರಾಣಿಯನ್ನು ಕಾಪಿಡುವ ಅವಶ್ಯಕತೆಯೇನೂ ತೋರಲಿಲ್ಲ. ಮೊದಲು ರಾಜಪುತ್ರಿಯನ್ನು ಬಿಡಿಸಿ ತಂದಲ್ಲಿ ರಾಣಿಯು ಸುಖವಾಗಿಯೇ ಅಂತಃಪುರವನ್ನು ಸೇರುವಳು" ಎಂಬುದಾಗಿ ಯೋಚಿಸಿ, ಕಾಲಾತಿಕ್ರಮಣಭಯದಿಂದ ತನ್ನಲ್ಲಿದ್ದ ಕುದುರೆಯ ಪಡೆಯೊಂದಿಗೆ ಶೂದ್ರ ಕನ ಗಜಸೇನೆಯನ್ನು ಬೇರೆ ದಾರಿಯಿಂದ ಇದಿರಿಸಿದನು. ಆದರೆ ಅವನ ಉತ್ಸಾಹವೆಲ್ಲವು ನಿಮಿಷಮಾತ್ರದಲ್ಲಿಯೇ ಭಗ್ನವಾಯಿತು. ಸೇನೆಯೆಲ್ಲವು ನಿರ್ನಾಮವಾಯಿತು. ಸೇನಾಪತಿಯು ಹೇಗೋ ಬದುಕಿ ಹೊರಬಿದ್ದು ಅಡ್ಡ ದಾರಿಯನ್ನು ಹಿಡಿದು ಬೇಗನೆ ಗಜಸೇನೆಯನ್ನು ತಂದು ಕನ್ಯಾಪ ಹಾರಿಯನ್ನು ಕೊನೆಗಾಣಿಸಬೇಕೆಂಬುದಾಗಿ ಓಡುತ್ತಿರುವಲ್ಲಿ, ದೇವಳದ ಮುಂಭಾಗದಲ್ಲಿದ್ದ ಶಬರಸೇನೆಯು ಇವನನ್ನು ಅಡ್ಡಗಟ್ಟಿತು. ಮೊತ್ತ ಮೊದಲು ಈ ಮರುಳನು ತನ್ನ ಕಾಲ್ಬಲವೇ ತನ್ನ ಸಹಾಯಕ್ಕಾಗಿ ಬಂದಿರು ವುದೆಂಬುದಾಗಿ ಭ್ರಾಂತಿಗೊಂಡನು. ಅಷ್ಟರಲ್ಲಿ ಹರಿತವಾದ ಬಾಣದ ಮಳೆಗೆ ಮೊದಲಾಯಿತು. ಇಷ್ಟರಲ್ಲಿ ಸರುಹೊತ್ತಿನ ವೇಳೆಯಾದುದರಿಂದ, ಇದೇನೋ ಅಚಾತುರ್ಯವೆಂಬುದಾಗಿ ಭಾವಿಸಿ ಸೇನಾಪತಿಯು ಪಕ್ಕದಲ್ಲಿದ್ದ ಒಂದು ಮನೆಯೊಳಕ್ಕೆ ನುಗ್ಗಿಬಿಟ್ಟನು. ಅಷ್ಟರಲ್ಲಿ ಚಂಡವರ್ಮ, ಚಿತ್ರವೇಗ ರೆಂಬ ಇಬ್ಬರು ಸೇನಾನಾಯಕರು ಈ ಕೋಲಾಹಲವನ್ನು ಕೇಳಿ, ಸಿದ್ಧ ವಾಗಿದ್ದ ಅಶ್ವಸೇನೆಗೆ ಮಾಹಿಷ್ಮತೀಮಾರ್ಗವಾಗಿ ಉತ್ತರ ದಿಕ್ಕಿನಿಂದ ಬಂದು ಶೂದ್ರಕನನ್ನು ಇದಿರಿಸುವಂತೆ ಹೇಳಿಕಳುಹಿ, ಗಜಸೇನಾಧಿಕಾರಿ ಯಾದ ಪಿಪ್ಪಲಕನನ್ನು, ವಿದೇಹನಗರಿಯ ಮಾರ್ಗವಾಗಿ ಇದಿರಿಸುವಂತೆ ಆಣತಿಯಿತ್ತು, ಕಾಲ್ಬಲವನ್ನು ನಗರಸಂರಕ್ಷಣಾರ್ಥವಾಗಿ ಅಲ್ಲಿಯೇ ನಿಯ ಮಿಸಿ, ಮಿತವಾದ ಚತುರಂಗಸೇನೆಯೊಡನೆ ತಾವು ಕನ್ಯಾಪಹಾರಿಯನ್ನು

ಹಿಂಬಾಲಿಸಿದರು. ಪಟ್ಟಣವೆಲ್ಲವು ಹಾಹಾಕಾರ ಮಾಡತೊಡಗಿತು. ವಿನೋದವನ್ನು ನೋಡಬಂದಿದ್ದ ಜನರ ಗೋಳನ್ನು ಕೇಳತಕ್ಕವರೇ ಇಲ್ಲ ವಾಯಿತು. ಪಟ್ಟಣದಲ್ಲಿ ಎಲ್ಲೆಲ್ಲಿಯೂ ನೆಮ್ಮದಿ ಇಲ್ಲದಂತಾಯಿತು. ಕೆಲವು ಮಂದಿ ಧೀರ ಪುರುಷರು ಮಾತ್ರ ಉಪ್ಪರಿಗೆಗಳನ್ನೇರಿ ಈ ಅನಾಹುತವನ್ನು ನೋಡುತ್ತಿದ್ದರು. ಯಾರ ಸೇನೆ? ಎಲ್ಲಿಂದ ಬಂದಿತು? ಹೇಗೆ ಹೊಕ್ಕಿತು? ಇಲ್ಲಿಯವರಿಗೆ ಎಲ್ಲಿ ಅಡಗಿದ್ದಿತು? ಯಾರ ಅಪ್ಪಣೆಯಂತೆ ಹೀಗೆ ಮಾಡುತ್ತಿದೆ? ಎಲ್ಲಿಗೆ ಹೋಗುತ್ತದೆ?—ಎಂಬುದನ್ನು ಬಲ್ಲವರಾರು?

ಇತ್ತ ವಿವಾಹಾರ್ಥವಾಗಿ ಆಹೂತರಾಗಿದ್ದ ರಾಜರ ಬಿಡಾರಗಳಲ್ಲಿ "ಯಾವನೋ ಅಮಿತಸೇನೆಯೊಂದಿಗೆ ಬಂದು ಕನ್ಯೆಯನ್ನು ಅಪಹರಿಸಿ ಕೊಂಡು ಹೋದನಂತೆ" ಎಂಬ ಮಾತುಕತೆಗಳು ಮಾತ್ರವೇ ನಡೆಯುತ್ತಿದ್ದುವಲ್ಲದೆ, ಅಲ್ಲಿ ನೆರೆದಿದ್ದ ರಾಜರೆಲ್ಲರೂ ಒಟ್ಟುಗೂಡಿ, ತಮ್ಮ ತಮ್ಮ ಸೇನೆಯೊಂದಿಗೆ ಕನ್ಯಾಪಹಾರಿಯನ್ನು ಇದಿರಿಸಿ, ರಾಜಪುತ್ರಿಯನ್ನು ಹಿಂದಕ್ಕೆ ಕರೆತರಬೇಕೆಂಬ ಊಹೆಯು ಒಬ್ಬನಿಗಾದರೂ ಹೊಳೆಯಲಿಲ್ಲ. ಅವಂತೀಶ್ವರನು, 'ರಾಣಿಯೂ ತಂಗಿಯೂ ಏನಾದರೋ! ಅವರ ಸಮಾಚಾರವೇ ತಿಳಿಯಲಿಲ್ಲವಲ್ಲಾ!' ಎನ್ನುತ್ತ ಆಳಿನ ಹಿಂದೆ ಆಳನ್ನು ದೇವಾಲಯದ ಬಳಿಗೆ ಕಳುಹಿಸುತ್ತಿದ್ದನು. ಸ್ವಲ್ಪ ಹೊತ್ತಿನಲ್ಲಿ ದೂತನೊಬ್ಬನು ಹಿಂದಿರುಗಿ ಬಂದು "ದೇವಾ! ಯಾವನೋ ಒಬ್ಬನು ಲೆಕ್ಕವಿಲ್ಲದ ಆನೆಯ ಪಡೆಯೊಂದಿಗೆ ಮಹಾಕಾಳೀಮಂದಿರವನ್ನು ನುಗ್ಗಿ ವಧುವನ್ನು ಕದ್ದುಯ್ದನೆಂತಲೂ, ನಮ್ಮ ಸೈನ್ಯವು ಅವನನ್ನು ಹಿಂದಟ್ಟಿದೆ ಎಂತಲೂ, ಈಗ ಪಟ್ಟಣದಲ್ಲಿ ಗಲಭೆಯು ಶಾಂತವಾಗಿರುವುದೆಂತಲೂ ಬಿನ್ನಯಿಸಿದನು. ಅಷ್ಟರಲ್ಲಿ ಅರಸನು ಧೈರ್ಯಸಾಹಸಸಂಪನ್ನನೆನಿಸಿದ ವಿಶ್ವಾಲಕನೆಂಬ ವೀರನನ್ನು ಕರೆದು, "ಮಹಾರಾಜ್ಞಿಯ ಸಮಾಚಾರವೇನೆಂಬುದನ್ನು ತಿಳಿದು ಬಾ" ಎಂಬುದಾಗಿ ಹೇಳಿಕಳುಹಿದನು. ಅವನು ಕೂಡಲೇ ಅಲ್ಲಿಂದ ಹೊರಟು ಸಂದಿಗೊಂದಿಗಳಲ್ಲಿ ನುಗ್ಗಿ ದೇವಳದ ಬಳಿಗೆ ಬಂದು ನೋಡುವಲ್ಲಿ ಮಹಾದ್ವಾರವು ಮುಚ್ಚಿದ್ದಿತು. ಎಷ್ಟೋ ಬಗೆಯಿಂದ ಬೇಡಿಕೊಂಡರೂ ಒಳಗಿದ್ದವರು ಬಾಗಿಲನ್ನು ತೆರೆಯಲಿಲ್ಲ. ಕೊನೆಗೆ ದಿಕ್ಕು ತೋರದೆ ಸಾಹಸಮಾಡಿ ಹೆಬ್ಬಾಗಿಲಿನ ಆಸೆಯನ್ನು ಬಿಟ್ಟು ಪಕ್ಕದಲ್ಲಿದ್ದ ಮರವನ್ನು

ಹತ್ತಿ ಅದರ ಆಸರೆಯಿಂದ ಪ್ರಾಕಾರವನ್ನು ಏರಿ, ಅಲ್ಲಿಂದ ಒಳಕ್ಕೆ ದುಮ್ಮಿಕ್ಕಿದನು. ದೇವಸ್ಥಾನದ ಪ್ರಾಕಾರದಲ್ಲಿ ಊರಜನರ ವಿವಾಹ ಸಮಾರಂಭವನ್ನು ನೋಡಲೋಸುಗ ನೆರೆದಿದ್ದ ದೇಶವಿದೇಶದ ಜನರು ತುಂಬಿದ್ದರು. ಅವರಲ್ಲಿ ಕೆಲವರು ಭಯದಿಂದ ದಿಕ್ಕುತೋರದೆ ಹಂಬಲಿಸುತ್ತಿದ್ದರು. ಮತ್ತೆ ಕೆಲವರು ಆಕ್ರಂದನಮಾಡುತ್ತಿದ್ದರು. ಮಕ್ಕಳನ್ನು ಮನೆಯಲ್ಲಿಯೇ ಬಿಟ್ಟು, ವಧುವು ದೇವೀಪೂಜೆಗೆ ಬಂದ ಸಂಭ್ರಮವನ್ನು ನೋಡಿಹೋಗೋಣವೆಂದು ಬಂದಿದ್ದ ಹಲವು ಮಂದಿ ಮಡದಿಯರು ಮನೆಯಲ್ಲಿ ಮಕ್ಕಳ ಪಾಡೇನಾಯಿತೋ ಎಂಬುದಾಗಿ ಚಿಂತಿಸುತ್ತಿದ್ದರು. ಮಿಕ್ಕವರು ರಾಜಕುಲದ ವೃತ್ತಾಂತವನ್ನು ಬಗೆಬಗೆಯಾಗಿ ಹೀಯಾಳಿಸಿ ಮಾತನಾಡುತ್ತಿದ್ದರು. ಉಳಿದವರು ಪಿಸುಮಾತಿನಿಂದ ಏನನ್ನೋ ಗುಸುಗುಟ್ಟಿ ಹೇಳಿಕೊಳ್ಳುತ್ತಿದ್ದರು. ಹೀಗೆ ಬಗೆಬಗೆಯಾಗಿ ಅವರವರ ಬಾಯಿಗೆ ಬಂದಂತೆ ಆಡಿಕೊಳ್ಳುತ್ತಿದ್ದ ಜನಗಳ ನಡುವೆ ಹೇಗೋ ದಾರಿ ಮಾಡಿಕೊಂಡು ಮೆಲ್ಲಗೆ ಹಜಾರವನ್ನು ದಾಟಿ, ಗರ್ಭಗೃಹದ ಬಳಿಸಾರ್ದು, ಅಲ್ಲಿ ಬೆಚ್ಚುವೋರೆಯಿಂದ ನಿಂತಿದ್ದ ಒಬ್ಬ ಅಂತಃಪುರದ ದಾಸಿಯನ್ನು ಕಂಡು, ನಡೆದ ಸಮಾಚಾರವೇನೆಂಬುದಾಗಿ ಕೇಳಲಾಗಿ, ಹರಟೆಯ ಮಲ್ಲಿ ಎಂಬುದಾಗಿ ಹೆಸರುವಾಸಿಯನ್ನು ಪಡೆದಿದ್ದ ಆ ದಾಸಿಯು ತಾನು ಕಂಡು ಕೇಳಿದುದನ್ನೆಲ್ಲಾ ಚ, ಚೂ ತಪ್ಪದ ಹಾಗೆ ಹುಬ್ಬುಗಳನ್ನು ಹಾರಿಸುತ್ತ ಕೈಗಳನ್ನು ಆಡಿಸಿ ತಿರುಗಿಸುತ್ತ ವಿಸ್ತಾರವಾಗಿ ಹೇಳಿದಳು. ಬಳಿಕ ಮಹಾರಾಣಿಯ ಗತಿ ಏನಾಯಿತೆನಲು, ಆ ದಾಸಿಯು ಮರುಮಾತಾಡದೆ ಅವನನ್ನು ತನ್ನ ಸಂಗಡ ಬರುವಂತೆ ಸನ್ನೆಮಾಡಿ ದೇವಳದ ಪ್ರಾಕಾರದ ಹಿಂಭಾಗದಿಂದ ಹೊರಬಿದ್ದು ಅರ್ಚಕನ ಮನೆಯ ಕಡೆಗೆ ಹೋಗುವ ದಿಡ್ಡಿಯ ಬಾಗಿಲ ಬಳಿ ನಿಂತು ವಿಶ್ವಲಕನು ಬಂದಿರುವ ಸಮಾಚಾರವನ್ನು ಒಳಗಡೆಯಲ್ಲಿದ್ದ ಪೂಜಾರಿಗೆ ತಿಳುಹಲು, ಭಯದಿಂದ ನಡುಗತೊಡಗಿದ ಆ ಪೂಜಾರಿಯು ವಿಧಿಯಿಲ್ಲದೆ ಹೊರಬಂದು, ವಿಶ್ವಲಕನನ್ನು ಗುರುತಿಸಿ ಚೇತರಿಸಿಕೊಂಡು, ನಡೆದ ಸಮಾಚಾರಗಳನ್ನೆಲ್ಲ ವಿವರಿಸತೊಡಗಿದನು. ಬಳಿಕ ವಿಶ್ವಲಕನು ಕಾಲಯಾಪನೆಯನ್ನು ಸಹಿಸಲಾರದೆ, “ ಅದೆಲ್ಲಾ ಹಾಗಿರಲಿ, ನನ್ನ ಬರುವಿಕೆಯನ್ನು ಮಹಾರಾಣಿಯವರ ಸನ್ನಿಧಿಯಲ್ಲಿ ಅರಿಕೆಮಾಡು ” ಎನಲು, ಪೂಜಾರಿಯು ದೇವಿಯನ್ನು ಕಂಡು ಬಿನ್ನಯಿಸಿದ

ಕೂಡಲೇ ಅನಂಗಲೇಖೆಯು ಅಲ್ಲಿಂದ ಪರಿಜನರೊಂದಿಗೆ ಹೊರಡಲು ಅನುವಾದಳು ಆಗ ವಿಶ್ವಲಕನು ರಾಣಿಯನ್ನು ಕುರಿತು "ಈಗಲೇ ರಾಜಕುಲವನ್ನು ಸೇರುವುದಕ್ಕೆ ಸೌಕರ್ಯಗಳು ಸಾಲವು. ಗಡಿಬಿಡಿಯು ಸ್ವಲ್ಪ ಶಾಂತವಾದ ಒಡನೆ ತಕ್ಕ ಸಿಬ್ಬಂದಿಯೊಡನೆ ಕರೆದುಕೊಂಡು ಹೋಗುವ ಪ್ರಯತ್ನವನ್ನು ಮಾಡುವೆವು. ಈಗ ಮಹಾರಾಜ್ಞಿಯುವರ ಕ್ಷೇಮಸಮಾಚಾರವನ್ನು ತಿಳಿಯುವ ಸಲುವಾಗಿ ಅರಸನು ನನ್ನನ್ನು ಇಲ್ಲಿಗೆ ಅಟ್ಟಿದನು" ಎಂದು ಅಲ್ಲಿಂದ ಬೀಳ್ಕೊಂಡು ಯಾರಿಗೂ ಮೋರೆಯನ್ನು ತೋರಿಸದಂತೆ ಬೇಗಬೇಗನೆ ಸಂದಿಗೊಂದಿಗಳಲ್ಲಿ ನುಗ್ಗಿ, ಅರಮನೆಯನ್ನು ಹೊಕ್ಕು, ತನ್ನ ಹಾದಿಯನ್ನೇ ಇದಿರುನೋಡುತ್ತ ಭ್ರಾಂತನಾಗಿದ್ದ ಅರಸನನ್ನು ಕಂಡು, ಸಮಾಚಾರವನ್ನೆಲ್ಲ ಸವಿಸ್ತಾರವಾಗಿ ಅರಿಕೆಮಾಡಿದನು.

ರಾಜ—"ಶ್ರೀಮತಿಯಾದ ವಿನಯವತಿಯನ್ನು ಕದ್ದುಯ್ದವನು ಶೂದ್ರಕನೆಂಬುದು ದಿಟವೇ ?"

ವಿಶ್ವಲಕ—"ಸಂದೇಹವೇನು? ಅರ್ಚಕನೂ ಹಾಗೆಯೇ ಹೇಳುತ್ತಾನೆ."

ಮಂತ್ರಿ—"ಇಷ್ಟೊಂದು ಸೈನ್ಯವು ಅವನಿಗೆಲ್ಲಿಂದ ಬಂದಿತು ?"

ರಾಜ—"ಮಾಹಿಷ್ಮತಿಯ ಅರಸನು ತನ್ನ ಚತುರಂಗಬಲವನ್ನು ಕಳುಹಿಸಿರಬಹುದು."

ಮಂತ್ರಿ—"ಅವನೊಬ್ಬ ಮೂರ್ಖನು. ನಿಷ್ಕಾರಣವಾಗಿ ನಮ್ಮೊಂದಿಗೆ ವೈರವನ್ನು ಕಟ್ಟಿಕೊಂಡನು. ಅವನ ಗತಿಯೇನಾಗುವುದೆಂಬುದನ್ನು ಮುಂದಲ್ಲವೇ ನೋಡಬೇಕು? ಅವನ ರಾಜಲಕ್ಷ್ಮಿಯು ತೊಲಗುವ ಕಾಲವು ಹತ್ತಿರ ಬಂದಿದೆ."

ರಾಜ—"ಸೇನಾಪತಿಯನ್ನು ಚತುರಂಗಬಲದೊಡನೆ ಕಳುಹಿ, ಆ ಬ್ರಾಹ್ಮಣಾಧಮನನ್ನು ಹಿಡಿದು ಕೈಕೋಳಗಳನ್ನು ತೊಡಿಸಿ ಎಳೆದುತಂದು, ಲೋಕಕ್ಕೆಲ್ಲ ನಮ್ಮ ಕಟ್ಟಾಣತಿಯು ಇಂತಹುದೆಂಬುದಾಗಿ ತಿಳಿಯುವಂತೆ ಕೋಟೆಯ ಮೈದಾನದಲ್ಲಿ ಬಹಿರಂಗವಾಗಿ ಉರುಲುಹಾಕಿ ಕೊಲ್ಲಿಸು! ನಿರ್ಭಾಗ್ಯೆಯಾದ ಆ ನೀಚಳನ್ನು ಕರೆತಂದು ಸೆರೆಯಲ್ಲಿರಿಸು! ಮಾಹಿಷ್ಮತಿಯ ಮೇಲೆ ದಂಡೆತ್ತಿ ಹೊರಡುವಂತೆ ಕೂಡಲೇ ಡಂಗುರವನ್ನು ಹೊಯಿಸು!"

ಮಂತ್ರಿ —“ ಮಹಾಪ್ರಭುವಿನ ಅಪ್ಪಣೆ” ಎಂದು ಹೇಳಿ, ವಿಶ್ವಲಕ ನನ್ನು ಕುರಿತು, “ನೀನು ಈ ರಾತ್ರಿಯೆಲ್ಲವೂ ಅರ್ಚಕನ ಮನೆಯ ಸುತ್ತಲು ಜಾಗರೂಕತೆಯಿಂದ ನೋಡಿಕೊಳ್ಳಲು ತಕ್ಕ ಪಹರೆಯವರನ್ನು ಏರ್ಪಡಿಸಿ ನೋಡಿಕೊಳ್ಳುತಿದ್ದು ಬೆಳಗಾಗುವುದಕ್ಕೆ ಮುಂಚಿತವಾಗಿ ಮಹಾಮಾತ್ಯ ಶ್ರೀಯವರನ್ನು ಪಲ್ಲಕ್ಕಿಯಲ್ಲಿ ಕರೆತಂದು ಅಂತಃಪುರವನ್ನು ಸೇರಿಸಬೇಕು” ಎಂಬುದಾಗಿ ಕಟ್ಟಲೆಮಾಡಿ, ಅರಸನನ್ನು ಬೀಳ್ಕೊಂಡು ರಾಜಶಾಸನವನ್ನು ನೆರವೇರಿಸುವ ಸಲುವಾಗಿ ಬೇಗನೆ ಅಲ್ಲಿಂದ ತೆರಳಿದನು.

ಇತ್ತ ರಾಜನು ಅಲ್ಲಿಂದ ವಿವಾಹಮಂಟಪವನ್ನು ಸೇರಿ ಬ್ರಾಹ್ಮಣ ಕುಮಾರನ ದುರುದುಂಬಿತನವನ್ನು ವಿವರಿಸಿ, ಈ ಲಗ್ನವು ವಿಘ್ನಬಾಹುಳ್ಯ ದಿಂದ ನಿಂತಿರುವುದರಿಂದ, ಅವರವರು ತಮ್ಮತಮ್ಮ ಬಿಡಾರಗಳಿಗೆ ದಯೆ ಮಾಡಿಸಿ ವಿಶ್ರಾಂತಿಯನ್ನು ಪಡೆಯುವಂತೆ ವಿಜ್ಞಾಪಿಸಿ, ಎಲ್ಲರನ್ನು ಕಳುಹಿ, ಮಂತ್ರಿಪರಿವಾರದೊಂದಿಗೆ ಚೆಪ್ಪುಮೋರೆಯನ್ನು ಹಾಕಿಕೊಂಡು ಹೇಗೋ ಆ ರಾತ್ರಿಯನ್ನು ಕಳೆದನು.

ಇತ್ತ ಶೂದ್ರಕನು ಕುವಲಯಾಮೋದವೆಂಬ ಅನ್ವರ್ಥನಾಮ ದಿಂದೊಪ್ಪುವ ಗಜರಾಜನ ಮೇಲೆ ಕುಳಿತು, ವಿನಯವತೀಮಾಧವಿಯ ರೊಂದಿಗೆ ಪಟ್ಟಣದಿಂದ ಹೊರಬಿದ್ದು, ಹಳ್ಳತಿಟ್ಟುಗಳೆನ್ನದೆ, ಗುಡ್ಡಬೆಟ್ಟ ಗಳೆನ್ನದೆ ಕಾಡುಮೇಡಗಳೆನ್ನದೆ ನಿರಾಯಾಸವಾಗಿ ಪ್ರಯಾಣಮಾಡುತ್ತ ತನ್ನಲ್ಲಿಯೇ ಈ ಪರಿಯಾಗಿ ಯೋಚಿಸತೊಡಗಿದನು:—“ ಸಮಯಕ್ಕೆ ತಕ್ಕ ಸ್ಫೂರ್ತಿ, ಬುದ್ಧಿಶಕ್ತಿ, ವಿದ್ಯಾಚಾತುರ್ಯ, ಅಧಿಕಾರದರ್ಪ, ನೀತಿನೈಪುಣ್ಯ ಗಳಿಂದ ಒಪ್ಪುವ ರಾಜಾಧಿರಾಜರಿಗೆ ದೊರೆಯದಿರುವ ಕನ್ಯಾರತ್ನವು ಇಂದು ನನಗೆ ದಕ್ಕಿತು. ಆದರೆ ಇಂತಹ ಲಲನಾಮಣಿಯ ಲಾಭ ಕ್ಕಿಂತಲೂ ಈ ಕುಂಜರಲಾಭವು ಶ್ಲಾಘನೀಯವೆನಿಸುವುದು ನಾನೆಂದ ರೇನು ? ಇಷ್ಟೊಂದು ಸೈನ್ಯವೂ ಸಹಾಯಸಂಪತ್ತಿಯೂ ಒದಗುವುದೆಂದ ರೇನು ? ಇದೆಲ್ಲವು ಭಗವತಿಯಾದ ವಿಂಧ್ಯವಾಸಿನಿಯ ಅನುಗ್ರಹವೇ ಸರಿ” ಎಂದು ಮುಂತಾಗಿ ತನ್ನ ಭಾಗ್ಯೋದಯವನ್ನು ಕೊಂಡಾಡುತ್ತ ಪ್ರಯಾಣಮಾಡುತ್ತಿರುವಲ್ಲಿ ಆನೆಗಳ ಕೊರಳಿನ ಘಂಟಾಧ್ವನಿಯು ಕೇಳಿ ಸಿತು. ಸ್ವಲ್ಪ ಹೊತ್ತಿನಲ್ಲಿ ವೇಗವಾಗಿ ನಡೆತರುವ ಅಶ್ವಸೇನೆಯ ಕೋಲಾ ಹಲ ಧ್ವನಿಯೂ ಕಿವಿಗೆ ಬಿದ್ದಿತು. ಇದನ್ನು ಕೇಳಿದ ಕೂಡಲೇ

ಕುವಲಯಾಮೋದವು ಒಮ್ಮೆ ಗಟ್ಟಿಯಾಗಿ ಘೀಂಕಾರಮಾಡಿ ತನ್ನ ಪರಿವಾರಕ್ಕೆಲ್ಲ ಎಚ್ಚರಕೊಟ್ಟು ಬೇಗನೆ ಕಾಲು ಹಾಕತೊಡಗಿತು. ಕೆಲವು ಕಾಲದಲ್ಲಿಯೇ ಆ ಶಬ್ದವು ಮಾಹಿಷ್ಮತೀಶ್ವರನು ತನ್ನ ಸಹಾಯಾರ್ಥವಾಗಿ ಕಳುಹಿದ ಸೇನೆಯ ಅಟ್ಟಹಾಸವೆಂಬುದಾಗಿ ತಿಳಿದು ಶೂದ್ರಕನು ಆನಂದಿತನಾದನು

ಇತ್ತ ರಾಜಪುತ್ರಿಯು ತನ್ನ ಮನೋರಥವು ಈಡೇರಿದುದಕ್ಕಾಗಿ ಮಹಾಕಾಳಿಯನ್ನೂ ಮಹಾಕಾಳೇಶ್ವರನನ್ನೂ ಮನಸಾ ಬಗೆಬಗೆಯಾಗಿ ಕೊಂಡಾಡುತ್ತ, ಬಂಧುವಿರಹದಿಂದ ಉದ್ವಿಗ್ನೆಯಾಗಿ, ಲೋಕವು ಏನೆನ್ನುವುದೋ ಎಂಬುದಾಗಿ ಶಂಕಿಸುತ್ತ, ತನ್ನ ಭಾವಿಸ್ಥಿತಿಗತಿಗಳನ್ನು ಕುರಿತು ಮನಸ್ಸಿನಲ್ಲಿ ವಿತರ್ಕಿಸುತ್ತ ಮೌನವಾಗಿ ಕುಳಿತಿದ್ದಳು. ಹೀಗೆ ಕೆಲವು ಗಾವುದಗಳು ಹಿಂದುಳಿದುವು ಇಷ್ಟರಲ್ಲಿ ಕುಮುದಿನೀಲೋಲನಾಗಿದ್ದ ದ್ವಿಜರಾಜನ ವಿಲಾಸವನ್ನು ಕಂಡು ಈರ್ಷ್ಯಾಗ್ರಸ್ತನಾದ ಲೋಕಬಾಂಧವನು ಮೆಲ್ಲಗೆ ಹೊರಬಿದ್ದು ತನ್ನ ಮಡದಿಯಾದ ಪದ್ಮಿನಿಯ ಸ್ಥಿತಿಗತಿಗಳನ್ನು ಬೇಗನೆ ತಿಳಿಯಲೋಸುಗ ದೂರದಿಂದಲೇ ಎತ್ತರವಾದ ಬೆಟ್ಟದ ಕೋಡುಗಲ್ಲನ್ನು ಏರಿ ಇಣಿಕಿ ನೋಡತೊಡಗಿದನು. ಇಂತು ಸೂರ್ಯದೇವನ ಚಾಳಿಯನ್ನು ಕಂಡು ಮಾರುತನು ತಾನೂ ಮೆಲ್ಲಮೆಲ್ಲಗೆ ಅಡಿ ಇಡುತ್ತ ತನ್ನ ಮಡದಿಯರನ್ನು ಸೇರುತ್ತಿದ್ದನು ಇಂತು ಸೂರ್ಯನ ನಡೆವಳಿಯನ್ನು ಕಂಡು ಸಹಿಸಲಾರದೆ ಅಂಧಕಾರವು ಕೋಪೋದ್ರಿಕ್ತವಾಗಿ ಇದಿರಿಸಬಂದಿತೋ ಎಂಬಂತೆ ಮಾಳವೇಶ್ವರನ ಗಜಸೇನೆಯು ಬೇರೊಂದು ದಾರಿಯಿಂದ ಶೂದ್ರಕನನ್ನು ಅಡ್ಡಯಿಸಿತು. ಅಷ್ಟರಲ್ಲಿ ವೀರಪುರುಷರ ಎದೆಯು ತತ್ತರಿಸುವಂತೆ ಭೀಕರವಾದ ಶಂಖಧ್ವನಿಯೂ ಕೇಳಿಸಿತು. ಬುದ್ಧಿಪ್ರಧಾನನಾದ ಶೂದ್ರಕನಿಗೆ ಇದು ಹೀಗೆಯೇ ಸರಿ ಎಂಬುದಾಗಿ ನಿರ್ಧರಿಸಲು ಬಹಳ ಕಾಲ ಹಿಡಿಯಲಿಲ್ಲ. ಸಿಂಹಭಟನು ಸಲಗವನ್ನು ಪ್ರೋತ್ಸಾಹಿಸಿ ಬೇಗನೆ ಮುಂದೆ ನಡೆಯಿಸುತ್ತಿದ್ದನು ಕುವಲಯಾಮೋದದ ಘೀಂಕಾರದಿಂದ ಅದರ ಹಿಂದಿದ್ದ ಆನೆಗಳೆಲ್ಲ ಸೊಂಡಿಲುಗಳನ್ನು ಮೇಲಕ್ಕೆತ್ತಿ ಬೆಟ್ಟಗಳು ಬಿರಿಯುವುವೋ, ಕಡಲು ಮೊರೆದು ಉಕ್ಕಿತೋ ಎನ್ನುವಂತೆ ಗಟ್ಟಿಯಾಗಿ ಒಮ್ಮೆಯೇ ಘೀಂಕಾರಮಾಡಿ, ಕೊಂಬುಗಳನ್ನು ಸಜ್ಜುಗೊಳಿಸಿ ಸಲಗನನ್ನು ಮುತ್ತಿಕೊಂಡುವು. ಕೆಲವು

ನಿಮಿಷಗಳೊಳಗಾಗಿ ಇದಿರಿಸಿದ ಆನೆಯ ಪಡೆಗೂ ಈ ಕಡೆಯ ಗಜಸೇನೆಗೂ ತಿವಿದಾಟಕ್ಕೆ ಮೊದಲಾಯಿತು ಬಳಿಕ ಶೂದ್ರಕನ ಗಂಧಹಸ್ತಿಯು ತನ್ನ ಪರಿವಾರವನ್ನೆಲ್ಲ ಹಿಂದುಮಾಡಿ ತಾನೇ ಮುಂದರಿಸಿತು. ಇದರ ಗಂಧವನ್ನು ಮೂಸಿನೋಡಿದೊಡನೆಯೇ ಅವಂತೀಶ್ವರನ ಗಜಸೇನೆಯು ಅದರ ಇದಿರಾಗಿ ನಿಲ್ಲಲಾರದೆ ಸೊಂಡಿಲುಗಳನ್ನು ಇಳಿಸಿ ಹಿಮ್ಮೆಟ್ಟಿತು. ಮಾವುತರಿಗೆ ಇದರ ವಿಚಿತ್ರತೆ ಏನೆಂಬುದು ತಿಳಿಯದೆ ಆನೆಗಳನ್ನು ಶೂದ್ರಕನ ಕಡೆಗೆ ತಿರುಗಿಸಲು ಎಷ್ಟೋ ಪಾಡುಪಟ್ಟರೂ ಸಫಲವಾಗಲಿಲ್ಲ. ಇಷ್ಟರಲ್ಲಿ ಶಬರಸೇನೆಯ ಶರವರ್ಷವು ಬಲವಾಗಿ ಸುರಿಯತೊಡಗಲು ಅವಂತೀಶ್ವರನ ಸೈನ್ಯವು ದಿಕ್ಕುಪಾಲಾಗಿ ಓಡತೊಡಗಿತು ಮಾಹಿಷ್ಮತೀಶ್ವರನ ಸೈನ್ಯವು ಇದೇ ಸಮಯವೆಂದು ಅವಂತೀಶ್ವರನ ಸೈನ್ಯದ ಮೇಲೆ ಬಿದ್ದು ಧ್ವಂಸಗೊಳಿಸತೊಡಗಿತು. ನೂರಾರು ಆನೆಗಳು ಉರುಳಿಬಿದ್ದುವು. ಇದನ್ನು ಕಂಡು ಅವಂತೀಶ್ವರನ ಗಜಸೇನಾನಾಯಕನಾದ ವಿಪ್ಪಲಕನು ಬೇರೊಂದು ಗಂಧಹಸ್ತಿಯನ್ನೇರಿ ಶೂದ್ರಕನನ್ನು ಇದಿರಿಸಿದನು ಇದನ್ನು ಕಂಡು ಶೂದ್ರಕನ ಆನೆಯು ಸಹಿಸಲಾರದೆ ಬೇಗನೆ ಮುಂದರಿಸಿ ವಿಪ್ಪಲಕನ ಕಯ್ಯಲ್ಲಿದ್ದ ಈಟಿಯನ್ನು ಕಸುಗೊಂಡು ಅದರಿಂದಲೇ ಅವನನ್ನು ತಿವಿದು ಕೆಡಹಿ, ಆ ಇದಿರಾನೆಯನ್ನು ಆ ಭಲ್ಲೆಯಿಂದಲೇ ಚುಚ್ಚಿ ನೆಲಕ್ಕೆ ಉರುಳಿಸಿತು. ಬೇಡರ ಪಡೆಯ ಹಾವಳಿಯನ್ನು ತಾಳಲಾರದೆ ಮಿಕ್ಕ ಆನೆಗಳೆಲ್ಲವೂ ಹಿಂದೆಹಿಂದೆ ನಡೆಯುತ್ತ ನಿರ್ವಿಂಧ್ಯಾನದಿಯಲ್ಲಿ ಉರುಳಿಬಿದ್ದು ಈಜಿಕೊಂಡು ಆಚೆಯ ದಡವನ್ನು ಸೇರಿ ಓಡತೊಡಗಿದುವು ಹತಶೇಷವಾದ ಅವಂತೀಶ್ವರನ ಸೈನ್ಯವು ಪಲಾಯನಸೂಕ್ತವನ್ನು ಪಾರಾಯಣ ಮಾಡತೊಡಗಿತು.

ಬಳಿಕ ಶೂದ್ರಕನು ಕಿರಾತಸೇನೆಯನ್ನು ಮುಂದೆ ನಡೆಯ ಹೇಳಿ ಮಾಹಿಷ್ಮತೀಶ್ವರನ ಸೇನೆಯನ್ನು ಹಿಂದಿಟ್ಟುಕೊಂಡು, ನಿರ್ವಿಂಧ್ಯಾನದಿಯನ್ನು ದಾಟಿ, ಆ ದಿನ ಅಲ್ಲಿಯೇ ಬಿಡಾರಮಾಡಿ ತನ್ನ ದಿನಚರ್ಯೆಯನ್ನು ನೆರವೇರಿಸಿಕೊಳ್ಳುವಷ್ಟರಲ್ಲಿ ವಿಜಯಸಿಂಹನು ಪರಿವಾರದೊಂದಿಗೆ ಸುರಕ್ಷಿತವಾಗಿ ಅಲ್ಲಿಗೆ ಬಂದು ಸೇರಿದನು. ಆದರೆ ಶೂದ್ರಕನ ಬಿಡಾರಕ್ಕೂ ತಾನು ಬಿಡಾರಮಾಡಿದ ಪ್ರದೇಶಕ್ಕೂ ಒಂದು ಹರಿದಾರಿಯಷ್ಟು ದೂರವಿದ್ದಿತು.

ಇತ್ತ ಅವಂತೀಶ್ವರನು ಶೂದ್ರಕನನ್ನು ಸೆರೆಹಿಡಿದು ತರುವಂತೆ ಕಟ್ಟಲೆ ಮಾಡಿ ಕಳುಹಿದ ಸೇನಾಪತಿಯಾದ ಜೀಮೂತವರ್ಮನು ಸಮುದ್ರಭೀಕರ

ವಾದ ಸೇನೆಯೊಂದಿಗೆ ಹೊರಟು, “ಹೇಗಾದರೂ ಸಾಹಸಮಾಡಿ, ಆ ಹುಲುಹಾರುವನನ್ನು ಹಿಡಿದೇ ತೀರಬೇಕು. ಇಲ್ಲವಾದರೆ ನಾನು ಸೇನಾ ಪತಿಯಾದುದು ವ್ಯರ್ಥ. ಅರಸನ ತಂಗಿಗೆ ಯಾವುದೋ ಮಾಟಮಾಡಿ ಮರುಳುಗೊಳಿಸಿ ಕದ್ದು ತಂದಿರುವನು ಆಹಾ! ಎಂತಹ ಕಾಲಗತಿ ಯಿದು! ತಿರುಕನಾದ ಬ್ರಾಹ್ಮಣನೆಂದರೇನು? ರಾಜಪುತ್ರಿಯನ್ನು ಕದ್ದು ತರುವುದೆಂದರೇನು? ಇವನಿಗೆ ಒತ್ತಾಸೆಮಾಡಿದ ಮಾಹಿಷ್ಮತೀಶನಿಗಾದರೂ ಏನು ಹುಚ್ಚು ಹಿಡಿಯಿತು! ಇರಲಿ! ಇವರ ಸೊಕ್ಕನ್ನೆಲ್ಲಾ ಮುರಿಯ ದಿದ್ದರೆ ಮಾನವುಳಿಯುವುದಿಲ್ಲ. ಹೇಗಾದರೂ ಈ ಸಮರಮಹೋತ್ಸವ ದಲ್ಲಿ ಜಯರೇಖೆಯನ್ನು ಪಡೆಯಲೇ ಬೇಕು” ಎಂದು ಮುಂತಾಗಿ ತನ್ನ ಪರಿವಾರಕ್ಕೆ ತಿಳಿಯ ಹೇಳುತ್ತ ವೇಗವಾಗಿ ನಡೆದುಬರುತ್ತಿದ್ದನು ಚತು ರಂಗಬಲದ ತುಳಿತದಿಂದೆದ್ದ ಧೂಳಿಯು ದೂರದಿಂದಲೇ ವಿಜಯಸಿಂಹನ ಕಣ್ಣಿಗೆ ಕಾಣಿಸಿತು. ರಣವಿಶಾರದನಾದ ವಿಜಯಸಿಂಹನು ಬೇಗನೆ ತುತೂರಿಯನ್ನು ಊದಿ, ತನ್ನ ಸೇನೆಯನ್ನೆಲ್ಲಾ ವ್ಯೂಹರಚನೆಯಿಂದ ಸಜು ಗೊಳಿಸಿದನು ನಿತ್ಯಾನುಷ್ಠಾನತತ್ಪರನಾಗಿದ್ದ ಶೂದ್ರಕನಿಗೆ ಈ ವಿಚಾ ರವೇ ತಿಳಿಯಲಿಲ್ಲ. ಸ್ವಲ್ಪ ಹೊತ್ತಿನಲ್ಲಿ ಎರಡೂ ಸೇನೆಗಳು ಸಂಧಿ ಸಿದುವು. ಜೀಮೂತವರ್ಮನು ತನ್ನ ಸೈನಿಕರನ್ನು ಬಗೆಬಗೆಯ ಪ್ರತ್ಯಾಸೆ ಗಳಿಂದ ಪ್ರೋತ್ಸಾಹಗೊಳಿಸಿ ಯುದ್ಧಕ್ಕೆ ಮೊದಲು ಮಾಡಿದನು. ರಾತ್ರಿ ಯೆಲ್ಲ ನಿದ್ದೆ ಇಲ್ಲದಿದ್ದುದರಿಂದಲೂ, ದೂರ ಪ್ರಯಾಣಮಾಡಿ ಸ್ವಲ್ಪವೂ ವಿಶ್ರಾಂತಿಯಿಲ್ಲದೆ ಬಂದವರು ಬಂದ ಹಾಗೆಯೇ ಯುದ್ಧಕ್ಕೆ ಮೊದಲು ಮಾಡಿದುದರಿಂದಲೂ, ಜೀಮೂತವರ್ಮನ ಸೈನಿಕರು ಬೇಗನೆ ಹಿಮ್ಮೆಟ್ಟ ತೊಡಗಿದರು. ಕೆಲವರು ತಾವಾಗಿಯೇ ಶಸ್ತ್ರಗಳನ್ನು ಕೆಳಗಿಟ್ಟು ಮರೆ ಹೊಕ್ಕರು. ಕೆಲವರು ಹಿಂದಿರುಗಿ ನಿಂತರು. ಹಲವರು ಹುಲ್ಲನ್ನು ಕಚ್ಚಿದರು. ಇತರರು ಓಡಿಹೋದರು. ಬಳಿಕ ವಿಜಯಸಿಂಹನು ವಿಜಯ ಸೂಚಕವಾದ ತುತೂರಿಯನ್ನು ಮತ್ತೊಮ್ಮೆ ಊದಿ ಶತ್ರುಸೇನೆಯ ಆಯುಧ ಗಳನ್ನೂ ವಾಹನಗಳನ್ನೂ, ಶರಣಾಗತರಾದ ಸೈನಿಕರನ್ನೂ ಲೆಕ್ಕಮಾಡಿ ತನ, ಸೇನೆಯ ಪಟ್ಟಿಯಲ್ಲಿ ಸೇರಿಸಿ, ತಮ್ಮ ಕಡೆ ಮಡಿದ ಹಲವು ಮಂದಿ ಸೈನಿಕರನ್ನೂ ಗುರುತಿಸಿ, ಅಲ್ಲಿಂದ ಹೊರಟು, ಶೂದ್ರಕನ ಬಳಿಸಾರ್ದು, ತಾನು ನಡೆಯಿಸಿದ ಅತ್ಯಲ್ಪಸಾಹಸಕೃತ್ಯವನ್ನು ಅರಿಕೆಮಾಡಿದನು.

ಶೂದ್ರಕನು ವಿಜಯಸಿಂಹನನ್ನು ಬಾಚಿ ತಬ್ಬಿಕೊಂಡು ಅದುವರೆಗೆ ತನಗೆ ಒದಗಿದ ಪ್ರತ್ಯವಾಯಗಳನ್ನೂ ತಾನು ಅವುಗಳಿಂದ ಪಾರಾದ ರೀತಿಯನ್ನೂ ವಿವರಿಸಿ ಸತ್ಕರಿಸಿದನು. ಬಳಿಕ ಅಲ್ಲಿ ನೆರೆದಿದ್ದ ಸೇನೆಯೆಲ್ಲ ಶೂದ್ರಕನ ಅಪ್ಪಣೆಯಂತೆ ತಮ್ಮತಮ್ಮ ನಿತ್ಯಕೃತ್ಯಗಳನ್ನು ನೆರವೇರಿಸಿ ಭೋಜನಾದಿಗಳನ್ನು ಮುಗಿಸಿ ಆಯಾಸಪರಿಹಾರಾರ್ಥವಾಗಿ ಅಲ್ಲಲ್ಲಿ ವಿಶ್ರಮಿಸಿಕೊಂಡಿತು.

ಅಪರಾಹ್ಣವು ಕಳೆದು ಬಿಸಿಲು ತಂಪೇರಿದ ಕೂಡಲೇ ಅಲ್ಲಿಂದ ಸೇನೆಯೊಂದಿಗೆ ಹೊರಟು ಸಂಜೆಯ ಹೊತ್ತಿಗೆ ಇಂದ್ರಸರೋವರವನ್ನು ಸೇರಿ, ಆ ರಾತ್ರಿಯನ್ನು ಅಲ್ಲಿಯೇ ಕಳೆದು, ಬೆಳಗಾಗುತ್ತಲೇ ಆ ಸರೋವರದಲ್ಲಿ ಮಿಂದು ಎಲ್ಲರೂ ತಮ್ಮತಮ್ಮ ದಿನಚರ್ಯೆಯನ್ನು ಮುಗಿಸಿದರು ಇಂದ್ರಸರೋವರವು ಪಾವನತಮವಾದ ಆಶ್ರಮಪ್ರದೇಶವಾಗಿದ್ದಿತು. ಅವಂತಿ ರಾಜರ ಪೂರ್ವಿಕರೆಲ್ಲರು ಮುದಿತನದಲ್ಲಿ ರಾಜ್ಯಭಾರವನ್ನು ಮಕ್ಕಳಲ್ಲಿರಿಸಿ, ವಾನಪ್ರಸ್ಥಾಶ್ರಮವನ್ನು ಕೈಕೊಂಡು, ಈ ಸರೋವರದ ತೀರದಲ್ಲಿ ಪರ್ಣಶಾಲೆಗಳನ್ನು ಕಟ್ಟಿಕೊಂಡು, ತಪಸ್ವಿಗಳಾಗಿ ಯೋಗಮಾರ್ಗದಿಂದ ದೇಹತ್ಯಾಗ ಮಾಡುವ ವಾಡಿಕೆಯಿದ್ದಿತು. ಪೂರ್ವದಲ್ಲಿ ರಾಜ್ಯಭ್ರಷ್ಟನಾದ ದೇವೇಂದ್ರನು ಈ ಸರೋವರದ ತೀರದಲ್ಲಿ ದೀರ್ಘಕಾಲ ತಪವನ್ನಾಚರಿಸಿ, ದೈತ್ಯರನ್ನು ಗೆದ್ದು, ಮರಳಿ ತನ್ನ ಸ್ವರ್ಗಾಧಿಪತ್ಯವನ್ನು ಪಡೆದ ಕಾರಣ ಈ ಸರೋವರಕ್ಕೆ ಇಂದ್ರಸರೋವರವೆಂಬ ಹೆಸರು ಪ್ರಸಿದ್ಧಿಗೆ ಬಂದಿತು ಇಂತು ತಪಸ್ಸಿದ್ಧಿಯನ್ನು ಪಡೆದ ಇಂದ್ರನು ತನಗೆ ಪ್ರತ್ಯಕ್ಷವಾಗಿ ವರವನ್ನಿತ್ತ ಪರಮೇಶ್ವರನನ್ನು ಬೇಡಲಾಗಿ ಇಂದ್ರನ ಪ್ರಾರ್ಥನೆಯಂತೆ ಭಗವಂತನು "ಈ ಪ್ರದೇಶದಲ್ಲಿ ಬಂದು ನಿಂತು ಒಮ್ಮೆ ಈ ಸರೋವರದಲ್ಲಿ ಮಿಂದ ಪ್ರತಿಯೊಬ್ಬರ ಸಂಕಲ್ಪಗಳೂ ಕೈಗೂಡುವುವು. ತಪಸ್ಸು ಬೇಗನೆ ಸಿದ್ಧಿಯನ್ನು ಪಡೆಯುವುದು ಇಲ್ಲಿ ಆಚರಿಸಿದ ಧರ್ಮವು ಅತ್ಯಲ್ಪವಾದರೂ ಪರಿಪೂರ್ಣತೆಯನ್ನು ಪಡೆಯುವುದು. ಬುದ್ಧಿಯು ನೈರ್ಮಲ್ಯವನ್ನು ಪಡೆದು ಶಾಂತಿಯನ್ನು ಹೊಂದುವುದು" ಎಂಬುದಾಗಿ ವರವನ್ನಿತ್ತನು.

ಇಂತಹ ಪವಿತ್ರವಾದ ಸರೋವರದಲ್ಲಿ ಮಿಂದು, ವಿನಯವತಿಯು ತನ್ನ ಕುಲದೇವತೆಯಾದ ಮಹಾಕಾಳಿಯನ್ನು ಭಕ್ತಿಭರಿತೆಯಾಗಿ ಮನಸಾ ವಂದಿಸಿದಳು. ಒಡನೆಯೇ ಆಕೆಯ ಮನಸ್ಸಿನಲ್ಲಿ ಈ ಬಗೆಯ ಊಹೆಗಳು

ಹೊಳೆಯ ತೊಡಗಿದುವು:—"ಆಹಾ! ಪಟ್ಟಣದಲ್ಲಿ ವಾಸಮಾಡುವ ಜನಗಳ ಮೊದ್ದುತನವನ್ನು ಎಷ್ಟು ಹೇಳಿದರೂ ತೀರದು. ಸ್ವಭಾವರಮಣೀಯ ಗಳಾದ ವಸ್ತುಗಳನ್ನು ಅಲ್ಲಗಳೆದು ಕೃತಕಸರೋವರಗಳಲ್ಲಿಯೂ, ಯಂತ್ರ ಸಹಾಯದಿಂದ ನೀರು ಸುರಿಯುವ ಧಾರಾಗೃಹಗಳಲ್ಲಿಯೂ ಮಿಂದು, ದೇವಗಂಗೆಯಲ್ಲಿ ಸ್ನಾನಮಾಡಿದವರಂತೆ ಉಬ್ಬಿಹೋಗುವರು ಇಲ್ಲಿಯ ಬಳ್ಳಿಮನೆಗಳನ್ನೂ ರಾಜೋದ್ಯಾನಗಳಲ್ಲಿ ಕೃತಕಗಳಾದ ಲತಾನಿಕುಂಜ ಗಳನ್ನೂ ಹೋಲಿಸಿದರೆ ತೋರುವ ತಾರತಮ್ಯವು ಅಷ್ಟಿಷ್ಟಲ್ಲ. ನಾಗರಿಕರು ಗಿಳಿ, ಸಾರಿಕೆ, ಕೋಗಿಲೆ, ನವಿಲು ಮುಂತಾದ ಪಕ್ಷಿಜಾತಿಗಳನ್ನು ಬಂಧನ ದಲ್ಲಿರಿಸಿ ಅವುಗಳ ಇಂಚರವನ್ನು ಕೇಳಿ ಆನಂದಿತರಾಗುವರು. ಇಲ್ಲಿ ಸ್ವೇಚ್ಛೆಯಿಂದ ವಿಹರಿಸುವ ಆ ಹಕ್ಕಿಗಳ ಇಂಚರವು ಎಷ್ಟು ಮನೋಹರ ವಾಗಿರುವುದು! ಒಟ್ಟದ ಮೇಲೆ ಪಟ್ಟಣಿಗರು ಅನುಭವಿಸುವುದೆಲ್ಲವೂ ಕೃತಕವಾದುದೆನಲು ಯಾವ ಅಭ್ಯಂತರವೂ ಇಲ್ಲ. ಮಿಥ್ಯಾವಿಲಾಸ, ಕೃತಕಾಲಾಪ, ಮಾಯಾಜೀವಿತ, ಮಹೇಂದ್ರಜಾಲಸಂಸರ್ಗ, ಕೃತಕ ನಾಟ್ಯಗಳೇ ಪಟ್ಟಣಗಳಲ್ಲಿ ತುಂಬಿರುವುವು. ಇಲ್ಲಿಯ ಜಿಂಕೆಗಳ ಅಂಗ ಪುಷ್ಟಿಯೂ, ನಯನಚಾಂಚಲ್ಯ ಸೌಂದರ್ಯಗಳೂ ಪಟ್ಟಣದಲ್ಲಿ ನಿರ್ಬಂಧಕ್ಕೆ ಗುರಿಯಾಗಿರುವ ಹರಿಣಗಳಿಗೆ ಬರುವುದಾದರೂ ಹೇಗೆ? ಪಾಪನಿವಾರಕ ವೆನಿಸಿ ಪವಿತ್ರತೆಯಿಂದಲೂ ಶೈತ್ಯಮಾಧುರ್ಯಗಳಿಂದಲೂ ಆಪ್ಯಾಯಕವಾದ ಈ ಸರೋವರದ ಜಲದಲ್ಲಿ ಒಮ್ಮೆ ಮಿಂದವನಿಗೆ ನಮ್ಮ ಅಂತಃಪುರದ ಉದ್ಯಾನ ಸರೋವರಗಳಲ್ಲಿ ಬೇಸರಹುಟ್ಟುವುದು, ಇಲ್ಲಿಯ ಜಲಪುಷ್ಪಗಳ ಪರಿಮಳವು ಇಂದ್ರಿಯಮೋಹಕವಾಗಿರುವುದಲ್ಲವೇ! ಈ ತಾವರೆಯ ಕೊಳದಲ್ಲಿ ಸ್ವಚ್ಛಂದದಿಂದ ವಿಹರಿಸುವ ಅಂಚೆಗಳ ಉಲ್ಲಾಸಕ್ಕೆ ಪಾರವೇ ಇಲ್ಲ." ಹೀಗೆ ಹಲವು ಪರಿಯಿಂದ ಆ ಸನ್ನಿವೇಶಗಳಲ್ಲಿನ ಸೊಬಗನ್ನು ನೋಡಿ ಆನಂದಿಸುತ್ತ ತನ್ನ ಒಡನಾಡಿಯಾದ ಮಾಧವಿಯೊಂದಿಗೆ ಸರೋ ವರದ ತೀರದಲ್ಲಿ ಮಂದಮಾರುತವನ್ನು ಸೇವಿಸುತ್ತ ಬಂಧುವಿಯೋಗ ಜನಿತವಾದ ಮನಃಖೇದವನ್ನು ಮರೆತಿದ್ದಳು.

ಇತ್ತ ಶೂದ್ರಕನು ತನ್ನ ಸೇನೆಯನ್ನು ಸುಖವಾಗಿ ವಿಶ್ರಮಿಸಿಕೊಳ್ಳು ವಂತೆ ಆಣತಿಯಿತ್ತು ವಿಜಯಸಿಂಹನನ್ನೂ ಸಿಂಹಭಟನನ್ನೂ ಸಂಗಡ ಕರೆದು ಕೊಂಡು ಮಧ್ಯಾಹ್ನದ ವರೆಗೆ ಸುತ್ತುಮುತ್ತಲೂ ಅಲ್ಲಲ್ಲಿ ಸಂಚರಿಸಿ

ಹಿಂದಿರುಗಿ ಸ್ನಾನಾದಿ ಮಾಧ್ಯಾಹ್ನಿಕ ಕೃತ್ಯಗಳನ್ನು ನೆರವೇರಿಸಿ ಮೃಷ್ಟಾನ್ನ ವನ್ನುಂಡು ವಿಶ್ರಮಿಸಿದ ಬಳಿಕ ಸಂಧ್ಯಾಸಮಯದಲ್ಲಿ ವಿಹಾರವ್ಯಾಜದಿಂದ ಹೊರಟು ಸರೋವರದ ಸೋಪಾನಗಳಲ್ಲಿ ಕುಳಿತು ವನಕುಸುಮಗಳ ಪರಿಮಳವನ್ನು ಹೊತ್ತು, ತಾವರೆಯ ಕೊಳದ ಮೇಲೆ ಹರಿದುಬರುವ ತಂಗಾಳಿಗೆ ಮೆಯ್ಯೊಡ್ಡಿ ಆನಂದಿತನಾಗಿ, ಈ ಕೊಳದಲ್ಲಿ ತೆಪ್ಪದ ಮೇಲೆ ಕುಳಿತು ಜಲಕೇಳೀವಿಹಾರವನ್ನು ಸಲ್ಲಿಸುವುದು ಸಾಧ್ಯವೇ? ಎಂಬುದಾಗಿ ಸಿಂಹಭಟನೊಂದಿಗೆ ಹೇಳಲಾಗಿ, ಕೆಲವು ಹೊತ್ತಿನಲ್ಲಿ ಸೈನಿಕರು ಕಾಡಿನಲ್ಲಿ ಒಣಗಿ ನಿಂತಿದ್ದ ಮರಗಳನ್ನೂ ಬಿದಿರುಮೆಳೆಗಳನ್ನೂ ಕಡಿದುತಂದು ಒಂದು ತೆಪ್ಪವನ್ನು ನಿರ್ಮಿಸಿದರು

ತರುವಾಯ ಶೂದ್ರಕನು ಮಾಧವೀ ವಿನಯವತಿಯರನ್ನು ಬರಮಾಡಿ ಅಲ್ಪ ಪರಿವಾರದೊಂದಿಗೆ ಆ ತೆಪ್ಪವನ್ನೇರಿ ಕೊಳದ ಮಧ್ಯದಲ್ಲಿದ್ದ ಮಂಟಪವನ್ನು ಸೇರಿ ಸ್ವಲ್ಪ ಕಾಲ ಅಲ್ಲಿಯೇ ಕುಳಿತು ಜಲಚರಪಕ್ಷಿಗಳ ಕ್ರೀಡಾವಿಲಾಸಗಳನ್ನು ನೋಡಿ ಆನಂದಿಸುತ್ತ ಸುಖಸಂಕಥಾವಿನೋದದಿಂದ ಕಾಲಕಳೆಯುತ್ತಿರುವಲ್ಲಿ, ವಿನಯವತಿಯು ತನ್ನ ಸಖಿಯಾದ ಮಾಧವಿಯೊಂದಿಗೆ ಮಂಟಪದ ಮೇಲ್ಭಾಗದಲ್ಲಿ ಕೆತ್ತಿರುವ ವಿಗ್ರಹಗಳ ಸೌಂದರ್ಯವನ್ನು ನೋಡಬೇಕೆಂಬ ಕುತೂಹಲದಿಂದ ಏಣಿಯ ಮೂಲಕ ಮೇಲೆ ಹತ್ತಿಹೋದಳು. ಅವರ ಮೆಯ್ಗಾವಲಿಗಾಗಿ ಇಬ್ಬರು ಚಾರರು ಹಿಂಬಾಲಿಸಿದರು. ಮಿಕ್ಕವರು ತೆಪ್ಪದ ಮೇಲೆಯೇ ಇದ್ದರು. ಆ ಸಮಯದಲ್ಲಿ—

ವಿಜಯಸಿಂಹ—“ಸ್ವಾಮಿಾ! ತಾವು ಬಯಸಿದ ಲೋಕೋತ್ತರಪ್ರತಿಮೆಯು ತಮಗೆ ದಕ್ಕಿತಲ್ಲವೇ ? ”

ಶೂದ್ರಕ—“ ಪ್ರತಿಮೆಯು ದೊರೆತ ಮಾತ್ರದಿಂದಲೇ ಧನ್ಯನಾಗಲಿಲ್ಲ. ಪದಾರ್ಥಲಾಭಕ್ಕಿಂತಲೂ ಪರಿಪಾಲನವು ತುಂಬ ಕಷ್ಟವಲ್ಲವೇ! ಕಾಮವನ್ನು ಉಪಭೋಗದಿಂದ ಶಾಂತಿಗೊಳಿಸುವುದೆಂಬುದು ಬೆಂಕಿಯನ್ನು ನಂದಿಸುವ ಸಲುವಾಗಿ ಅದರ ಮೇಲೆ ತುಪ್ಪವನ್ನು ಸುರಿದಂತೆಯೇ ಸರಿ. ಇದಕ್ಕೆ ಮಿತಿಯುಂಟೇ ? ಈ ನನ್ನ ಮನೋರಥಸಿದ್ಧಿಯಲ್ಲಿ ನೀವು ಮೂವರು ತ್ರಿಮೂರ್ತಿಗಳಂತೆ ಬದ್ಧಕಂಕಣರಾಗಿ ಮುಂದರಿಸದಿದ್ದಲ್ಲಿ ನನ್ನ ವಾಂಛಿತಫಲವು ವೃಂತಸಮೇತವಾಗಿ ಕಳಚಿ ನೆಲದ ಮೇಲೆ ಬಿದ್ದು ಯಾವಾಗಲೋ ಮಣ್ಣಿನಲ್ಲಿ ಸೇರಿಹೋಗುತ್ತಿದ್ದಿತು.”

ಸಿಂಹಭಟ—“ಲೋಕೋತ್ತರ ಮಹಿಮೆಯುಳ್ಳ ಉದಾರಪುರುಷರ ಸಂಕಲ್ಪವು ಎಂದಿಗೂ ಸ್ವಾರ್ಥವೆನಿಸಲಾರದು. ಅವರ ಪ್ರತಿಯೊಂದು ಪ್ರಯತ್ನದಲ್ಲಿಯೂ ಯಾವುದಾದರೊಂದು ಪರಾರ್ಥವು ಇಲ್ಲದಿರಲಾರದು. ಅದನ್ನು ನಿರ್ವಹಿಸುವ ಸಲುವಾಗಿ ದೈವವು ಸಕಲಸಾಧನಗಳನ್ನೂ ಒದಗಿಸುವುದು. ತಮ್ಮ ಪ್ರಯತ್ನವು ಇಷ್ಟು ಮಾತ್ರ ನಿರ್ವಿಘ್ನವಾಗಿ ನೆರವೇರಿದುದಕ್ಕಾಗಿ ನಾವು ಧನ್ಯರೆನಿಸಿದೆವು”

ವಿಜಯ—“ದೇವಾ! ಇಲ್ಲಿಗೆ ಕೆಲವು ಹರಿದಾರಿಗಳ ದೂರದಲ್ಲಿ ವಿಂಧ್ಯಪರ್ವತದ ಬುಡದಲ್ಲಿ ದೊಡ್ಡ ದುರ್ಗವು ಇರುವುದಾಗಿಯೂ ಎಂತಹ ಶತ್ರುವಿಗಾದರೂ ಆ ದುರ್ಗವು ದುರ್ಗಮವೆಂಬುದಾಗಿಯೂ ಸಿಂಹಭಟನ ಮೂಲಕ ಕೇಳಿದೆನು ಹಿಂದಣ ಕಾಲದಲ್ಲಿ ಅವಂತೀ ದೇಶದ ಅರಸರಿಗೆ ಯಾವುದಾದರೊಂದು ಕಾರಣದಿಂದ ರಾಜ್ಯಾಧಿಕಾರವು ಚ್ಯುತವಾದರೆ ಅವರು ಅಂತಹ ಸಮಯಗಳಲ್ಲಿ ಆ ದುರ್ಗವನ್ನು ಸೇರಿ ತಲೆತಪ್ಪಿಸಿಕೊಂಡಿದ್ದು, ದೈವವು ಸುಮುಖವಾದ ಕೂಡಲೇ ರಾಜ್ಯವನ್ನು ಹುಗುತ್ತಿದ್ದರೆಂಬುದಾಗಿ ನಾನು ಕೇಳಿಬಲ್ಲೆನು. ಈಗ ನಾವು ಅದನ್ನು ಸೇರಿದೆವಾದರೆ ಮುಂದೆ ಸಕಲ ಸಿದ್ಧಿಗಳನ್ನು ಪಡೆದಂತಯೇ ಸರಿ.”

ಶೂದ್ರ—“ಆ ದುರ್ಗದ ನಿರ್ಮಾಣರೀತಿಯನ್ನೂ ಅದರ ಸನ್ನಿವೇಶಗಳನ್ನೂ ಮೊದಲೇ ನಾನು ಚಿತ್ರಪಟದಲ್ಲಿ ನೋಡಿರುವೆನು. ಅದರ ವರ್ಣನೆಯು ಮಾತಿಗೆ ಮೀರಿದುದು.”

ಸಿಂಹ—“ಹಾಗಾದರೆ ಅನುಕೂಲವಾಯಿತು. ದೈವವೂ ಪುರುಷ ಪ್ರಯತ್ನವೂ ಕಲೆತಲ್ಲಿ ಇಷ್ಟಾರ್ಥಸಿದ್ಧಿಗೆ ತಡವಾಗಲು ಅವಕಾಶವೆತ್ತಣದು?”

ಶೂದ್ರ—“ಈ ಸರೋವರದ ಸೊಬಗನ್ನೂ ಇಲ್ಲಿಯ ವಿಹಾರಸೌಖ್ಯವನ್ನೂ ಅನುಭವಿಸಬೇಕಾದರೆ ಚತುರ್ಮುಖನು ದಯೆಪಾಲಿಸಿರುವ ಆಯುಷ್ಯವು ಸಾಲದು. ಇಂತಹ ಸರೋವರವನ್ನು ಬಿಟ್ಟು ಸ್ವರ್ಗಕ್ಕೆ ತೆರಳಿದ ಇಂದ್ರನು ದಿಟವಾಗಿಯೂ ನಿರ್ಭಾಗ್ಯನೇ ಸರಿ.”

ವಿಜಯ—“ಲೋಕವ್ಯಾಪಾರಗಳನ್ನು ದೂರ ಮಾಡಿ ವಾನಪ್ರಸ್ಥವ್ರತವನ್ನು ಕೈಕೊಂಡವರು ಪರಮಪುರುಷಾರ್ಥವನ್ನು ಪಡೆಯಲು ಇದು ತಕ್ಕ ಪ್ರದೇಶವೇ ಹೊರತು ಲೋಕೋದ್ಧಾರಾರ್ಥವಾಗಿ ಪಾಡುಪಡುವ

ಬುದ್ಧಿ, ಬಲ, ಸಾಹಸ, ಶೌರ್ಯ, ವೀರ್ಯಗಳಿಂದೊಪ್ಪುವ ತಮ್ಮಂತಹ ಉದಾರ ಚರಿತರಿಗೆ ಇದು ವಾಸಯೋಗ್ಯವೆನಿಸಲಾರದು."

ಶೂದ್ರ—"ಹೇಗೂ ಆಗಲಿ ಈ ಸರಸ್ತೀರವನ್ನು ಬಿಡುವುದಕ್ಕೆ ನನ್ನ ಮನಸ್ಸು ಒಡಂಬಡುವಂತಿಲ್ಲ "

ಸಿಂಹ—"ದೈವವು ದಯೆಪಾಲಿಸಿರುವ ಸುಗುಣಸಂಪತ್ತಿಯ ಋಣ ವನ್ನು ತೀರಿಸದಿದ್ದರೆ, ಅದು ಅಧರ್ಮವೆನಿಸುವುದಿಲ್ಲವೇ ? ಲಕ್ಷ್ಮೀಸರಸ್ವತಿ ಯರು ತಮಗೆ ಸಹಜವಾದ ಅತ್ತೆಸೊಸೆತನವನ್ನು ದೂರಮಾಡಿ ಐಕಮತ್ಯ ದಿಂದ ತಮ್ಮಲ್ಲಿ ನೆಲೆಸಿರಬೇಕೆಂಬುದಾಗಿ ಸಂಕಲ್ಪಿಸಿರುವಾಗ, ಅದನ್ನು ತಳ್ಳುವುದು ವಿವೇಕಿಗೆ ತಕ್ಕುದೇ ?"

ವಿಜಯ—"ಮಹಾನುಭಾವ ! ಸರೋವರವನ್ನು ಕಂಡ ಮಾತ್ರ ದಿಂದಲೇ ಇಷ್ಟೊಂದು ವೈರಾಗ್ಯವನ್ನು ಇಷ್ಟು ಬೇಗನೆ ತಳೆದ ತಮ್ಮ ಮನಸ್ಸಿನಲ್ಲಿ, ಅರಸುಗುವರಿಯ ಅನುರಾಗವು ಇಷ್ಟು ದಿನಗಳ ವರೆಗೆ ಹೇಗೆ ನಿಂತಿತೆಂಬುದು ನನಗೆ ಮಹತ್ತರವಾದ ಆಶ್ಚರ್ಯವಾಗಿದೆ."

ಶೂದ್ರ—"ನಿಮ್ಮ ಉಪಾಲಂಭನವು ನಮ್ಮಸ್ನೇಹದ ಮೂಲಸ್ತಂಭವು. ಒಳ್ಳೆಯದು. ಹಾಗಾದರೆ ಮುಂದಣ ಕರ್ತವ್ಯವೇನು ?"

ವಿಜಯ—"ತಮ್ಮ ಸ್ನೇಹಾತಿಶಯವೂ ದಯಾರಸವೂ ಸುಗುಣ ಸಂಪತ್ತಿಯೂ ವಿದ್ಯಾವಿಶಾರದತೆಯೂ ನಮ್ಮ ನಾಲಗೆಯನ್ನು ಈ ವಿಷಯ ದಲ್ಲಿ ಮುಂದಕ್ಕೆ ಬರಗೊಳಿಸದಿರುವುದು "

ಶೂದ್ರಕ—"ಪರಿಹಾಸವೂ, ನಿಂದೆಯೂ, ನಿಷ್ಕಪಟವಾದ ಸ್ನೇಹದ ಲಕ್ಷಣಗಳು. ಇರಲಿ. ಆ ದುರ್ಗಕ್ಕೆ ಹೋಗುವ ದಾರಿಯನ್ನು ನೀವಾ ರಾದರೂ ಬಲ್ಲಿರಾ?"

ವಿಜಯ—"ದೇವಾ ! ಮಹಾತ್ಮರ ಸಂಕಲ್ಪಕ್ಕಿಂತಲೂ ಮುಂಚಿತ ವಾಗಿ ಕೆಲವು ಕಾರ್ಯಗಳು ನಡೆಯುತ್ತಿರುವುವು. ಇದು ದೈವೇಚ್ಛೆ."

ಸಿಂಹ—"ದಾರಿಯು ಸಂಪೂರ್ಣವಾಗಿ ಸುಗಮವಾಗಿರುವಂತೆ ಮೂರು ದಿನಗಳ ಮುಂಚಿತವಾಗಿ ಸಮಾಚಾರವು ಬಂದಿರುವುದು. ನಮ್ಮ ಗಜಸೇನೆಯನ್ನು ಈ ದಿನ ಮಧ್ಯಾಹ್ನದಲ್ಲಿ ಕಳುಹಿ ಅಲ್ಲಲ್ಲಿ ತುತೂರಿ ಗಳನ್ನೂ ನಗಾರಿಗಳನ್ನೂ ಬಾರಿಸುತ್ತ ಕಾಡುಮೃಗಗಳನ್ನು ದೂರವಾಗಿ

ಅಟ್ಟುವಂತೆ ಆಣತಿಯಿತ್ತು ಪಿಪ್ಪಲಕನನ್ನು ಕಳುಹಿರುವೆನು. ಇಲ್ಲಿ ಈಗ ಉಳಿದಿರುವುದು ಕುದುರೆಯ ಸೇನೆ ಮತ್ತು ಕಾಲ್ಬಲ ಇಷ್ಟೇ. ಈ ನಮ್ಮ ಸೇನೆಗೂ ಇತರ ಪರಿವಾರಕ್ಕೂ ತಕ್ಕ ಬಿಡಾರಗಳನ್ನೂ ಊಟಉಪಚಾರ ಗಳನ್ನೂ ಕಲ್ಪಿಸಲು ಬೇಕಾದ ಏರ್ಪಾಡುಗಳು ಈ ಮೊದಲೇ ಅಲ್ಲಿ ನಡೆದಿವೆ "

ಶೂದ್ರ — "ಏನು ? ನನ್ನ ಪ್ರಾರ್ಥನೆಯಿಲ್ಲದೆಯೇ ಇಷ್ಟೊಂದು ಪ್ರಯತ್ನಗಳನ್ನು ನಡೆಯಿಸುವ ಮಹಾಪುರುಷನಾರು ? ಆತನನ್ನು ಸಂದರ್ಶಿಸಿ ಹೇಗೆ ನನ್ನ ಋಣವನ್ನು ತೀರಿಸಬಲ್ಲೆನೆಂಬುದಾಗಿ ನನ್ನ ಮನ ಸ್ಸಿಗೆ ನಾಚಿಕೆಯಾಗುತ್ತಿದೆ "

ಸಿಂಹ—"ಕೈಕೊಂಡ ಕಾರ್ಯವು ನಿರ್ವಿಘ್ನವಾಗಿ ಕೊನೆಗಂಡನಂತರ ಅಲ್ಲವೇ ಯಾರು ಯಾರಿಗೆ ಎಷ್ಟರ ಮಟ್ಟಿಗೆ ಋಣಿಗಳೆಂಬುದನ್ನು ನಿಷ್ಕರ್ಷಿಸಬೇಕಾಗುವುದು?"

ವಿಜಯ—"ಚಂಡಕಿರಣನು ತನ್ನ ತೀಕ್ಷ್ಣಕರಪ್ರಸಾರದಿಂದ ಲೋಕ ವನ್ನೆಲ್ಲ ಸಂತಾಪಗೊಳಿಸಿ ಅಸ್ತೋನ್ಮುಖನಾಗುತ್ತಿರುವ ಸಮಯದಲ್ಲಿ ಸುಧಾ ಕರನು ಪೂರ್ವ ದಿಕ್ಕಿನಲ್ಲಿ ಉದಯಿಸದಿದ್ದರೆ ಲೋಕದ ಸಂತಾಪವು ಕಡಮೆ ಯಾಗುವುದು ಹೇಗೆ?"

ಇಷ್ಟರಲ್ಲಿ ಮಂಟಪದ ಮೇಲ್ಭಾಗದಿಂದ ವಿನಯವತಿಯು ಸಖೀ ಪರಿವಾರದೊಂದಿಗೆ ಇಳಿದುಬರುತ್ತಿದ್ದುದನ್ನು ಸಿಂಹಭಟನು ಸೂಚಿಸಲಾಗಿ, ಶೂದ್ರಕನು 'ಒಳ್ಳೆಯದು! ನಮ್ಮ ಆಲೋಚನೆ ಮುಗಿಯಿತಷ್ಟೆ! ಇನ್ನು ಹೊರಡಬಹುದು' ಎನ್ನುತ್ತ ಎಲ್ಲರೂ ತೆಪ್ಪವನ್ನೇರಿ, ಪ್ರಶಾಂತಗಂಭೀರ ವಾದ ಮುಖಮುದ್ರೆಯೊಂದಿಗೆ ಬಿಡಾರಗಳನ್ನು ಸೇರಿ, ಆ ರಾತ್ರಿಯನ್ನು ಸಂತೋಷವಾಗಿ ಕಳೆದರು.

ಮರುದಿನ ಬೆಳಗಾಗುತ್ತಲೆ ಎಲ್ಲರೂ ತಮ್ಮತಮ್ಮ ಪ್ರಾತಃಕೃತ್ಯ ಗಳನ್ನು ಬೇಗನೆ ಮುಗಿಸಿ ಪ್ರಯಾಣಕ್ಕೆ ಸಿದ್ಧರಾದರು. ಅಂದು ಶೂದ್ರ ಕನು ಮಾತ್ರ ಕುವಲಯಾಮೋದವನ್ನೇರಿದನು. ಮಾಧವಿಯೂ ವಿನಯ ವತಿಯೂ ಕಲ್ಯಾಣವತಿಯೆಂಬ ಬೇರೊಂದು ಹೆಣ್ಣಾನೆಯ ಮೇಲೆ ಕುಳಿ ತರು. ವಿಜಯಸಿಂಹನು ಅಶ್ವಸೇನಾಸಮೇತನಾಗಿ ದಾರಿಯಲ್ಲಿ ಮುಂದೆ

ನಡೆಯತೊಡಗಿದನು. ಶಬರಸೇನೆಯು ಹಿಂದೆ ನಡೆಯುತ್ತಿದ್ದಿತು. ದಾರಿ ಯುದ್ದಕ್ಕೂ ಅಲ್ಲಲ್ಲಿ ಚಾರರು ನಿಂತಿದ್ದು, ಮಾರ್ಗವನ್ನು ಸರಿಪಡಿಸಿ ತೋರುತ್ತಿದ್ದರು ಅಕೃತ್ರಿಮವಾದ ಪ್ರಕೃತಿಸೌಂದರ್ಯವನ್ನು ನೋಡುತ್ತ ಸುಖಪ್ರಯಾಣವನ್ನು ಬಳೆಯಿಸಿ ಮಧ್ಯಾಹ್ನಕಾಲಕ್ಕೆ ಮುಂಚಿತವಾಗಿಯೇ ವಿಂಧ್ಯಾರಣ್ಯವನ್ನು ಹೊಕ್ಕು ದುರ್ಗವನ್ನು ಪ್ರವೇಶಿಸಿದರು. ಪರ್ವತ ಶ್ರೇಣಿಗಳ ನಡುವೆ ಅನೇಕ ಪ್ರಾಕಾರಗಳಿಂದ ಕೂಡಿ ದುರ್ಭೇಧ್ಯವಾಗಿರುವ ರೀತಿಯಲ್ಲಿ ಶಿಲಾನಿರ್ಮಿತವಾಗಿದ್ದ ಆ ದುರ್ಗವು ನಾಲ್ಕೈದು ಅಕ್ಷೌಹಿಣಿಯ ಸೈನ್ಯವನ್ನು ನಿರಾತಂಕವಾಗಿ ಒಳಗೊಳ್ಳುವಷ್ಟು ವಿಶಾಲವಾಗಿದ್ದಿತು ಶೂದ್ರಕನು ಕೆಲವು ಬಾಗಿಲುಗಳನ್ನು ದಾಟಿ ನಡೆದುಬರಲಾಗಿ, ಒಳಗಡೆ ಒಂದು ದೊಡ್ಡ ಉಪ್ಪರಿಗೆಯು ಕಾಣಿಸಿತು ಅಲ್ಲಿ ಆನೆಯಿಂದ ಇಳಿದು ನೋಡುವಾಗ ಅದರ ಬಾಗಿಲುಗಳು ಮುಚ್ಚಲ್ಪಟ್ಟಿದ್ದುವು. ಅವನ್ನು ತೆರೆಯುವ ಉಪಾಯವೇನೆಂಬುದಾಗಿ ಯಾರಿಗೂ ಹೊಳೆಯಲಿಲ್ಲ. ಸುತ್ತುಮುತ್ತಲು ಎಷ್ಟೆಷ್ಟೋ ಬಗೆಯಿಂದ ಪರಿಕಿಸಿದರೂ ಯಾವ ಸುಳಿವೂ ತೋರಲಿಲ್ಲ "ಇದರ ಬೀಗದ ಕಯ್ ಏನಾಯಿತು ? ಇದು ಅವಂತೀಶ್ವರರ ದುರ್ಗ ವಲ್ಲವೇ ? ಆಪತ್ಕಾಲದಲ್ಲಿ ತಲೆ ತಪ್ಪಿಸಿಕೊಂಡಿದ್ದು ಮರಳಿ ಹೊರಡುವಾಗ "ಇದರ ಬೀಗದ ಕಯ್ಯನ್ನು ಅವರು ತೆಗೆದುಕೊಂಡು ಹೋಗಿರಬಹುದೇ ? ಎಂದು ಮುಂತಾಗಿ ಸ್ವಲ್ಪ ಹೊತ್ತು ಯೋಚಿಸಿದ ಬಳಿಕ ತನ್ನಲ್ಲಿದ್ದ ನಕಾಶೆಯ ನೆನಪು ಬಂದಿತು. ಕೂಡಲೇ ಅದನ್ನು ತೆರೆದುನೋಡುವಲ್ಲಿ ಅದನ್ನು ಹುಗುವ ದಾರಿಯ ಗುರುತು ಸಿಕ್ಕಿತು. ಅದರ ಆಧಾರದ ಮೇಲೆ ಅಜಯಸಿಂಹನೂ ಶೂದ್ರಕನೂ ಇಬ್ಬರು ಭಟರೊಂದಿಗೆ ಹೊರಟು ಆ ಗುರುತನ್ನು ಕಂಡು ಹಿಡಿಯುವ ಸಲುವಾಗಿ ಅತ್ತಿತ್ತ ನೋಡುತ್ತ ನಡೆ ತರುವಲ್ಲಿ ಆ ಗೆರೆಯ ತುದಿಯಲ್ಲಿ ಒಂದು ಶಿಲಾಶಾಸನವು ಕಾಣಿಸಿತು. ಅದರ ಮೇಲೆ ಪಾಸೆಯೂ ಧೂಳಿಯೂ ಮುಚ್ಚಿಕೊಂಡಿದ್ದುದರಿಂದ ಅಕ್ಷರ ಗಳು ಅಷ್ಟು ಸ್ಫುಟವಾಗಿ ಕಾಣುತ್ತಿರಲಿಲ್ಲವಾಗಿ ಶೂದ್ರಕನು ಒರೆಯಿಂದ ಖಡ್ಗವನ್ನು ಸೆಳೆದು ಅದರ ತುದಿಯಿಂದ ಶಾಸನ ಶಿಲೆಯ ಮೇಲಿದ್ದ ಕೊಳೆ ಯನ್ನು ಕೆರೆದು ಹಾಕಿ ಓದುವಲ್ಲಿ—ಅದು ಒಂದು ಪದ್ಯ ರೂಪವಾಗಿರಲು ಅದನ್ನು ಓದತೊಡಗಿದನು.

(1)
ಶತಕೋಟಿಧರಾದ್ಯಾಶಾ |
ತತಿಯಂ ಖರಕಿರಣ ವೈರಿ ಪನ್ನಗ ಭೂಭೃತ್ ||
(2)
ಪತಿಸಂಖ್ಯಾವ್ಯಾಮಗಳಿಂ |
ದತಿಶಯಮೇಂ? ಗಮಿಸಿ ಯುರಸು ಪುತ್ಥಳಿಗಳದೊಳ್ |

ಈ ಪದ್ಯಕ್ಕೆ ಮೊದಲನೆಯ ಬಾರಿ ಏನೂ ಅರ್ಥವಾಗಲಿಲ್ಲ ಮೂರು ನಾಲ್ಕು ಬಾರಿ ಓದಿ ಸ್ವಲ್ಪ ಹೊತ್ತು ಯೋಚಿಸಿದ ಬಳಿಕ ಖರಕಿರಣಾದಿ ಪದಗಳು ಸಂಖ್ಯಾದ್ಯೋತಕಗಳೆಂಬುದಾಗಿ ಅರ್ಥಮಾಡಿ, ಪೂರ್ವ ದಿಕ್ಕಿನಿಂದ ಪ್ರದಕ್ಷಿಣಾಕಾರವಾಗಿ ಖರಕಿರಣ (ಸೂರ್ಯ-ದ್ವಾದಶಾದಿತ್ಯ) ಸಂಖ್ಯೆಯಷ್ಟು ಮಾರು ದೂರದಲ್ಲಿರುವ ಲೋಹಮಯವಾದ ಪುತ್ಥಳಿಯನ್ನು ಅಲುಗಿಸಿ ನೋಡಲಾಗಿ ಅದು ನಿಶ್ಚಲವಾಗಿಯೇ ಇದ್ದಿತು. ತರುವಾಯ ಅದರ ಕುತ್ತಿಗೆಯನ್ನು ಹಿಡಿದು ಬಲವಾಗಿ ಹಿಂದೂ ಮುಂದೂ ತಿರುಗಿಸಲಾಗಿ ಅದು ಎಡಗಡೆಗೆ ತಿರುಗಿತು ಅದೇ ರೀತಿಯಿಂದ ಅದರ ಕುತ್ತಿಗೆಯನ್ನು ನೆಲದ ಮೇಲೆ ಇರಿಸಿ ಕುತ್ತಿಗೆಯಲ್ಲಿ ಕಯ್ ಹಾಕಿ ನೋಡ ಲಾಗಿ ಒಳಗಡೆ ಬೀಗದ ಕಯ್‌ಗೊಂಚಲು ಸಿಕ್ಕಿತು. ಅದನ್ನು ತೆಗೆದು ಕೊಂಡು ಪುತ್ಥಳಿಯ ಕುತ್ತಿಗೆಯನ್ನು ಎಂದಿನಂತೆ ಅಲ್ಲಿಯೇ ತಿರುಗಿಸಿಟ್ಟು, ವಿಜಯಸಿಂಹನಿಗೆ ಆ ಪ್ರತಿಮೆಯ ಸೊಬಗನ್ನೂ ಅದರ ರಚನಾಚಾತುರಿ ಯನ್ನೂ ಸ್ವಲ್ಪ ಕಾಲ ಬಣ್ಣಿಸಿ, ತನ್ನ ಶಿಲ್ಪ ಚಾತುರ್ಯವನ್ನೂ ಪ್ರಕಾಶಪಡಿಸಿ ಬಳಿಕ ಅಲ್ಲಿಂದ ಬಂದು ಮಹಾದ್ವಾರವನ್ನು ಸೇರಿ, ಅದಕ್ಕೆ ತಕ್ಕ ಬೀಗದ ಕಯ್ಯನ್ನು ಉಪಯೋಗಿಸಲಾಗಿ ಕೂಡಲೇ ಬಾಗಿಲು ತೆರೆದಿತು. ಸಂಗಡಲೇ ಎಲ್ಲರೂ ಒಳಹೊಕ್ಕರು. ಆಗ ಅವರಿಗೆ ಉಂಟಾದ ಆಶ್ಚರ್ಯವು ಬಣ್ಣಿಸ ತರವಲ್ಲ.

ಅಷ್ಟ ದಿಕ್ಪಾಲಕರ, ಆದಿಶೇಷನ, ತ್ರಿಮೂರ್ತಿಗಳ ಸಭಾಮಂಟಪ ಗಳನ್ನು ಪುರಾಣಾದಿಗಳಲ್ಲಿ ಬಣ್ಣಿಸಿರುವ ಕ್ರಮವನ್ನು ನಾವು ಓದಿ, ಕೇಳಿರುವೆವಾದರೂ ಇದರ ವರ್ಣನೆಯು ಮಾತ್ರ ಕವಿಚಾತುರ್ಯಗರ್ಭಿತ ವಾದ ವರ್ಣನೆಯನ್ನು ಅತಿಕ್ರಮಿಸಿದ್ದಿತೆನ್ನಲು ಯಾರೂ ಹಿಂಜರಿಯಲಾರರು. ಆಗತಾನೇ ಯಾವನೋ ಒಬ್ಬ ಶಿಲ್ಪಿವರ್ಯನು ಅದನ್ನು ಮುಗಿಸಿ ಬೀಗ ಮುದ್ರೆಯಿಂದ ಮುಚ್ಚಿದ್ದಂತೆ ಥಳಥಳಿಸುತ್ತಿದ್ದಿತು. ಕಂಬಗಳಲ್ಲಿಯೂ

(1) ಶತಕೋಟಿ=ವಜ್ರ (2) ವ್ಯಾಮ=ಮಾರು

ಆಸ್ಥಾನಮಂಟಪದಲ್ಲಿಯೂ ಕೆತ್ತಿದ್ದ ಪುತ್ಥಳಿಗಳು ಸಜೀವಿಗಳಂತೆ ಮೆರೆಯು ತ್ತಿದ್ದುವು. ನೆಲವು ಇಂದ್ರನೀಲಮಣಿನಿಬದ್ಧವಾಗಿ ಕಂಗೊಳಿಸುತ್ತಿದ್ದಿತು. ಅಲ್ಲಿ ಸಾಲಾಗಿ ಇರಿಸಿದ್ದ ಪೀಠಗಳೂ ತೂಗುತ್ತಿದ್ದ ಸಾಲುದೀಪಗಳೂ ಕಣ್ಮನಗಳನ್ನು ಸೂರೆಗೊಳ್ಳುವಂತಿದ್ದುವು. ಕುತೂಹಲಾವಿಷ್ಟನಾದ ನಮ್ಮ ತರುಣವೀರನು ವಿಜಯಸಿಂಹ, ಸಿಂಹಬಲರೊಂದಿಗೆ ಆ ಶಾಲೆಯನ್ನೆಲ್ಲ ಸುತ್ತಿ ಅದರ ಹಿಂಭಾಗದ ಬಾಗಿಲನ್ನು ತೆರೆದು ಒಳಹೊಕ್ಕು ನೋಡುವಲ್ಲಿ ಅದರ ವಿಶಾಲತೆಯೂ, ರಚನಾಕೌಶಲವೂ ಭ್ರಾಂತಿಗೊಳಿಸುತ್ತಿದ್ದುವು ಗೋಶಾಲೆ, ಅಶ್ವಶಾಲೆ, ಗಜಶಾಲೆಗಳು ಸ್ವಚ್ಛವಾಗಿದ್ದುವು. ಉತ್ತರ ಭಾಗದಲ್ಲಿ ಸ್ವಲ್ಪ ದೂರದಲ್ಲಿ ಒಂದು ಭವಂತಿಯನ್ನು ಹುಗಲಾಗಿ ಕೋಶ ಗೃಹ, ಉಪಸ್ಥಾನಮಂದಿರ, ಸಾಮಂತ, ಮಂತ್ರಿ, ಸಚಿವ, ಗಣಕ, ಲೇಖಕ, ವ್ಯಾವಹಾರಿಕ, ಪ್ರಾಡ್ವಿವಾಕ, ಪುರೋಹಿತ, ಕಂಚುಕಿ ಮೊದಲಾದವರಿಗೆ ತಕ್ಕತಕ್ಕ ಬಿಡಾರಗಳೂ, ಸ್ನಾನಗೃಹ, ಪೂಜಾಮಂದಿರ, ಪಾಕಶಾಲೆ, ಭೋಜನಶಾಲೆಗಳೂ ಅದರ ಮೇಲ್ಭಾಗದಲ್ಲಿ ನೃತ್ಯಗೀತಶಾಲೆಗಳೂ ಚಿತ್ರ ಶಾಲೆಯೂ, ಸಖೀ, ಚೇಟೀ, ದಾಸೀಜನರ ನಿವಾಸಗಳೂ, ಮೂರನೆಯ ಅಂತಸ್ತಿನಲ್ಲಿ ಶಯನಗೃಹ, ಅನುಲೇಪನಶಾಲೆ, ಅಂತಃಪುರ, ಪ್ರಸೂತಿ ಮಂದಿರ, ಪಾನಗೃಹ, ಯಂತ್ರಶಾಲೆಗಳೂ ಕಾಣಬಂದುವು. ಅಲ್ಲಿಂದ ಇಳಿದು ಸ್ವಲ್ಪ ದೂರ ಪೂರ್ವದ ಕಡೆಗೆ ಬರಲಾಗಿ ವೈದ್ಯಶಾಲೆ, ತೈಲ, ಚೂರ್ಣದ್ರಾವಕಗಳನ್ನೂ ರಸಪಾಕಗಳನ್ನೂ ನಿರ್ಮಾಣಮಾಡಲು ತಕ್ಕ ವಿಶಾಲ ವಾದ ಹಜಾರಗಳು ಸಕಲಸಾಮಗ್ರಿಗಳಿಂದ ತುಂಬಿದ್ದುವು. ದಕ್ಷಿಣ ಭಾಗದಲ್ಲಿ ಅಂಗರಕ್ಷಕ, ಗಾಯಕ, ವಿದೂಷಕ, ಪಾರಿಪಾರ್ಶ್ವಕರ ವಾಸ ಸ್ಥಾನಗಳು ರಮ್ಯವಾಗಿ ಕಂಗೊಳಿಸುತ್ತಿದ್ದುವು. ಪಶ್ಚಿಮ ಭಾಗದಲ್ಲಿ ಕ್ರೀಡಾಸರೋವರ, ಜಲಕೇಳೀಗೃಹ, ಧಾರಾಗೃಹ, ಪ್ರಮದವನ, ಗೃಹಾ ರಾಮಗಳೂ ಅಲ್ಲಲ್ಲಿ ಶುಕ, ಪಿಕ, ಹಂಸ, ಸಾರಿಕಾದಿ ಪಕ್ಷಿಸಂಕುಲಕ್ಕೆ ವಾಸಯೋಗ್ಯವಾದ ಸಣ್ಣ ಪುಟ್ಟ ಪಂಜರಗಳೂ, ನವಿಲು, ಪಾರಿವಾಳಗಳ ಗೂಡುಗಳೂ ಕಾಣುತ್ತಿದ್ದುವು. ಇವುಗಳನ್ನೆಲ್ಲ ನೋಡಿಕೊಂಡು ಮರಳಿ ಸಭಾಮಂಟಪವನ್ನು ಹುಗಲಾಗಿ ನಡುವಣ ಪಕ್ಕದಲ್ಲಿ ಮತ್ತೊಂದು ಬಾಗಿಲು ಕಾಣಿಸಿತು. ತನ್ನ ಬಳಿಯಲ್ಲಿದ್ದ ಬೀಗದಕಯ್ಗಳ ಗೊಂಚಲಿಂದ ಅದನ್ನು ತೆರೆದು ನೋಡುವಲ್ಲಿ ಮಂಚಗಳೂ, ಪಟ್ಟೆವಸ್ತ್ರಗಳಿಂದಲೂ

ಆಭರಣಗಳಿಂದಲೂ ತುಂಬಿದ್ದ ಪೆಟಾರಿಗಳೂ ಪರಿಮಳದ್ರವ್ಯಭರಿತಗಳಾದ ಕಯ್‌ಪೆಟ್ಟಿಗೆಗಳೂ ತುಂಬಿದ್ದುವು. ಅಲ್ಲಲ್ಲಿ ಗೋಡೆಗಳಿಗೆ ದಶಾವತಾರ ಚಿತ್ರಪಟಗಳೂ, ಮಹಾಕಾಳೇಶ್ವರನ ವಿವಾಹಮಹೋತ್ಸವದ ಚಿತ್ರಪಟವೂ ತೂಗುಹಾಕಿದ್ದುವು. ಅದರ ಒಂದು ಭಾಗದಲ್ಲಿ ಧನುರ್ವೇದದಲ್ಲಿ ವರ್ಣಿತವಾಗಿರುವ ಸಕಲ ಶಸ್ತ್ರಸಮುದಾಯವು ಕಾಣಿಸಿತು. ಅದರ ನಡುವೆ ಚಿಕ್ಕದಾದ ಒಂದೇ ಕೋಣೆಯಲ್ಲಿ ದಿವ್ಯೌಷಧಗಳು ಅಡಕವಾಗಿದ್ದುವು. ಇವುಗಳೆಲ್ಲವನ್ನೂ ನೋಡಿ ವಿಸ್ಮಯಭರಿತನಾದ ಶೂದ್ರಕನು ಅವುಗಳನ್ನು ನಿರ್ಮಿಸಿದ ಶಿಲ್ಪಿಯ ಚಾತುರ್ಯಕ್ಕೆ ಬೆರಗಾಗಿ ಮರಳಿ ಆಸ್ಥಾನಮಂಟಪಕ್ಕೆ ಬಂದು ಸೇರಿದ ಕೂಡಲೇ ವಿಜಯಸಿಂಹನ ಒತ್ತಾಯದಿಂದ ಸಿಂಹಾಸನವನ್ನೇರಿ ಕುಳಿತು "ಈ ಮಂದಿರವನ್ನು ಮನುಷ್ಯಮಾತ್ರನಾದವನು ನಿರ್ಮಿಸ ಸಾಧ್ಯವಲ್ಲ ವಿಶ್ವಕರ್ಮನೇ ರಚಿಸಿರಬಹುದೆಂಬಂತೆ ತೋರುವುದು. ಇಷ್ಟೊಂದು ಮಹತ್ತರವಾದ ದಿವ್ಯಭವನದಲ್ಲಿ ಎಲ್ಲಿಯೂ ಮರವಾಗಲಿ ಲೋಹವಾಗಲಿ ಕಾಣಬರುವುದಿಲ್ಲ ಕಲ್ಲು, ಇಟ್ಟಿಗೆ, ಸೀಸ, ವಜ್ರಲೇಪಗಳಲ್ಲದೆ ಬೇರೆ ಯಾವುವೂ ಕಾಣಬರುವುದಿಲ್ಲ. ಒಂದೊಂದು ಗೋಡೆಯೂ ಕನ್ನಡಿಯಂತೆ ಹೊಳೆಯುತ್ತಿದೆ" ಎಂಬುದಾಗಿ ಹೇಳಿ ವಿಜಯಸಿಂಹನ ಕಡೆ ನೋಡುವಲ್ಲಿ, ಆತನು "ದೇವಾ ! ರಾಜಕುಮರಿಯೂ ಮಾಧವಿಯೂ ಇನ್ನೂ ಒಳಗೆ ಬರಲಿಲ್ಲ ಅವರು ಉದ್ಯಾನವನದ ಸೊಬಗನ್ನು ನೋಡುತ್ತ ಅಲ್ಲಿಯೇ ಇರುವಂತಿದೆ ಭೋಜನವೇಳೆಯು ಮೀರುತ್ತಿದೆಯಲ್ಲವೇ ?" ಎನಲಾಗಿ ಶೂದ್ರಕನು ಅಲ್ಲಿಂದ ಎದ್ದ ಕೂಡಲೇ ದಿವ್ಯಮಂಗಳವಾದ್ಯಧ್ವನಿಯು ಮೊಳಗತೊಡಗಿತು ನಮ್ಮ ತರುಣವೀರನು ವಿನಯವತಿಯನ್ನು ಸಖಿಯೊಂದಿಗೆ ಕರೆತರಿಸಿ ಸ್ನಾನಪೂಜಾಭೋಜನಾದಿಗಳನ್ನು ನೆರವೇರಿಸಿ, ಸ್ವಲ್ಪ ಹೊತ್ತು ವಿಶ್ರಾಂತಿಸುಖವನ್ನನುಭವಿಸಿ, ಕೋಶಾಗಾರವನ್ನು ಹೊಕ್ಕು ಪರೀಕ್ಷಿಸಲಾಗಿ ದ್ರವ್ಯವು ಪುಷ್ಕಲವಾಗಿದ್ದಿತು. ಅದೇ ದಿನ ಸಂಜೆಯ ಹೊತ್ತಿಗೆ ಕೆಲವು ಮಂದಿ ವೈದಿಕರೂ ದಾಸದಾಸಿಯರೂ ಬಂದು ಹೊರಗಡೆ ನಿಂತಿರುವರೆಂಬ ಸಮಾಚಾರವನ್ನು ಕೇಳಿ, ವಿಜಯಸಿಂಹನು ಹೊರಬಂದು, ಅವರನ್ನು ಗುರುತಿಸಿ ಶೂದ್ರಕನ ಬಳಿಗೆ ಕರೆತಂದು "ದೇವಾ ! ಇವರನ್ನು ನಮ್ಮ ರಾಜನು ಕಳುಹಿಸಿರುವನು. ಇವರಲ್ಲಿ ಪುರೋಹಿತರೂ, ವೈದ್ಯರೂ, ಜ್ಯೌತಿಷಿಕರೂ, ವೇದಶಾಸ್ತ್ರಪಾರಂಗ

ತರೂ ಇರುವರು. ಇವರೆಲ್ಲರೂ ಶಾಂತರು, ವಯೋವಿದ್ಯಾಧಿಕರು, ಸ್ವಕರ್ಮನಿರತರು, ಲೋಕಹಿತೈಷಿಗಳು, ಸರ್ವಸಮರು. ಈ ದಾಸೀದಾಸ ಬೃಂದವು ನಮ್ಮ ಅರಮನೆಯಲ್ಲಿ ತಲತಲಾಂತರಗಳಿಂದ ಶ್ರದ್ಧಾಭಕ್ತಿ ಚಾತುರ್ಯಗಳಿಂದ ಕೆಲಸಮಾಡಿದವರು; ನಂಬತಕ್ಕವರು. ನಮ್ಮ ಅರಸನಿಗೆ ಇವರಲ್ಲಿ ಹೆಚ್ಚು ನಂಬಿಕೆಯೂ ಪ್ರೀತಿಯೂ ಇರುವ ಕಾರಣ ಇವರನ್ನು ತಮ್ಮ ಸೇವೆಗಾಗಿ ಕಳುಹಿಸಿರುವನು" ಎಂಬುದಾಗಿ ಬಿನ್ನಯಿಸಿದನು.

ಈ ಮಾತನ್ನು ಕೇಳಿ ಶೂದ್ರಕನು "ಇದೆಲ್ಲವೂ ನನ್ನನ್ನು ಮರುಳು ಗೊಳಿಸುತ್ತಿದೆ ನನ್ನ ಜೀವಿತವೆಲ್ಲ ಇಂತೆಯೇ ಆಯಿತು. ಇತರರ ದಯೆಗೆ ಪಾತ್ರನಾಗಿ ಬದುಕಬೇಕಾದುದು ನನ್ನ ಹಣೆಯಲ್ಲಿ ಬರೆದಿರು ವಂತಿದೆ. 'ಇದು ನನ್ನ ಭುಜಬಲದಿಂದ ನಾನು ಗಳಿಸಿದುದು'—ಎನ್ನುವ ಹಾಗೆ ಒಂದು ಕಾಸಾದರೂ ಗತಿಯಿಲ್ಲದಂತಾಯಿತಲ್ಲಾ! ಉದಾರಮನಸ್ಕ ರಾದ ನನ್ನ ಮಿತ್ರರಿಂಗೆಲ್ಲರಿಗೂ ನಾನು ಕ್ಲೇಶದಾಯಕನಾಗಿರುವೆನು. ಯುವಕನೂ, ಪೌರುಷಾಭಿಮಾನಿಯೂ ಆದ ಯಾವನು ತಾನೇ ನನ್ನಂತೆ ಪರಾಧೀನನಾಗಿ ಜೀವಿಸಬಲ್ಲನು? ಮಿತ್ರವರ್ಗಕ್ಕೆಲ್ಲ ಇಂತು ಶ್ರಮವನ್ನುಂಟು ಮಾಡಿದ ನಾನು ಅವರ ಋಣವನ್ನು ಎಂದು ಎಂತು ತೀರಿಸಬಲ್ಲೆನು? ಇಂತಹ ಭೋಗಭಾಗ್ಯಗಳಿಲ್ಲದಿದ್ದರೂ ಸ್ವಾರ್ಜಿತವಾದ ಅಲ್ಪ ವಸ್ತುವಿ ನಿಂದಲೇ ತೃಪ್ತನಾಗಿ ಕಾಲಕಳೆಯುವುದು ಲೇಸು ವಿನಯವತಿಯು ಅರಸುಮಗಳಾಗಿದ್ದರೂ ನನ್ನ ಅನುರಾಗವೆಂಬ ಶುಲ್ಕದಿಂದ ಕ್ರೀತೆ ಯಾಗಿರುವ ಕಾರಣ ನನಗೆ ಅನುಕೂಲವಾಗಿ ನಡೆಯುತ್ತ ಪರಿಶುದ್ಧವಾದ ಸಾಮಾನ್ಯಜೀವನವನ್ನು ಅಲ್ಲಗಳೆಯಲಾರಳು" ಎಂದನು

ಆಗ ವಿಜಯಸಿಂಹನು "ಸ್ವಾಮಿ! ಮಾತುಮಾತಿಗೂ ಋಣ, ಋಣ ಎಂಬ ಮಾತನ್ನು ಹೇಳುವುದು ತಮ್ಮಂತಹವರಿಗೆ ಯುಕ್ತವೆನಿಸ ಲಾರದು. ನಿಷ್ಕಪಟವಾದ ಮೈತ್ರಿಯುಳ್ಳ ಸ್ನೇಹಿತರು ಉದಾರಮನಸ್ಸಿ ನಿಂದ ಯಾವುದೋ ಅತ್ಯಲ್ಪವಾದ ಸಹಾಯವನ್ನು ಯಥೋಚಿತವಾಗಿ ಮಾಡಿದಲ್ಲಿ ಅದು ಋಣವಾಗುವುದೇ? ತಮ್ಮಂತಹರಿಗೆ ಈ ಬಗೆಯಾದ ಸಹಾಯವನ್ನು ಮಾಡದಿದ್ದರೆ ಅದು ಎಂತಹ ಮೈತ್ರಿಯು? ಹೆರವರು ಎಂಬ ಶಬ್ದವನ್ನು ಮಿತ್ರರ ವಿಷಯದಲ್ಲಿ ಉಪಯೋಗಿಸಬಹುದೇ? ಮಿತ್ರನ ಅಭ್ಯುದಯವನ್ನು ಬಯಸದವನು ಮಿತ್ರನೆನಿಸುವನೇ? ವಿವಾಹಮಂಗಳಾ

ಲಂಕೃತೆಯಾದ ರಾಜಪುತ್ರಿಯು ತಮ್ಮ ಪಾಣಿಯನ್ನು ಗ್ರಹಣಮಾಡಿ ಕೇವಲ ವೈದಿಕನ ಹೆಂಡತಿಯಂತೆ ಇರಲಾಗುವುದೇ? ಜನಸಂಚಾರ ಶೂನ್ಯವಾದ ಈ ಘೋರಾರಣ್ಯದಲ್ಲಿ ದೈವಿಕವಾಗಿ ಈ ಭವನವು ದೊರೆತರೆ ಮಾತ್ರ ಏನಾಗುವುದು? ತಕ್ಕ ದಾಸೀದಾಸರೂ ಪರಿವಾರವೂ ಬೇಡವೇ? ಇಷ್ಟೊಂದು ದೊಡ್ಡ ಭವನದಲ್ಲಿ ನೀವಿಬ್ಬರು ಮಾತ್ರವೇ ಇರಲಾಗುವುದೇ? ಕಾಲದೇಶಗಳಿಗೆ ತಕ್ಕಂತೆ ನಮ್ಮ ಜೀವಿತವನ್ನೂ ಬದಲಾಯಿಸುವುದು ಯುಕ್ತವಲ್ಲವೇ?" ಎಂದು ಮುಂತಾಗಿ ವಿವರಿಸಲಾಗಿ ಶೂದ್ರಕನು ಮಾಹಿಷ್ಮತೀಶ್ವರನ ಸೌಹಾರ್ದಕ್ಕೆ ತಲೆದೂಗಿ, ವಿಜಯಸಿಂಹನ ವಿನಯ ವಿವೇಕಭರಿತವಾದ ಸೌಜನ್ಯಕ್ಕೆ ಮೆಚ್ಚಿ, ಬಂದಿದ್ದವರೆಲ್ಲರನ್ನೂ ಒಬ್ಬೊಬ್ಬ ರನ್ನಾಗಿ ಅವರ ವಿದ್ಯಾವೈದುಷ್ಯಾದಿಗಳನ್ನು ಪ್ರಶ್ನೆಮಾಡಿ, ಅಂಗೀಕರಿಸಿ ಅವರವರ ಯೋಗ್ಯತಾನುಸಾರವಾಗಿ ಬಿಡಾರಗಳನ್ನು ಗೊತ್ತುಪಡಿಸಿ ನಿಲ್ಲಿಸಿ ಕೊಂಡನು.

ಇಂತೆಯೇ ಕೆಲವು ದಿನಗಳು ಕಳೆದುವು. ಬಳಿಕ ಒಂದು ದಿನ ಶಬರ ಸೇನಾಧಿಪತಿಯನ್ನು ಕರೆಯಿಸಿ ಉಪಚಾರ ವಾಕ್ಯಗಳಿಂದ ಸಂತೋಷ ಗೊಳಿಸಿ ಅವನ ಶೌರ್ಯಸಾಹಸಗಳಿಗೆ ತಕ್ಕಂತೆ ಅವನಿಗೂ ಅವನ ಸೇನೆಗೂ ಉಡುಗೆರೆಗಳನ್ನು ಕೊಟ್ಟು, ಅವನ ಸೈನ್ಯದಲ್ಲಿ ನಾಲ್ಕನೆಯ ಭಾಗವನ್ನು ತನ್ನಲ್ಲಿಯೇ ನಿಲ್ಲಿಸಿಕೊಂಡು ಉಳಿದ ಸೇನೆಯೊಂದಿಗೆ ಅವನನ್ನು ಬೀಳ್ಕೊ ಟ್ಟನು. ವಿಜಯಸಿಂಹನ ಸೇನೆಯಲ್ಲಿ ಮುಕ್ಕಾಲು ಪಾಲು ಸೈನ್ಯಕ್ಕೆ ತಕ್ಕ ರೀತಿಯಿಂದ ಉಡುಗೊರೆ ಉತ್ಸಾಹಗಳನ್ನಿತ್ತು ಮಾಹಿಷ್ಮತಿಗೆ ಕಳುಹಿ, ಮಿಕ್ಕ ಕಾಲು ಪಾಲು ಸೈನ್ಯವನ್ನೂ, ವಿಜಯಸಿಂಹನನ್ನೂ ತನ್ನಲ್ಲಿಯೇ ನಿಲ್ಲಿಸಿಕೊಂಡನು ಸಿಂಹಭಟನು ತನ್ನ ಸೇನೆಯಲ್ಲಿ ನೂರು ಆನೆಗಳನ್ನೂ ಅದಕ್ಕೆ ತಕ್ಕ ಸಿಬ್ಬಂದಿಯನ್ನೂ ಮಾತ್ರವೇ ಉಳಿಸಿಕೊಂಡು ಮಿಕ್ಕ ಸೇನೆಯನ್ನೆಲ್ಲ ಕಳುಹಿಸಿಕೊಟ್ಟನು. ದುರ್ಗಸಂರಕ್ಷಣೆಯು ಸಿಂಹಭಟನ ಕಾರ್ಯವಾಗಿ ಏರ್ಪಟ್ಟಿತು.

ಇತ್ತ ವಿನಯವತಿಯ ನಡೆವಳಿಯಲ್ಲಿ ಸ್ವಲ್ಪ ಮಟ್ಟಿಗೆ ಮಾರ್ಪುಗಳು ತಲೆದೋರಿದುವು. ಮುಂಚೆ ತಾನು ಮಾಧವಿಯ ಮೂಲಕ ಶೂದ್ರಕನಿಗೆ ಪ್ರಣಯಲೇಖಗಳನ್ನು ಬರೆದು ಕಳುಹುತ್ತಲಿದ್ದ ಧಿಟ್ಟತನವು ಈಗ ಮಾಯ ವಾಯಿತು. ನಾಚಿಕೆಯೂ ಅಂಜಿಕೆಯೂ ಅವಳ ಮನದಲ್ಲಿ ತಲೆದೋರ

ತೊಡಗಿದುವು. ಶೂದ್ರುಕನ ಇದಿರಾಗಿ ಸಂಚರಿಸುವುದು ಅಪರೂಪ ವಾಯಿತು, ಸ್ನಾನ ಭೋಜನಾದಿ ಕೃತ್ಯಗಳು ಮುಗಿದ ಕೂಡಲೇ ತನ್ನ ಕೋಣೆಯನ್ನು ಹೊಕ್ಕು, ಯಾವುದಾದರೊಂದು ಗ್ರಂಥಪಠನದಿಂದಲೋ, ಇಲ್ಲವೇ ಪುಷ್ಪರಚನಾದಿ ಕುಶಲವಿದ್ಯೆಗಳಿಂದಲೋ, ವೀಣಾವಾದನಾದಿ ಗಳಿಂದಲೋ ಹೊತ್ತುಕಳೆಯುವಳು. ಸಂಜೆಯಾದ ಕೂಡಲೇ ತನ್ನ ಗೆಳತಿ ಯಾದ ಮಾಧವಿಯೊಡಗೂಡಿ ಉದ್ಯಾನವನ್ನು ಹೊಕ್ಕು ಗಿಡಮರ ಬಳ್ಳಿಗಳ ಸೊಬಗನ್ನು ನೋಡಿ ಆನಂದಿಸುತ್ತ ಹೊತ್ತುಕಳೆಯುವಳು. ಇರುಳಿನಲ್ಲಿ ರಾಮಾಯಣ, ಮಹಾಭಾರತ ಮುಂತಾದ ಇತಿಹಾಸಗಳಲ್ಲಿನ ಸತ್ಕಥಾಲಾಪ ದಿಂದ ಆನಂದಭರಿತೆಯಾಗಿ ಮಾಧವಿಯೊಂದಿಗೆ ನಿದ್ರಿಸುವಳು ವಿಲಾಸ ವತಿಯ ಈಗಣ ಅವಸ್ಥೆಯು ಅತ್ಯಂತ ವಿಲಕ್ಷಣವಾದುದು — ಕನ್ಯೆಯ ಹಾಗೆ ಆಕೆಯ ಅನುರಾಗವು ಭಯವಿಲ್ಲದ ಆನಂದಭರಿತವಾಗಿರಲಿಲ್ಲ. ಅನುರಾಗ ಮಹಿಮೆಯನ್ನು ಅರಿತವಳಲ್ಲವೆಂದು ಹೇಳಲೂ ಸಾಧ್ಯವಲ್ಲ ಹೊಸ ಮದುವಣಗಿತ್ತಿ ಎಂಬುದಾಗಿ ಹೇಳಲೂ ಸಾಧ್ಯವಿಲ್ಲ ಆಕೆಯು ಹರ್ಷಭರಿತೆಯಾಗಿಲ್ಲ, ಉಪಭೋಗಲಾಲಸೆಯೂ ಅಲ್ಲ. ಯುವತಿ ಯಂತಿರುವಳೆಂದರೆ, ತನ್ನ ಕಾಂತನಲ್ಲಿ ಇನ್ನೂ ಸಲುಗೆಯನ್ನು ಸಂಪಾ ದಿಸಿದವಳಲ್ಲ. ಅವಿವಾಹಿತೆ ಎಂಬುದಾಗಿ ಹೇಳಬಹುದೇ? ಎಂದು ಯೋಚಿಸಿದಲ್ಲಿ, ಬಾಲಭಾವಸುಲಭವಾದ ನಿಶ್ಚಿಂತತೆಯೂ, ವಿವಿಧಕ್ರೀಡಾ ವಿನೋದಗಳಲ್ಲಿ ಅಷ್ಟೊಂದು ಅಭಿರುಚಿಯೂ ಇಲ್ಲ ಇಷ್ಟಫಲವನ್ನು ಪಡೆದಿದ್ದರೂ ಅನುಭವಿಸಲಾರದವಳಂತೆ ಯಾವುದೋ ಒಂದು ಬಗೆಯ ಮನೋವ್ಯಥೆಯು ಅವಳನ್ನು ಕೊರಗಿಸುತ್ತಿದ್ದಿತು. ಬಂಧುಬಳಗದವರನ್ನು ಅಗಲಿ ಬಂದುದರಿಂದುಂಟಾದ ಬೇಸರವೂ ಸಂಪೂರ್ಣವಾಗಿ ತೊಲಗಲಿಲ್ಲ. ಅಣ್ಣನ ಹೆಡ್ಡತನವನ್ನೂ ಅತ್ತಿಗೆಯ ಕಪಟತನವನ್ನೂ ಏನು ಮಾಡಿದರೂ ಮರೆಯಲಾರಳು. ಅವು ಆಕೆಯ ಮನಸ್ಸಿನಲ್ಲಿ ವಜ್ರುಸರಿಯಿಂದ ಬರೆದ ಅಕ್ಷರಗಳಂತೆ ನಿಂತುಬಿಟ್ಟವೆ. ನಡುನಡುವೆ ತನ್ನ ತಂದೆಯ ಅವಸಾನ ಕಾಲದ ಮಾತುಗಳೂ, ಮಂತ್ರಿಯಾದ ಧರ್ಮಪಾಲನ ಪ್ರತಿಜ್ಞೆಗಳೂ ಮಿಂಚಿನ ಹಾಗೆ ಹೊಳೆಯುತ್ತಿರುತ್ತವೆ. ಒಂದೊಂದು ಸಮಯದಲ್ಲಿ ತನ್ನನ್ನು ತಾನೇ ಮರೆತವಳಂತೆ ನಿಶ್ಚೇಷ್ಟೆಯಾಗಿ ವಿಧಿವಿಲಾಸವನ್ನು ಕುರಿತು ಯೋಚಿ ಸುತ್ತಾಳೆ. ಶೂದ್ರುಕನ ಧೈರ್ಯಸಾಹಸಗಳು ನೆನಪಿಗೆ ಬಂದ ಕೂಡಲೇ

ಎಲ್ಲವನ್ನು ಮರೆತು ಆಶ್ಚರ್ಯದಿಂದಲೂ ಆನಂದದಿಂದಲೂ ತುಂಬಿ ಹೋಗುವಳು.

ಇತ್ತ ನಮ್ಮ ಕಥಾನಾಯಕನಾದರೂ ನಿಶ್ಚಿಂತನಾಗಿರಲಿಲ್ಲ. ವಿನಯವತಿಯು ತನಗೆ ದಕ್ಕುವಳೇ ಎಂಬುದಾಗಿ ಒಮ್ಮೆ ಯೋಚಿಸುತ್ತಾನೆ. ಒಮ್ಮೆ ಆಕೆಯು ತನಗೆ ಬರೆದ ಪ್ರಣಯಲೇಖಗಳನ್ನು ಸ್ಮರಿಸಿ, ತನ್ನ ಆಶೋತ್ತರಗಳನ್ನು ಬಲಪಡಿಸುವನು. ತನಗೂ ತನ್ನ ಮಿತ್ರವರ್ಗಕ್ಕೂ ಪ್ರಕೃತದಲ್ಲಿ ಒದವಿರುವ ದೆಸೆಯನ್ನು ಯೋಚಿಸಿ ಮತ್ತೊಮ್ಮೆ ಭಗ್ನಾಶನಂತೆ ಕಂದಿ ಹೋಗುವನು. ಪರರಾಜರು ಪರಿವಾರದೊಂದಿಗೆ ಎಷ್ಟೋ ಸ್ನೇಹಾಭಿಮಾನಗಳಿಂದ ತನ್ನನ್ನು ಸೇವಿಸುತ್ತಿದ್ದರೂ, ತಾನು ಯಾವುದೋ ಮಾಡಬಾರದ ಕೆಲಸವನ್ನು ಮಾಡಿದವನಂತೆಯೂ, ಬಂಧುಬಳಗದ ನಡುವೆ ನೀಚಸೇವೆಯನ್ನು ಕೈಕೊಂಡವನಂತೆಯೂ, ಯಾರಿಗೂ ಮುಖವನ್ನೇ ತೋರಲೊಲ್ಲನು ಲೋಕೋತ್ತರವಾದ ಧೈರ್ಯಶೌರ್ಯಗಳಿಂದ ರಾಜಪುತ್ರಿಯನ್ನು ತಾನು ಅಪಹರಿಸಿ ತಂದಿದ್ದರೂ, ತನ್ನಲ್ಲಿಯೇ ತನಗೆ ನಂಬುಗೆ ಇಲ್ಲದವನ ಹಾಗೆ 'ಹಾ! ನನ್ನ ಬಾಳು ವ್ಯರ್ಥ! ಇತರರ ಆಸರೆಯಿಂದ ನಾನು ಬದುಕಿರುವೆನಲ್ಲವೇ?' ಎಂಬುದಾಗಿ ಹೀಯಾಳಿಸಿಕೊಳ್ಳುವನು. ಪರಿವಾರಬಂಧುವರ್ಗದ ಇದಿರಾಗಿ ವಿವಾಹವೇದಿಕೆಯಲ್ಲಿ ರಾಜಪುತ್ರಿಯನ್ನು ಪಾಣಿಗ್ರಹಣ ಮಾಡದೆ ಕಳ್ಳನ ಹಾಗೆ ಕದ್ದು ತಂದು ಈ ಅಡವಿಯಲ್ಲಿ, ಈ ದುರ್ಗದಲ್ಲಿ, ಬದುಕಬೇಕಾಯಿತಲ್ಲವೇ? — ಎಂಬುದಾಗಿ ತಲ್ಲಣಿಸುವನು. ಈ ಬಗೆಯ ತರಂಗಪರಂಪರೆಗಳು ಅವನ ಮನಸ್ಸಿನಲ್ಲಿ ಒಂದರ ಮೇಲೊಂದು ಸಾವಿರಗಟ್ಟಲೆ ತಲೆದೋರುತ್ತಿದ್ದುವು. ಆದರೂ ಉದಾತ್ತಸ್ವಭಾವದವನಾದುದರಿಂದ ಗಾಂಭೀರ್ಯವನ್ನು ತಳೆದು ಯಾವುದೊಂದನ್ನೂ ಅಷ್ಟಾಗಿ ಹೊರಪಡಿಸದೆ ಇದ್ದನು. ವಿನಯವತಿಯ ದರ್ಶನವನ್ನೂ ಮಾಧವಿಯೊಂದಿಗೆ ಸಲ್ಲಾಪವನ್ನೂ ಮಾನಸಿಕವನ್ನಾಗಿ ಮಾಡಿದ್ದಾನೆ. ವಿಜಯಸಿಂಹನು ತನ್ನ ನಡೆವಳಿಯನ್ನು ಕಂಡು ಏನೆಂದುಕೊಳ್ಳುವನೋ, ಸಿಂಹಭಟನು ತನ್ನ ಚೇಷ್ಟೆಗಳನ್ನೆಲ್ಲ ಗುರುತಿಸಿ ತನ್ನ ಪ್ರಭುವಿನ ಹತ್ತಿರ ಏನೆಂದು ಒಕ್ಕಾಣಿಸುವನೋ, ಬೇಡರ ಪಡೆಯವರು ಕೂಡ ಪರಿಹಾಸಮಾಡಿ ಮಾತನಾಡಿಕೊಳ್ಳುವರೋ ಏನೋ, ಅಂತಃಪುರದ ಪರಿಚಾರಕರೂ ದಾಸೀವರ್ಗವೂ ಹೀಯಾಳಿಸದಿರರೇ? — ಎಂಬ ಭಯವೂ ಸಂಕೋಚವೂ

ಮೂಡಿದುವು. ಅಂತರಂಗದಲ್ಲಿ ಆಸೆಯು ಹೆಚ್ಚಿದಷ್ಟಕ್ಕೆ ಸೊಸೆಯನ್ನು ಆಳುವ ಅತ್ತೆಯು ಹಾಗೆ ನಾಚಿಕೆಯು ತನ್ನ ಅಧಿಕಾರವನ್ನು ಅವನ ಮೇಲೆ ಊರ್ಜಿತಗೊಳಿಸುತ್ತಿದ್ದಿತು. ಆಹಾ ! ಇಂತಹ ಸ್ಥಿತಿಯಲ್ಲಿ ನಮ್ಮ ತರುಣನು ಹೇಗೆ ಇರಬಲ್ಲನು ? ಹೀಗೆಯೇ ಎಷ್ಟು ಕಾಲವಿರಬಹುದು ? ಇದರ ಬಿಡುಗಡೆಯಾದರೂ ಹೇಗೆ? ಯಾವ ಉಪಾಯವೂ ಕಾಣಬರುವುದಿಲ್ಲವಲ್ಲಾ! ದಂಪತಿಗಳು ಪ್ರಾಪ್ತವಯಸ್ಕರಾಗಿದು ವಿವಿಕ್ತ ಪ್ರದೇಶದಲ್ಲಿ ಗುರುಹಿರಿಯರ ಭಯವಿಲ್ಲದೆ ಸ್ವತಂತ್ರರಾಗಿ ಸಮೀಪದಲ್ಲಿಯೇ ಇದ್ದರೂ ಈ ಬಗೆಯ ವಿರಹವನ್ನು ಅನುಭವಿಸುವುದೆಂದರೆ ಆಶ್ಚರ್ಯವೇ ಸರಿ. ಇದೀಗ ದೈವವಿಲಾಸವು !

ಅತ್ತ ಉಜ್ಜಯಿನಿಯಲ್ಲಿ ಅರಸನು ಮತಿಗೆಟ್ಟಂತಾದನು. ಶೂದ್ರಕನನ್ನು ಇದಿರಿಸಲು ಕಳುಹಿದ್ದ ಸೇನೆಯೆಲ್ಲವು ಸೋತು ಹಿಂದಿರುಗಿತು. ರಾಜನು ಯಾರೊಬ್ಬರನ್ನು ಆದರಿಸಲಿಲ್ಲ. ರಣರಂಗದಲ್ಲಿ ಮಡಿದ ಸೈನಿಕರ ಕುಟುಂಬಪೋಷಣೆಯ ವಿಚಾರವನ್ನು ಮನಸ್ಸಿಗೆ ತಂದುಕೊಳ್ಳಲಿಲ್ಲ. ಕಂಡಕಂಡವರ ಮೇಲೆ ಉರಿದುಬೀಳತೊಡಗಿದನು. ತನ್ನ ಭಾವಮೈದುನನಾದ ಶಕಾರನನ್ನಾಗಲಿ ಮಂತ್ರಿಯಾದ ಚಕೋರನನ್ನಾಗಲಿ ಶಾಂತಭಾವದಿಂದ ಮಾತನಾಡಿಸಲೊಲ್ಲನು. ವಿವಾಹಮಹೋತ್ಸವಕ್ಕೆ ಆಹೂತರಾಗಿದ್ದವರೆಲ್ಲರು ಕೆಲವರು ಹೇಳಿಯೂ, ಕೆಲವರು ಹೇಳದೆಯೂ ಒಬ್ಬೊಬ್ಬರಾಗಿ ತಮ್ಮ ತಮ್ಮ ದೇಶಗಳಿಗೆ ಹೊರಟುಹೋದರು. ಮಂತ್ರಿಯಾದ ಚಕೋರನು ಬುದ್ಧಿಶೂನ್ಯನಾಗಿ ಯಾರೊಬ್ಬರಿಗೂ ಮೋರೆಯನ್ನು ತೋರಲೊಲ್ಲದೆ ನಾಚಿಕೆಯಿಂದ ತನ್ನಲ್ಲಿಯೇ ಮರುಗುತ್ತಿದ್ದನು ಇಂತಹ ಮಾಟಗಾತಿಯಾದ ವಿನಯವತಿಯು ತನ್ನನ್ನು ವರಿಸದೆ, ಅವಳಿಗೆ ತಕ್ಕಂತಹ ತಂತ್ರಗಾರನಾದ ಶೂದ್ರಕನನ್ನು ವರಿಸಿದುದೇ ಲೇಸಾಯಿತೆಂಬುದಾಗಿ ಶಕಾರನು ತಿಳಿದನು. ಇದರಿಂದ ಅವನ ಮನಸ್ಸಿನ ಕಳವಳವು ಸಂಪೂರ್ಣವಾಗಿ ತೊಲಗಿದಂತಾಯಿತು. ಹೀಗಾಗಿ ಅವನು ಈಗ ಯಾವಾಗಲೂ ಆನಂದಭರಿತನಾಗಿ ದ್ಯೂತಪಾನಗೋಷ್ಠಿಗಳಲ್ಲಿಯೇ ಮುಳುಗಿ ತೇಲುತ್ತಿರುವನು. ರಾಣಿಯಾದ ಅನಂಗಲೇಖೆಯು ಸಂಪೂರ್ಣವಾಗಿ ಶೂದ್ರಕನ ಮೇಲಣ ಮಮತೆಯು ಭಗ್ನವಾಗದಿರುವ ಕಾರಣ ಅಶೋತ್ತರಗಳಿಂದ ಕಾಲ ಕಳೆಯುತ್ತಿದ್ದಳು. ಇಂತಿರಲು ರಾಜನು ಒಂದು ದಿನ ಮಂತ್ರಿಯಾದ

ಚಕೋರನನ್ನೂ ಮತ್ತೆ ಕೆಲವು ಮಂದಿ ಆಪ್ತರನ್ನೂ ಬರಮಾಡಿಕೊಂಡು ಏಕಾಂತವಾಗಿ ಯೋಚಿಸತೊಡಗಿದನು: —

ರಾಜ — " ಮಂತ್ರಿಸತ್ತಮಾ! ಸೇನಾಪತಿಯಾದ ಗೋಪಾಲಕನ ಹೆಡ್ಡತನದಿಂದ ಶೂದ್ರಕನು ಸಿಕ್ಕದೆ ಓಡಿಹೋದನಲ್ಲವೇ ? "

ಮಂತ್ರಿ — " ಸೈನಿಕರೆಲ್ಲರು ವಿವಾಹಮಹೋತ್ಸವವನ್ನು ನೋಡುವ ವಿಲಾಸವೈಭವಗಳಲ್ಲಿ ಮುಳುಗಿದ್ದರು ಒಬ್ಬೊಬ್ಬರು ಹೊಟ್ಟೆಬಿರಿಯ ತಿಂದು ಮಧುಮತ್ತರಾಗಿದ್ದರು. ಇಷ್ಟು ಸಾಲದೆ ಆ ಬ್ರಾಹ್ಮಣಾಧಮನ ಆನೆಯು ನಮ್ಮ ಗಜಸೇನೆಯನ್ನು ಮರುಳುಗೊಳಿಸಿತು. ಇಲ್ಲವಾದರೆ ನಮಗೆ ಪರಾಜಯವೆಂದರೇನು ? ಅವನನ್ನು ಸೋಲಿಸುವುದು ಒಂದು ಲೆಕ್ಕವೇ ? "

ರಾಜ — " ಅದು ದಿಟ. ಈಗ ಹೇಗಾದರೂ ಮಾಹಿಷ್ಮತೀಶ್ವರನ ಮೇಲೆ ದಂಡೆತ್ತಿ ಹೋಗಿ ಅವನ ಸೊಕ್ಕನ್ನು ಮುರಿದು ಆ ರಾಜ್ಯವನ್ನು ನಮ್ಮ ರಾಜ್ಯದೊಂದಿಗೆ ಸೇರಿಸಿಕೊಂಡಲ್ಲದೆ ಅವನಿಗೆ ನಾವು ಬುದ್ಧಿಗಲಿಸಿದಂತಾಗುವುದಿಲ್ಲ ಆದರೆ ಆ ತಿರುಕನಿಗೆ ಅಷ್ಟೊಂದು ಗಜಸೇನೆಯು ಎಲ್ಲಿಂದ ಬಂದಿತು? ಅಷ್ಟು ದೊಡ್ಡ ಸೈನ್ಯವು ಪಟ್ಟಣವನ್ನು ನುಗ್ಗಿದಾಗ ನಮ್ಮವರು ಏನು ಮಾಡುತ್ತಿದ್ದರು ? ಕುಶಾಗ್ರಬುದ್ಧಿಯೆನಿಸಿದ ನಿನಗೂ ಹೊಳೆಯಲಿಲ್ಲವೇ ? ಇದೀಗ ಆಶ್ಚರ್ಯ ! "

ಮಂತ್ರಿ — " ಪ್ರಭೋ ! ವಿಂಧ್ಯಾರಣ್ಯನಿವಾಸಿಗಳಾಗಿರುವ ಬೇಡರು ನಮಗೆ ಚಿರಕಾಲದಿಂದ ಹಗೆಗಳಾಗಿರುವ ವಿಷಯವು ಪ್ರಭುಚಿತ್ತಕ್ಕೆ ವೇದ್ಯವೇ ಆಗಿರುವುದು. ಶೂದ್ರಕನಿಗೂ ವಿಂಧ್ಯಕೇತುವಿಗೂ ಆಪ್ತಸ್ನೇಹವಿರುವುದೆಂಬ ಸಂಗತಿಯನ್ನು ಮೊದಲೇ ಅರಿಕೆ ಮಾಡಿರುವೆನು."

ರಾಜ — " ಶೂದ್ರಕನು ಸೆರೆಮನೆಯಿಂದ ತಪ್ಪಿಸಿಕೊಂಡು ಹೋದುದೇ ಇಷ್ಟೊಂದು ಅನರ್ಥಕ್ಕೆಲ್ಲ ಮೂಲ ಕಾರಣವು. ಇರಲಿ ! ಇನ್ನು ಈಗ ಅದನ್ನೇ ಯೋಚಿಸಿ ಕುಳಿತರೆ ಫಲವಿಲ್ಲ ಮಾಹಿಷ್ಮತೀಶ್ವರನ ಮೇಲೆಯೂ ವಿಂಧ್ಯಕೇತುವಿನ ಮೇಲೆಯೂ ದಂಡೆತ್ತಿದಲ್ಲದೆ ಉಪಾಯವಿಲ್ಲ. ಅವರಿಬ್ಬರನ್ನೂ ಹಿಂಗಟ್ಟು ಬಿಗಿದು ಹಿಡಿತಂದೆವಾದರೆ, ಶೂದ್ರಕನು ತನ್ನಷ್ಟಕ್ಕೆ ತಾನೇ ನೇಣು ಹಾಕಿಕೊಂಡು ಸಾಯುವನು."

ಮಂತ್ರಿ—“ಹಾಗಲ್ಲ. ಮೊದಲು ಶೂದ್ರಕನನ್ನು ಸೋಲಿಸಿ ವಿನಯವತಿಯನ್ನು ತಂದು ಆ ಮೇಲೆ ಮುಂದಣ ಯೋಚನೆ”

ರಾಜ—“ಅದು ಅಸಾಧ್ಯ ಶೂದ್ರಕನಿಗೆ ಮಿತ್ರಸಂಪತ್ತಿಯು ಮಾತ್ರವೇ ಅಲ್ಲ ಈಗ ಅವನು ಬಿಡಾರ ಮಾಡಿರುವ ವನದುರ್ಗವನ್ನು ಹುಗುವುದೆಂದರೆ ಬಾಯಮಾತಲ್ಲ.”

ಮಂತ್ರಿ—“ಇದುವರೆಗೆ ಆ ದುರ್ಗದ ಸುದ್ದಿಯನ್ನೇ ಯಾರೂ ಅರಿಯರು. ಇವನಿಗೆ ಮಾತ್ರ ಹೇಗೆ ತಿಳಿಯಿತೋ ಕಾಣೆನು”

ರಾಜ—“ಒಬ್ಬ ಧರ್ಮಪಾಲನಿಗೆ ಮಾತ್ರವೇ ಗೊತ್ತಿದ್ದಿತು ಈಗ ಅವನಾದರೂ ಏನಾದನೋ ತಿಳಿಯಲಿಲ್ಲ ಒಂದು ವೇಳೆ ನಮ್ಮ ಮೂಲಕ ತಿರಸ್ಕಾರವನ್ನು ಪಡೆದನಾಗಿ ಆತ್ಮಹತ್ಯೆ ಮಾಡಿಕೊಂಡನೋ, ಇಲ್ಲವೆ, ಎಲ್ಲಿಯಾದರೂ ತಲೆ ತಪ್ಪಿಸಿಕೊಂಡಿರುವನೋ ತಿಳಿಯದು. ಆತನು ಅನೇಕ ರಾಜರಹಸ್ಯಗಳನ್ನು ಬಲ್ಲವನು”

ಮಂತ್ರಿ—“ಅಂತಹ ಮರ್ಮಜ್ಞರನ್ನು ಅಲ್ಲಗಳೆದು ದೂಡುವುದು ರಾಜನೀತಿ ವಿರುದ್ಧವಾದುದು.”

ರಾಜ—“ಅದೆಲ್ಲವೂ ಕಳೆದುಹೋದ ಸಮಾಚಾರ ಆ ವನದುರ್ಗವನ್ನು ಮುತ್ತಿ 'ಹಗೆಯನ್ನು ಹಿಡಿತರುವುದೆಂದರೆ ರಕ್ಕಸರಿಗೂ ತರವಲ್ಲ. ಅದನ್ನು ನೇರಿಕೊಂಡವನು ಸುತ್ತಮುತ್ತಣ ಎಷ್ಟು ದೇಶಗಳನ್ನಾದರೂ ಜಯಿಸಬಲ್ಲನು. ಅದರಿಂದ ಈಗ ಮೊತ್ತಮೊದಲು ಶೂದ್ರಕನ ಸಹಾಯ ಸಂಪತ್ತಿಯನ್ನು ಬುಡಮುಟ್ಟ ಕಡಿದು ಹಾಕಬೇಕು.”

ಮಂತ್ರಿ—“ಯುದ್ಧವೆಂದರೆ ಒಂದೆರಡು ದಿನಗಳ ಮಾತಲ್ಲ. ಇಷ್ಟರಲ್ಲಿ ವಿನಯವತಿಯು ಪಾಡೇನಾಗುವುದೋ ಯಾರು ಬಲ್ಲರು? ಅದರಿಂದ ಮೊದಲು ವಿನಯವತಿಯನ್ನು ಬರಮಾಡಿಕೊಂಡು ಆ ಮೇಲೆ ಅಪರಾಧಿಗಳನ್ನು ದಂಡಿಸುವ ಯೋಚನೆ ಮಾಡುವುದು ಲೇಸು ಮೊದಲು ಅಪವಾದಕಳಂಕವನ್ನು ತೊಳೆದುಕೊಂಡರೆ ಆ ಮೇಲೆ—”

ರಾಜ—“ಛೀ! ಚಾರಿತ್ರಭ್ರಷ್ಟೆಯಾದ ಅವಳನ್ನು ತಂದು ಲಾಭವೇನು? ಶಕಾರನಾದರೂ ಈಗ ಅವಳನ್ನು ಮದುವೆಯಾಗಲು ಸಮ್ಮತಿಸುವಂತೆ ತೋರಲಿಲ್ಲ. ಅವಳಾಪರೂ ಧೀರನೂ, ಶೂರನೂ, ಸಾಹಸಿಯೂ, ವಿದ್ಯಾ

ವಂತನೂ ಆದ ಶೂದ್ರಕನನ್ನು ಬಿಟ್ಟು, ಗುಣಲೇಶವೂ ಇಲ್ಲದ ಶಕಾರನ ಕಯ್ಯನ್ನು ಹಿಡಿಯುವಳೇ ? ನನಗೆ ತೋರುವುದಿಲ್ಲ."

ಮಂತ್ರಿ—"ಶೂದ್ರಕನನ್ನು ಕೊಂದು ವಿನಯವತಿಯನ್ನು ತಾರದಿದ್ದರೆ ನಾಚಿಕೆಕೇಡು. ಹೇಗೂ ಅವಳು ಗುರುಹಿರಿಯರನ್ನೂ ಬಂಧುಬಳಗದವರನ್ನೂ ಮೀರಿಹೋಗಿದ್ದಾಳೆ. ಅವಳ ಗತಿಯು ಏನಾದರೆ ನಮಗೇನು ? ಅವಳಿಗೆ ಯಾವಜ್ಜೀವವೂ—"

ರಾಜ—"ಶೂದ್ರಕನನ್ನು ಅವಳು ಮದುವೆಯಾದರೆ ಅವಳಿಗೇನೂ ಯಾವ ಸುಖಕ್ಕೂ ಕೊರತೆ ಇಲ್ಲ. ಆದರೆ—"

ಮಂತ್ರಿ—"ಅಪ್ಪಣೆಯಾಗಲಿ ಇದು ರಹಸ್ಯಮಂದಿರವಷ್ಟೆ!"

ರಾಜ—"ನಮ್ಮ ತಂದೆಯು ಅವಸಾನಕಾಲದಲ್ಲಿ, ಅವಳಿಗೆ ರಾಜ್ಯದಲ್ಲಿ ಸ್ವಲ್ಪ ಭಾಗವನ್ನು ಕೊಡಬೇಕೆಂತಲೂ, ಅವಳು ಶೂದ್ರಕನನ್ನು ಸಮ್ಮತಿಸದಿದ್ದರೆ ಮಾತ್ರವೇ ಬೇರೆ ಯಾವನಾದರೂ ಕ್ಷತ್ರಿಯ ಕುಮಾರನಿಗೆ ಕೊಟ್ಟು ಮದುವೆ ಮಾಡಿಕೊಡಬೇಕೆಂತಲೂ ಅಪ್ಪಣೆಕೊಡಿಸಿದನು. ಈ ಸಮಾಚಾರವು ವಿನಯವತಿಗೂ ಧರ್ಮಪಾಲನಿಗೂ ತಿಳಿದಿದ್ದಿತು. ಅವನೇನೋ ಹುಟ್ಟುಹಾರುವನಾದರೂ ಎಂದಾದರೊಂದು ದಿನ ಪರಾಕ್ರಮದಿಂದ ರಾಜ್ಯವನ್ನು ಸಂಪಾದಿಸಿ, ಸಿಂಹಾಸನವನ್ನು ಏರಿಯೇ ಏರುವನು. ಹಾಗಾದರೆ ಉಜ್ಜಯಿನಿಯನ್ನು ಕಾಪಾಡಿಕೊಳ್ಳುವ ಯೋಚನೆಯನ್ನು ನಾವು ಮಾಡಬೇಕಾಗುವುದು"

ಮಂತ್ರಿ—"ಆಹಾ! ಹಾಗಾದರೆ ಶೂದ್ರಕನು ನಮಗೆ ದೊಡ್ಡ ಹಗೆ. ನೀತಿಶಾಸ್ತ್ರಾನುಸಾರ ನಾವು ಈಗ ಅವನ ವಿಷಯದಲ್ಲಿ ನಾಲ್ಕೂ ಬಗೆಯ—ಅಲ್ಲ, ನಾಲ್ಕನೆಯ ಉಪಾಯ

ಎನ್ನುತ್ತಿರುವಷ್ಟರಲ್ಲಿಯೇ ದ್ವಾರಪಾಲಕನು ಬಂದು, "ಮಹಾಪ್ರಭೋ! ಯಾವನೋ ಒಬ್ಬ ಸನ್ಯಾಸಿಯು ಬಂದಿದ್ದಾನೆ ಈಗ ಸಮಯವಿಲ್ಲವೆಂದು ಎಷ್ಟು ಹೇಳಿದರೂ ಕೇಳಲೊಲ್ಲನು. ಈಗಲೇ ಪ್ರಭುಸಂದರ್ಶನವನ್ನು ಮಾಡಲೇ ಬೇಕಂತ!" ಎನಲು ರಾಜನು ಅವನನ್ನು ಕೂಡಲೇ ಕರೆತರುವಂತೆ ಆಜ್ಞಾಪಿಸಲಾಗಿ, ಆ ಸನ್ಯಾಸಿಯು ಜಯಘೋಷದೊಂದಿಗೆ ಒಳಹೊಕ್ಕು, ಮಂತ್ರಿಯು ತೋರಿದ ಪೀಠದಲ್ಲಿ ಕುಳಿತನು.

ರಾಜ—“ ಯತಿವರ್ಯಾ! ತಮ್ಮ ಪ್ರಜ್ಞಾವಿಶೇಷವು ಎಷ್ಟು ಮಾತ್ರಕ್ಕೆ ಸಫಲವಾಯಿತು ? ”

ಯತಿ—“ ದೇವಾ! ಪ್ರಭುಸಂಕಲ್ಪವು ಬೇರೆಯಾಗುವುದೆಂದರೇನು? ”

ಮಂತ್ರಿ—“ ಸಂಘಿಲಕಾ! ಅವನು ಹೇಗಿದ್ದಾನೆ ? ”

ಯತಿ—“ ಅವನೇ? ಅವನೀಗ ಒಬ್ಬ ಬೇಡನಾಗಿದ್ದಾನೆ. ಹುಟ್ಟಿದಾಗ ಹಾರುವ, ಬೆಳೆಯುವಾಗ ಕ್ಷತ್ರಿಯ, ಆ ಮೇಲೆ ಕಳ್ಳ—ಈಗ ಕಳ್ಳರ ಪಾಳೆಯಗಾರನ ದೊರೆ. ಅಬ್ಬಬ್ಬ! ಮೊನ್ನೆ ಅವನು ಕಾಡಿನಲ್ಲಿ ಸಂಚರಿಸುತ್ತಿದ್ದಾಗ, ಕಿರಾತವೇಷಧಾರಿಯಾದ ಪರಮೇಶ್ವರನಂತೆ ಕಂಡು ಬಂದನು. ವಿನಯವತಿಯು ಕಿರಾತಿಯ ಹಾಗೆಯೇ ಇದ್ದಾಳೆ.”

ರಾಜ—“ ಅವರಿಬ್ಬರಿಗೂ ಪ್ರಕಾಶವಾಗಿ ಮದುವೆಯಾಯಿತೇ? ”

ಸಂಘಿ—“ ಪ್ರಭೋ! ಅವರ ನಡೆವಳಿಯನ್ನು ನೋಡಿದರೆ ಅವರಿಗೆ ಇನ್ನೂ ಮದುವೆಯಾದಂತೆ ತೋರುವುದಿಲ್ಲ ಮಂತ್ರಕ್ಕೆ ಕಟ್ಟುಬಿದ್ದ ನಾಗರಹಾವು ಹಾವಾಡಿಗನ ಅಧೀನದಲ್ಲಿರುವ ಹಾಗೆ ಅವಳೂ ಇದ್ದಾಳೆ. ನಿರ್ಭಾಗ್ಯನಿಗೆ ಲಕ್ಷ್ಮಿಯನ್ನು ದೂರತೊಲಗಿಸುವ ದೊಡ್ಡಮ್ಮನ ಹಾಗೆ ಮಾಧವಿಯು ಯಾವಾಗಲೂ ಅವರಿಬ್ಬರನ್ನು ಎಡೆಬಿಡದೆ ಹಿಂಬಾಲಿಸಿಯೇ ಇರುತ್ತಾಳೆ.”

ರಾಜ—“ ಶೂದ್ರಕನು ಹಾಗೆ ಸುಮ್ಮನಿರತಕ್ಕವನಲ್ಲ. ಯಾವುದೋ ಕಾಲನಿರೀಕ್ಷಣೆಯಿಂದ ಇದುವರೆಗೂ ಮದುವೆಯಾಗಲಿಲ್ಲವೆಂದು ತೋರುವುದು ”

ಮಂತ್ರಿ—“ ಬ್ರಾಹ್ಮಣನು ಮೊದಲು ಅಗ್ನಿಹೋತ್ರಾಧಿಕಾರಸಿದ್ಧಿಗಾಗಿ ಬ್ರಾಹ್ಮಣಕನ್ಯೆಯನ್ನು ಮದುವೆ ಮಾಡಿಕೊಂಡಲ್ಲದೆ, ಕ್ಷತ್ರಿಯಕನ್ಯೆಯನ್ನು ಮದುವೆಯಾಗಕೂಡದೆಂಬುದಾಗಿ ಸ್ಮೃತಿಗಳಲ್ಲಿದೆ.”

ರಾಜ—“ ಯುಕ್ತ. ಅದೀಗ ಕಾರಣವಾಗಿರಬಹುದು. ಸಂಘಿಲಕನೆ! ನೀನು ಶೂದ್ರಕನ ನಡೆವಳಿಯನ್ನು ಹೇಗೆ ಕಂಡುಹಿಡಿದೆ? ಅವನು ನಿನ್ನನ್ನು ಗುರುತಿಸಲೇ ಇಲ್ಲವೇ ? ”

ಸಂಘಿ—“ ಮಹಾಸ್ವಾಮಿಯು ಲಾಲಿಸಬೇಕು. ಮೊನ್ನೆ ಕಳೆದ ಶರನ್ನವರಾತ್ರಮಹೋತ್ಸವದಲ್ಲಿ ಶೂದ್ರಕನು ಮಹಾವೈಭವದಿಂದ ದುರ್ಗಾ ಪೂಜಾಪಾರಾಯಣಾದಿಗಳನ್ನು ನೆರವೇರಿಸಿ, ದಶಮಿಯ ದಿನ ಸಂಜೆಯ

ಹೊತ್ತಿನಲ್ಲಿ ಶಮಿೂದರ್ಶನಾರ್ಥವಾಗಿ ಪರಿವಾರದೊಂದಿಗೆ ಮೆರವಣಿಗೆ ಹೊರಟಾಗ ನಾನು ಆ ಗುಂಪಿನ ನಡುವೆ ತೂರಿ ಯುಕ್ತಿಯಿಂದ ಎಲ್ಲವನ್ನೂ ತಿಳಿದುಕೊಂಡೆನು. ಆಗ ಅಲ್ಲಿ ಮತ್ತೊಂದು ವಿಚಿತ್ರವನ್ನು ಕಂಡೆನು. ನಮ್ಮ ರಾಜ್ಯದ ಗಡಿಯ ಹತ್ತಿರ ಮಹೇಶ್ವರವೆಂಬ ಅಗ್ರಹಾರ ವಿದೆ ಅಲ್ಲಿ ಹರಗಣನೆಂಬ ಭೂಸುರಶ್ರೇಷ್ಠನು ವಾಸವಾಗಿರುತ್ತಾನೆ. ಆತನು ಆ ಕಾಲದಲ್ಲಿ ಕಳತ್ರದೊಂದಿಗೆ ಬಂದಿದ್ದನು "

ರಾಜ—"ಇದರಲ್ಲಿ ಆಶ್ಚರ್ಯವೇನು ? ಬಡಬಗ್ಗರಿಗೆ ಉತ್ಸವಗಳೆಂದರೆ ಎಷ್ಟೋ ಆನಂದ !"

ಸಂಭ—"ಲಾಲಿಸಬೇಕು. ಸಾಮಾನ್ಯಜನರಂತೆ ಅವರು ಬಂದು ಉತ್ಸವವನ್ನು ನೋಡಿ ಹೋಗಿದ್ದರೆ ಈಗ ಪ್ರಭುಸನ್ನಿಧಿಯಲ್ಲಿ ನಾನು ಅದನ್ನು ವಿಜ್ಞಾಪಿಸಬೇಕಾಗಿರಲಿಲ್ಲ. ಆ ಬ್ರಾಹ್ಮಣನಿಗೂ ಶೂದ್ರಕನಿಗೂ ಪೂರ್ವ ಜನ್ಮದ ಋಣಾನುಬಂಧವಿರುವ ಹಾಗೆ ತೋರುತ್ತದೆ ಅವರಿಬ್ಬರ ಪ್ರಾಣಗಳು ಒಂದೇ ಆಗಿದ್ದು ಬೇರೆ ಬೇರೆ ದೇಹಗಳಲ್ಲಿದೆ ಎನ್ನಬಹುದು. ಅವರಿಬ್ಬರ ಸ್ನೇಹದ ಪರಿಮಾಣವನ್ನು ಬಾಯಿಂದ ಹೇಳಲಳವಲ್ಲ."

ರಾಜ—"ತಿರುಕನಾದ ಆ ಬ್ರಾಹ್ಮಣನು ನಮಗೇನಮಾಡಬಲ್ಲನು ? ಇದಕ್ಕಾಗಿ ಇಷ್ಟೊಂದು ಒಕ್ಕಣೆಯೇ ?"

ಸಂಭ—"ಆತನ ಸಹಧರ್ಮಿಣಿಯಾದ ಹರಿಮತಿಯು ಅರುಂಧತಿಯಂತೆ ಪವಿತ್ರಚರಿತ್ರೆಯು, ಮಾತ್ರವಲ್ಲದೆ ನಮ್ಮ ಶ್ರೀಮತಿಯಾದ ರಾಜಭಗಿನಿಯನ್ನೂ ಆಕೆಯನ್ನೂ ಪಕ್ಕದಲ್ಲಿ ನಿಲ್ಲಿಸಿದರೆ ಇವರಿಬ್ಬರಲ್ಲಿ ಯಾರು ಯಾರಾಗಿರ ಬಹುದೆಂಬುದಾಗಿ ನಿರ್ಧರಿಸಿ ಹೇಳುವುದು ಯಾರಿಗೂ ತರವಲ್ಲ. ಅವರಿಬ್ಬ ರನ್ನು ಪ್ರತ್ಯೇಕವಾಗಿ ನೋಡಿದಲ್ಲಿ ಎಂತಹವನಿಗಾದರೂ ಭ್ರಾಂತಿಯುಂಟಾ ಗದಿರದು."

ಮಂತ್ರಿ—"ಅದಕ್ಕೇನು ? ಬ್ರಹ್ಮಸೃಷ್ಟಿಯಲ್ಲಿ ಸಂಪೂರ್ಣವಾದ ಸಾರೂ ಪ್ಯವು ಅಲ್ಲಲ್ಲಿ ಕಂಡುಬರುವುದು. ಅಂತಹವರನ್ನೆಲ್ಲ ಸಂಗ್ರಹಿಸಿ ಇಡ ಬೇಕಾದುದು ರಾಜನ ಕರ್ತವ್ಯವೆಂಬುದಾಗಿ ರಾಜನೀತಿ ಪ್ರಣೇತೃಗಳಾದ ಬೃಹಸ್ಪತ್ಯಾಚಾರ್ಯರು ಅಭಿಪ್ರಾಯ ಪಟ್ಟಿರುತ್ತಾರೆ."

ಸಂಘಿ—“ಶ್ರೀಮತಿಯನ್ನೂ ಹರಿಮತಿಯನ್ನೂ ನಿರ್ಮಿಸುವಲ್ಲಿ ಚತುರ್ಮುಖನು ಹೇಗೆ ಸ್ವಲ್ಪವೂ ವ್ಯತ್ಯಾಸವಾಗದಂತೆ ಪಾರಾದನೆಂಬುದು ಆಶ್ಚರ್ಯ.”

ರಾಜ—“ಅದೆಲ್ಲವೂ ಹಾಗಿರಲಿ. ಈಗ ಆ ಯೋಚನೆಯಿಂದ ನಮಗೆ ಬಂದ ಭಾಗ್ಯವೇನು ?”

ಮಂತ್ರಿ—“ಹಾಗೆ ಅಪ್ಪಣೆ ಕೊಡಿಸಲಾಗದು. ಸಮಯ ಬಂದಾಗ ಗರಿಕೆಯ ಹುಲ್ಲು ಕೂಡ ಬ್ರಹ್ಮಾಸ್ತ್ರವಾಗಬಹುದೆಂಬುದಾಗಿ ರಾಜನೀತಿಜ್ಞರು ಅಪ್ಪಣೆ ಕೊಡಿಸಿರುತ್ತಾರೆ ಬ್ರಹ್ಮಾಸ್ತ್ರವಾದರೂ, ಮಳೆಯಲ್ಲಿ ನನೆದು ತೇವವಾದ ಆಕಾಶಬಾಣದಂತೆ ಟಸ್ಸನೆ ಕುಸಿದು ಬೀಳಬಹುದು. ಎಲ್ಲವನ್ನು ಗ್ರಹಿಸಿ ವಿವರಿಸುವುದು ಚಾರರ ಕರ್ತವ್ಯ ಅದರ ಮುಂದಣ ವಿಚಾರವು ರಾಜರಿಗೆ ಸೇರಿದುದು ”

ರಾಜ—“ಸರಿ. ಮಾಹಿಷ್ಮತಿಯ ರಾಜನು ಅಲ್ಲಿಗೆ ಬಂದಿದ್ದನೋ ?”

ಸಂಘಿ—“ಆತನು ಬರಲಿಲ್ಲ. ತನ್ನ ಕುಟುಂಬವನ್ನೂ ಪ್ರಧಾನಾಮಾತ್ಯನನ್ನೂ ಕಳುಹಿಸಿಕೊಟ್ಟು ತನ್ನ ಸ್ನೇಹವನ್ನು ಹೊರಪಡಿಸಿದನು.”

ರಾಜ—“ಪ್ರಧಾನನೆಂದರೆ ಯಾರು ?”

ಸಂಘಿ—“ನಯಲೋಚನನು.”

ಮಂತ್ರಿ—“ಆತನು ನಮ್ಮ ಧರ್ಮಪಾಲನ ನಂಟನು. ಧರ್ಮಪಾಲನ ಮಕ್ಕಳು ಆತನ ಮನೆಯಲ್ಲಿಯೇ ಪಿತೃಲಾಲನೆಯನ್ನು ಅನುಭವಿಸುತ್ತಿರುವರೆಂಬುದಾಗಿ ಕೇಳಿರುವೆನು ”

ಸಂಘಿ—“ಆತನ ಹೆಣ್ಣು ಮಕ್ಕಳಲ್ಲಿ ಚಂದ್ರಲೇಖೆಯೆಂಬುವಳು ಅನುಪಮಸೌಂದರ್ಯವತಿ, ವಿನಯಗಂಭೀರಾಕೃತಿ, ಉದಾರರೀತಿ, ವಿವಾಹಯೋಗ್ಯವಯೋವತಿ ”

ರಾಜ—“ಅದು ಹೇಗೆ ? ಅಂತಹ ವಯೋರೂಪಲಾವಣ್ಯಭರಿತೆಯಾದ ಮಗಳು ಅವನಿಗೆ ಇರುವ ಹಾಗೆ ಚಾರರೊಬ್ಬರೂ ಹೇಳಲೇ ಇಲ್ಲವಲ್ಲಾ !”

ಮಂತ್ರಿ—“ಆ ಹುಡುಗಿಯೂ ಆತನ ಸಂಗಡಲೇ ಬಂದಿದ್ದಳೇನು ?”

ಸಂಘಿ—“ಮತ್ತೇನು ? ಆ ಚಂದ್ರಲೇಖೆಯೂ ನಮ್ಮ ಶ್ರೀಮತಿಯೊಂದಿಗೆ ಕಲೆತು ಬೆರೆತು ಇದ್ದಳಲ್ಲವೇ !”

ಮಂತ್ರಿ—“ಇದೂ ಒಂದು ಶುಭಸಮಾಚಾರವೇ ಸರಿ. ಶೂದ್ರಕನು ಈಗಾಗಲೇ ಲಬ್ಧಪ್ರತಿಷ್ಠನಾದ ಮಹಾರಾಜನ ಹಾಗೆ ಕ್ರೀಡಾಲೋಲ ನಾಗಿರುವುದು ನಮಗೆ ತುಂಬ ಅನುಕೂಲವೇ ಸರಿ.”

ರಾಜ—“ಈಗ ನನಗೆ ನೆನಪಿಗೆ ಬಂದಿತು. ಈಗ್ಗೆ ಅರವತ್ತು ವರ್ಷ ಗಳ ಹಿಂದೆ ನಮ್ಮ ಅಜ್ಜಂದಿರು ಅದೇ ವನದಲ್ಲಿ ದುರ್ಗಾಪೂಜಾದಿ ಗಳನ್ನು ನೆರವೇರಿಸಿ, ಶಮೀವೃಕ್ಷವನ್ನು ಪ್ರಾರ್ಥಿಸಿ, ದಿಗ್ವಿಜಯಕ್ಕೆ ತೆರಳಿ ಸಮುದ್ರವಸನೆಯಾದ ಭೂಕಾಂತೆಯನ್ನು ಕಯ್ವಿಡಿದು ಕೀರ್ತಿವಂತರಾಗಿ ಮೆರೆದರು”

ಮಂತ್ರಿ—“ಅದೆಲ್ಲವನ್ನೂ ಈಗ ಸ್ಮರಿಸುವುದು ನಮ್ಮ ಬಾಳ್ವೆಗೆ ನಗೆಗೇಡು”

ರಾಜ—“ಅಷ್ಟುಮಾತ್ರವೇ ಅಲ್ಲ. ಶೂದ್ರಕನ ಪುರೋಭಿವೃದ್ಧಿಗೆ ಉಪಶ್ರುತಿಯೂ ಕೂಡ.”

ಮಂತ್ರಿ—“ತಾವು ಅಷ್ಟು ಹೆದರ ಕೆಲಸವಿಲ್ಲ. ರಾಜನೀತಿಯು ಸರಳ ವಾದುದಲ್ಲವಷ್ಟೆ!”

ಸಂಘ—“ದಿಟ ಸರಳ ಮಾರ್ಗದಲ್ಲಿ ಸಾಧ್ಯವಾಗದಿದ್ದರೆ ತಂತ್ರ ದಿಂದಲಾದರೂ ಅವನನ್ನು ಕೊಲ್ಲದ ಬಿಡೆನು”

ಮಂತ್ರಿ—“ಶೂದ್ರಕನು ಇಷ್ಟು ಸ್ವಲ್ಪ ಕಾಲದಲ್ಲಿ ಇಂದ್ರಸರೋವರ ತೀರದಲ್ಲಿ ಸ್ವಲ್ಪವೂ ಭಯವಿಲ್ಲದೆ ಶಾರದೋತ್ಸವವನ್ನು ಮಾಡುವುದೆಂದ ರೇನು? ಇದರ ಅರ್ಥವನ್ನಾದರೂ ಗ್ರಹಿಸಿದಿರಾ? ಇದು ನಮ್ಮನ್ನು ಅವಮಾನಗೊಳಿಸುವುದಕ್ಕಾಗಿಯೇ ಮಾಡಿದುದು. ಮೊದಲು ಮೊದಲು ಸಿಂಹವು ಉದಾಸೀನಭಾವದಿಂದಿರುವುದನ್ನು ಕಂಡು, ತನಗೆ ಹೆದರಿ ಸುಮ್ಮ ನಿರುವುದೆಂಬುದಾಗಿ ಭಾವಿಸುವುದು ನರಿಯ ಹೆಡ್ಡತನ ಒಳ್ಳೆಯದು, ಕುರಿಯು ಕೊಬ್ಬಿದಷ್ಟಕ್ಕೂ ಕುರುಬನಿಗೇ ಲಾಭ”

ರಾಜ—“ಅವನ ಇಷ್ಟೊಂದು ಸಾಹಸಕ್ಕೆ ಮಿತ್ರಸಂಪತ್ತಿಯೇ ಕಾರಣವಲ್ಲವೇ?”

ಸಂಘ—“ಇರಲಿ. ಈಜುವುದರಲ್ಲಿ ಹೆಚ್ಚು ಆಸೆಯುಳ್ಳವನಿಗೆ ಅದ ರಿಂದಲೇ ಸಾವು ದಿಟ. ಗಜಶಿಕ್ಷಣದಲ್ಲಿ ನಿರುಪಮಚತುರನೆಂಬುದಾಗಿ

ಪ್ರಖ್ಯಾತಿವೆತ್ತಿದ್ದ ವತ್ಸರಾಜನು ಗಜದಿಂದಲೇ ಭಂಗಪಡಲಿಲ್ಲವೇ? ವಿದ್ಯಾ ವ್ಯಸನಿಯಾಗಿದ್ದ ಪ್ರಾಣಿನಿಮಹರ್ಷಿಯನ್ನು ಸಿಂಹವು ಕೊಲ್ಲಲಿಲ್ಲವೇ?"

ರಾಜ—"ನೀವು ಏನು ಹೇಳಿದರೂ ನನ್ನ ಮನಸ್ಸಿಗೆ ಎಳ್ಳಷ್ಟಾದರೂ ಧೈರ್ಯವಿಲ್ಲ. ಮಂತ್ರಿವರ್ಯಾ! ಮೊತ್ತಮೊದಲು ಬೇಡರ ಪಾಳೆಯಗಾರ ನನ್ನು ಕೊಂದು ಅವನ ಬೆಂಬಲವನ್ನೆಲ್ಲ ಚದರಿಸಿ, ದೇಶದಿಂದ ಅಟ್ಟಿ, ಮಾಹಿಷ್ಮತೀಶ್ವರನನ್ನು ಹಿಂಗಟ್ಟು ಬಿಗಿದು ಎಳೆತಂದು ನಮ್ಮ ಸೆರೆಮನೆಯಲ್ಲಿ ಹಾಕಿದಲ್ಲದೆ ನನ್ನ ಪ್ರಾಣಗಳು ಈ ಅಸ್ಥಿಪಂಜರದಲ್ಲಿ ನಿಲ್ಲಲಾರವು."

ಮಂತ್ರಿ—"ಅದೆಷ್ಟರ ಕೆಲಸ ಆಯಿತೆಂದು ಭಾವಿಸಬಹುದು."

ಸಂಘಿ—"ಹಾಗಾದರೆ ನಾನೂ ಮಾಯೋಪಾಯದಿಂದ ಶೂದ್ರಕನನ್ನು ಕೊಂದು ಶ್ರೀಮತಿಯಾದ ವಿನಯವತಿಯನ್ನು ತಂದೆನೆಂತಲೇ ಮಹಾ ಸ್ವಾಮಿಯು ಭಾವಿಸಿ ನಿಶ್ಚಿಂತರಾಗಿರಬಹುದು."

ರಾಜ—"ಬೇಡ. ಅವಳ ಸುದ್ದಿಯೇ ಬೇಡ. ಅವಳು ಬಂದರೂ ಕುಲಕ್ಕೆ ಕಳಂಕವು ತಪ್ಪಿದುದಲ್ಲ ಅವನನ್ನು ಕೊಂದ ಬಳಿಕ ಅವಳು ಮಾತ್ರ ಬದುಕಿರಬಲ್ಲಳೇ? ಆ ಕುಲಗೇಡಿಯ ಗೋಜಿಗೆ ಹೋಗಲೇ ಬೇಡ."

ಸಂಘಿ—"ಹಾಗಾದರೆ ಶ್ರೀಮತಿಯು ಲೋಕಾಂತರವನ್ನೈದಿದರೂ ಅವನು ಬದುಕುವ ಹಾಗಿಲ್ಲ. ಅವರಿಬ್ಬರಲ್ಲಿ ಒಬ್ಬರನ್ನು ಕೊಂದರೂ ಸಾಕಷ್ಟೆ!"

ರಾಜ—"ನನಗೊಂದೂ ತೋರುವುದಿಲ್ಲ. ಈ ರಾಜ್ಯದ ನೆಲೆಯು ನಿಮ್ಮ ಬುದ್ಧಿಬಲವನ್ನು ಆಶ್ರಯಿಸಿಕೊಂಡಿದೆ. ಇಷ್ಟು ಮಾತ್ರವೇ ನಾನು ಹೇಳಬಲ್ಲೆನು."

ಮಂತ್ರಿ—"ಮಹಾಸ್ವಾಮಿಯವರಿಗೆ ಜಯವಾಗುವುದರಲ್ಲಿ ಸಂದೇಹವೇ ಇಲ್ಲ"

ಸಂಘಿ—"ನಮ್ಮ ಮಂತ್ರಿವರ್ಯನು ಬುದ್ಧಿಬಲದಿಂದಲೂ ನಾನು ಉಪಾಯಬಲದಿಂದಲೂ ಹೇಗೂ ಅವನನ್ನು ಕೊನೆಗಾಣಿಸದಿರಲಾರೆವು. ಒಂದು ವೇಳೆ ಇವೆಲ್ಲವೂ ಫಲಿಸದೆ ಹೋದರೆ, ಮಂತ್ರಮಾಟಗಳು ಇದ್ದೇ ಇವೆ. ಇವು ನಮಗೆ ಒಡಹುಟ್ಟಿದುವಲ್ಲವೇ!"

ರಾಜ—“ನಡೆಯಲಿ. ಅದನ್ನು ನಿರೀಕ್ಷಿಸುವ. ದೈವಬಲದಿಂದಲೇ ಈಗ ಕಾರ್ಯವು ಕೈಗೂಡಬೇಕಲ್ಲದೆ ಮಾನುಷಪ್ರಯತ್ನದಿಂದ ಸಾಧ್ಯವಲ್ಲ.”

ಈ ರೀತಿಯಾಗಿ ಗುಪ್ತಮಂತ್ರಸಭೆಯನ್ನು ಅಲ್ಲಿಗೆ ಸಾಕುಮಾಡಿ ಅರಸನು ಅಂತಃಪುರವನ್ನು ಹೊಕ್ಕನು ಚಕೋರನೂ ಸಂಘಿಲಕನೂ ಬಹಳ ಹೊತ್ತಿನ ವರೆಗೆ ತಮ್ಮ ಕರ್ತವ್ಯನಿರ್ವಹಣೋಪಾಯಗಳನ್ನು ಚರ್ಚಿಸುತ್ತಿದ್ದು ತಮ್ಮ ತಮ್ಮ ಮನೆಗಳಿಗೆ ತೆರಳಿದರು

ಇತ್ತ ಶೂದ್ರಕನು ಒಂದು ದಿನ ಸಂಜೆಯ ಹೊತ್ತಿನಲ್ಲಿ ಇಂದ್ರ ಸರೋವರತೀರದಲ್ಲಿ ಕುಳಿತು ಮಾಧವೀವಿನಯವತಿಯರೊಂದಿಗೆ ಸುಖ ಸಂಕಥಾ ವಿನೋದದಿಂದ ಕಾಲಕಳೆಯುತ್ತಿರುವಲ್ಲಿ, ಹರಗಣನು ಅಲ್ಲಿಗೆ ಬಂದನು ಹಿಂದೆ ಶೂದ್ರಕನು ಶಾರದೋತ್ಸವವನ್ನು ನಡೆಯಿಸಿದಾಗ ಈತನು ತನ್ನ ಮಡದಿಯಾದ ಹರಿಮತಿಯೊಂದಿಗೆ ಬಂದಿದ್ದನು ಆಗ ಇವನ ವಿನಯವು ಶೂದ್ರಕನ ಮನಸ್ಸಿಗೆ ಮೆಚ್ಚುಗೆಯನ್ನುಂಟುಮಾಡಿತು ಹರಗಣನಾದರೋ ಶೂದ್ರಕನನ್ನು ತನ್ನ ಪಾಲಿನ ದೈವವೆಂತಲೇ ಭಾವಿಸಿದ್ದನು. ಇವರಿಬ್ಬರೂ ಕುಶಲಪ್ರಶ್ನಾದಿಗಳನ್ನು ನಡೆಯಿಸಿದ ಬಳಿಕ ಹರಗಣನು ಶೂದ್ರಕನನ್ನು ತನ್ನ ಮನೆಗೆ ದಯೆಮಾಡಿಸಬೇಕೆಂಬುದಾಗಿ ಕರೆದನು. ಶೂದ್ರಕನು ಮರುಮಾತನಾಡದೆ ಸಮ್ಮತಿಸಿದನು. ಬಳಿಕ ರಾತ್ರಿಯಲ್ಲಿ ಭೋಜನವಾದ ಮೇಲೆ ಶೂದ್ರಕನು ತನ್ನ ಪ್ರಯಾಣವನ್ನು ಸಿಂಹಭಟನಿಗೆ ತಿಳುಹಲಾಗಿ, ಅವನು “ಪ್ರಭೋ! ಪ್ರಬಲನಾದ ವೈರಿಯು ರಂಧ್ರಾನ್ವೇಷಿಯಾಗಿ ಸಮಯವನ್ನು ನಿರೀಕ್ಷಿಸುತ್ತಿರುವಲ್ಲಿ ತಾವು ಈಗ ಈ ಔತಣಕ್ಕೆ ತೆರಳುವುದು ಅಷ್ಟು ಸಮ್ಮತವಾದುದಲ್ಲ. ಹಗೆಗಳ ಸುಳಿವೇ ಇಲ್ಲದಂತೆ ಮಾಡಿ ನೆಲೆಗೊಂಡ ರಾಜನು ಏಕಾಂತ ಸಂಚಾರ ಮಾಡುವುದು ಬಾಧಕವೆನಿಸಲಾರದು. ಇಷ್ಟರ ಮೇಲೆ ಸ್ವಾಮಿಯ ಚಿತ್ತ” ಎನಲು, ಶೂದ್ರಕನು “ದಿಟ; ನಾನು ಬಹಳ ದೂರ ಹೋಗುವುದಿಲ್ಲ. ಒಂದೆರಡು ದಿನಗಳಲ್ಲಿಯೇ ಹಿಂದಿರುಗುವೆನು. ಹರಗಣನಿಗೆ ವಾಗ್ದಾನಮಾಡಿಯಾಯಿತು. ಈಗ ಆತನ ಮನಸ್ಸನ್ನು ನೋಯಿಸಲೊಲ್ಲೆನು. ಅರಸರಿಗೆ ಹಗೆಗಳಿಂದ ಮಾತ್ರವೇ ಅಲ್ಲ, ಎಲ್ಲರಿಂದಲೂ ಹೆದರಿಕೆಯು ಇದ್ದೇ ಇದೆ. ಆದರೆ ದೈವವೂ ಒಂದಿರುವುದಲ್ಲವೇ! ಬೆಳಗಾಗುತ್ತಲೇ ಹೊರಡಲು ತಕ್ಕ ಏರ್ಪಾಡುಗಳನ್ನು ಮಾಡು. ವಿಜಯಸಿಂಹನು ನಾಳೆಯ ಸಂಜೆಯೊಳ

ಗಾಗಿ ಮಾಹಿಷ್ಮತಿಯಿಂದ ಹಿಂದಿರುಗಿ ಬರುವನು. ಅವನೂ ನೀನೂ ಇಬ್ಬರೂ ಕೋಟೆಯನ್ನು ಜೋಪಾನವಾಗಿ ನೋಡಿಕೊಂಡಿರಬೇಕು” ಎಂದನು ಆಗ ಸಿಂಹಭಟನು “ದೇವಾ! ದುರ್ಗಕ್ಕೆ ಯಾರ ಕಾವಲೂ ಬೇಕಾಗಿಲ್ಲ. ಅದು ಪರರಿಗೆ ಅಸಾಧ್ಯವಾಗಿರುವ ರೀತಿಯಲ್ಲಿ ದೇವರೇ ಅದನ್ನು ಹಾಗೆ ನಿರ್ಮಿಸಿದ್ದಾನೆ. ಇಷ್ಟರ ಮೇಲೆ ನಾವು ತಮ್ಮ ಆಣತಿಯನ್ನು ಮೊನೆಯಷ್ಟು ಮೀರತಕ್ಕವರಲ್ಲ ಆದರೆ ತಮ್ಮ ಸಂಗಡ ಬೆಂಬಲವಾಗಿ ಸ್ವಲ್ಪ ಸೈನ್ಯವಿರುವುದು ಒಳ್ಳೆಯದು” ಎನಲು, ಆಗ ಶೂದ್ರಕನು ‘ಬೇಡ, ಬೇಡ, ಆ ಗ್ರಾಮವು ಅವಂತಿಯ ಗಡಿಯಲ್ಲಿಯೇ ಇರುವುದು. ಈಗ ನಾನು ಸೇನೆಯೊಂದಿಗೆ ಹೊರಟೆನೆಂದರೆ ಕೊಳ್ಳೆಹೊಡೆಯುವುದಕ್ಕೆ ಹೊರ ಟಿರುವೆನೆಂಬುದಾಗಿ ನಾವಾಗಿಯೇ ಇಲ್ಲದ ಸಂದೇಹವನ್ನುಂಟು ಮಾಡಿ ದಂತಾಗುವುದು ಕೆಲವು ಮಂದಿ ಭಟರು ಮಾತ್ರ ಸಂಗಡ ಬಂದರೆ ಸಾಕು” ಎಂದನು.

ಮರು ದಿನ ಶೂದ್ರಕನು ಮಾಧವೀವಿನಯವತಿಯರೊಂದಿಗೆ ಹರ ಗಣನ ಮನೆಯಲ್ಲಿ ಔತಣೋಪಚಾರಗಳಿಂದ ಸಂತಸಬಟ್ಟು ಆನಂದ ಭರಿತನಾಗಿದ್ದಾನೆ. ಆ ದಂಪತಿಗಳ ಪರಸ್ಪರಾನುಕೂಲ ಚಿತ್ತವೃತ್ತಿ, ಅಕೃತ್ರಿಮಾನುರಾಗ, ಶೌಚಾಚಾರ, ಮೃದುಮಧುರ ಭಾಷಣ, ಪಣರ ಹಿತವಾದ ದ್ಯೂತಾದಿ ಕ್ರೀಡೆ, ವಿವಿಧವಿನೋದವಿಲಾಸಚಾತುರ್ಯ, ಪುಣ್ಯ ಕಥಾಕಾಲಕ್ಷೇಪ ಮುಂತಾದುವು ವಿನಯವತೀ ಶೂದ್ರಕರ ಮನಸ್ಸನ್ನು ಮರುಳು ಮಾಡಿದುವು. ರಾಜಪುತ್ರಿಯು ಈ ದಂಪತಿಗಳ ಗೃಹಸ್ಥಾ ಶ್ರಮ ವ್ಯವಹಾರಗಳನ್ನು ಕಂಡು ಮೂಗಿನ ಮೇಲೆ ಬೆರಳಿಟ್ಟುಕೊಂಡಳು ಹರಿಮತಿಯು ತಾನು ವಿನಯವತಿಯನ್ನು ರಾಜಮರ್ಯಾದೆಗೆ ತಕ್ಕಂತೆ ಉಪಚರಿಸಲು ಶಕ್ಯವಾಗಲಿಲ್ಲವೆಂಬುದಾಗಿ ಮನಸ್ಸಿನಲ್ಲಿಯೇ ಕೊರಗುತ್ತಿ ದ್ದಳು. ಅದರ ಛಾಯೆಯನ್ನು ವಿನಯವತಿಯು ಹೇಗೆಯೋ ತಿಳಿದು, ತನ್ನ ಎಳೆತನದ ಗೆಳತಿಯಂತೆ ಹರಿಮತಿಯ ಹೆಗಲ ಮೇಲೆ ಕಯ್ ಚಾಚಿ “ಅಕ್ಕಾ! ಇದೇಕೆ ಹೀಗೆ ಸಂಕೋಚ ಪಡುತ್ತಿರುವೆ. ಅಂತಃಪುರದ ಸುಖವು ಒಂದು ಸುಖವೇ! ಇತ್ತ ಕೇಳು. ಅಲ್ಲಿರುವುದೆಲ್ಲವೂ ಕೃತಕ. ಭಯ, ಕ್ರೋಧ, ಕುಹಕಗಳಿಗೆ ಅದು ತವರ್ಮನೆ; ಅಸೂಯೆಯ ಗಣಿ; ದುರಭಿಮಾನದ ನೆಲೆ; ಕಪಟವರ್ತನದ ಬೀಡು. ಸೇವಕವರ್ಗವಾದರೋ

ಫಲಾಪೇಕ್ಷೆಯಿಂದಲ್ಲದೆ ಅಕೃತ್ರಿಮ ಭಯಭಕ್ತಿಗಳಿಂದ ಸೇವಿಸುವುದೆಂದೆಣಿಸ ಬೇಡ. ಇಂತು ಸರ್ವ ವಿಧದಲ್ಲಿಯೂ ಹೇಯವಾಗಿರುವ ಶುದ್ಧಾಂತ ಸೌಖ್ಯವು ನಿಮ್ಮಂತಹ ಶುದ್ಧಾಂತಃಕರಣಭರಿತೆಯರಾದ ಸಾಧ್ವೀಮಣಿಗಳ ಉಪಚಾರ ಸುಖಕ್ಕೆ ಎಂದಿಗೂ ಸಮಾನೆನಿಸದು. ಅದರಿಂದ ಇನ್ನು ಮುಂದೆಯಾದರೂ ಈ ಸಂಕೋಚವನ್ನು ಸಂಪೂರ್ಣವಾಗಿ ತೊಲಗಿಸು. ಇಂತಹ ಅಕೃತ್ರಿಮ ಪ್ರೀತಿವಿಶ್ವಾಸಗಳು ಕಪಟವರ್ತನದಿಂದಲೇ ಬೆಳೆದ ಅಂತಃಪುರನಿವಾಸಿಗಳಿಗೆ ದೊರೆಯುವುದೆಂದರೇನು ? ಸಾವಿರ ಮಾತಿ ನಿಂದೇನು ? ಈ ಜನ್ಮದಲ್ಲಿ ಈಗ ನಿಮ್ಮ ಸಂಗಡ ಈ ಮನೆಯಲ್ಲಿ ನಾನು ಅನುಭವಿಸುತ್ತಿರುವ ಸುಖಸಂತೋಷಗಳನ್ನು ಮರಳಿ ಅನುಭವಿಸಬಲ್ಲೆನೇ? ಇದು ತ್ರಿಕರಣಶುದ್ಧವಾದ ಮಾತು" ಎಂಬುದಾಗಿ ಸಮಾಧಾನಪಡಿ ಸಿದಳು

ಮರು ದಿನ ಮಧ್ಯಾಹ್ನ ಪೂಜಾಸಮಯದಲ್ಲಿ ಶೂದ್ರಕನು ದೇವರ ಕೋಣೆಯಲ್ಲಿ ಕುಳಿತು ಪೂಜೆ ಮಾಡುತ್ತಿದ್ದಾಗ, ಹರಗಣನ ಗೃಹಿಣಿಯು ನೈವೇದ್ಯವನ್ನು ತಂದಿರಿಸಿ ಮೆಲ್ಲಗೆ ಅಲ್ಲಿಂದ ಸರಿದಳು ಆಗ ಆಕೆಯು ಮುಂದಗಮನಿಂದಲೇ ಭೂಮಿಯ ಕೆಳಗೆ ಒಂದು ಗವಿಯೋ ಗುಪ್ತ ಮಾರ್ಗವೋ ಇರುವುದೆಂಬುದಾಗಿ ಶೂದ್ರಕನಿಗೆ ತೋರಿತು. ಭೋಜ ನಾನಂತರ ಭೂಸುರರಿಬ್ಬರು ನಡುಮನೆಯಲ್ಲಿ ಕುಳಿತು ತಾಂಬೂಲವನ್ನು ಮೆಲ್ಲುತ್ತಿರುವಾಗ ಶೂದ್ರಕನು ಹರಗಣನನ್ನು ಕುರಿತು, "ಮಿತ್ರಪುಂಗವಾ! ಈ ಮನೆಯನ್ನು ಯಾರು ಯಾವಾಗ ಕಟ್ಟಿದರು ? ಇದು ನಿಮಗೆ ಪ್ರಾಪ್ತ ವಾದುದು ಹೇಗೆ ? ಇದರ ವಿನ್ಯಾಸಕ್ರಮವೇನಾದರೂ ತಮಗೆ ತಿಳಿ ದಿದೆಯೋ ?" ಎನಲು ಹರಗಣನು "ಮಿತ್ರಾವತಂಸಾ ! ಅವಂತೀ ದೇಶದಲ್ಲಿ ಸಕಲ ನೀತಿಧರ್ಮಗಳಲ್ಲಿಯೂ ವಿಶಾರದನೆನಿಸಿದ್ದ ಧರ್ಮಪಾಲನೆಂಬ ಭೂಸುರನು ಈಗ್ಗೆ ಕೆಲವು ಕಾಲದ ವರೆಗೆ ಮಂತ್ರಿಯಾಗಿದ್ದು, ರಾಜನ ದುರುದುಂಬಿತನದಿಂದ ತಿರಸ್ಕೃತನಾಗಿ ಎಲ್ಲಿಯೋ ಹೊರಟುಹೋದ ಸಮಾಚಾರವನ್ನು ನೀನು ಬಲ್ಲೆಯಷ್ಟೆ! ಆತನ ಮುತ್ತಜ್ಜಂದಿರಾದ ನಯ ಪಾಲ ಪ್ರಧಾನರು ಈ ಮನೆಯನ್ನು ಕಟ್ಟಿಸಿ ಇದರಲ್ಲಿಯೇ ತಪೋನಿರತ ರಾಗಿದ್ದು ಪರಲೋಕವನ್ನೈದಿದರು. ಬಳಿಕ ಅವರ ಮಗ ಧರ್ಮಪಾಲನು (ಈಗಣ ಧರ್ಮಪಾಲನ ಅಜ್ಜ) ಸಕಲ ವೇದ ವೇದಾಂಗ ವಿಶಾರದನಾದ

ನಮ್ಮ ಅಜ್ಜನಿಗೆ ದಾನ ಮಾಡಿದರು. ನಮ್ಮ ಅಜ್ಜಂದಿರು ಇಲ್ಲಿಯೇ ತಪೋನಿರತರಾಗಿದ್ದು ಶಿಷ್ಯಕೋಟಿಗೆ ಪಾರಪ್ರವಚನಗಳನ್ನು ಮಾಡಿಸುತ್ತ ಕಾಲಗತಿಯನ್ನೈದಿದರು. ಅಂದಿನಿಂದ ಇದು ನಮ್ಮ ಮುಖ್ಯವಾದ ಆಸ್ತಿಯಾಗಿದೆ" ಎಂದನು. ಮಾರನೆಯ ದಿನ ಶುಕ್ರವಾರ, ಶೂದ್ರಕನು ರಾತ್ರಿಯಲ್ಲಿ ದುರ್ಗಾಮಂತ್ರವನ್ನು ವಿಶೇಷವಾಗಿ ಜಪಿಸಿ ದೇವಿಯನ್ನು ಆರಾಧಿಸತಕ್ಕ ದಿನ. ಮನೆಯುವರೆಲ್ಲರು ಮಲಗಿ ಗಾಢನಿದ್ರೆಯಲ್ಲಿದ್ದಾರೆ ಶೂದ್ರಕನ ಪೂಜಾಕಾರ್ಯವು ಸುಮಾರು ರಾತ್ರಿ ೫ ಗಳಿಗೆಗೆ ಮುಗಿಯಿತು ಆ ಮನೆಯ ವಿನ್ಯಾಸಕ್ರಮವನ್ನು ತಿಳಿಯಬೇಕೆಂಬ ಕುತೂಹಲವು ಇಮ್ಮಡಿಯಾಯಿತು. ಗೋಡೆಗಳ ಅಸ್ತಿಭಾರವನ್ನು ಚೆನ್ನಾಗಿ ಪರಿಕಿಸ ತೊಡಗಿದನು ಉತ್ತರದ ಗೋಡೆಯಲ್ಲಿ ಒಂದು ಬಾಗಿಲಿನಷ್ಟು ಅಗಲಕ್ಕೆ ಅಸ್ತಿಭಾರವಿರಲಿಲ್ಲ ಅಲ್ಲಿದ್ದ ಗಾರೆಯನ್ನು ಸ್ವಲ್ಪ ಕೆರೆಯುವಷ್ಟರಲ್ಲಿ ದೊಡ್ಡ ಹೆಟ್ಟೆ ಕಯ್ಗೆ ಬಂದಿತು. ನೋಡುವಲ್ಲಿ ಒಂದು ಬಾಗಿಲು ಕಾಣ ಬಂದಿತು. ಆದನ್ನು ತೆರೆದು ಮತ್ತಷ್ಟು ಕುತೂಹಲದಿಂದ ಒಳಹೊಕ್ಕು ನೋಡುವಲ್ಲಿ ಧೂಪಧೂಮಮಿಶ್ರವಾದ ಪುಷ್ಪಪರಿಮಳವು ಇವನ ಮನ ಸ್ಸನ್ನು ಮತ್ತಷ್ಟು ಆಕರ್ಷಿಸಿತು ಅದೇ ಮಾರ್ಗವಾಗಿ ಮುಂದೆ ನಡೆದನು. ಕಾಲು ಮೈಲಿ ದೂರ ಹೋಗುವಲ್ಲಿ ಊರ ಹೊರಗಣ ಶಿವಾಲಯದಲ್ಲಿ ಶೂದ್ರಕನು ನಿಂತನು. ಕೂಡಲೇ ಬಂದ ದಾರಿಯನ್ನು ಹಿಡಿದು ಹಿಂದಿರುಗಿ ಬಂದು ಆ ಬಾಗಿಲನ್ನು ಮುಚ್ಚಿ ಹಜಾರದಲ್ಲಿ ಮಲಗಿದನು. ಬೆಳಗಾಗುತಲೇ ಶೂದ್ರಕನು ತಾನು ರಾತ್ರಿಯಲ್ಲಿ ಮಾಡಿದ ಕೃತ್ಯವನ್ನು ಆ ದಂಪತಿಗಳಿಗೆ ತಿಳುಹಲಾಗಿ ಅವರು "ಆಹಾ! ಎಂತಹ ಪ್ರಮಾದವಾಯಿತು. ಅದರಲ್ಲಿ ಭೂತಗಳಿರುವುವೆಂಬುದಾಗಿ ಹಿರಿಯರು ಹೇಳುತ್ತಿದ್ದರು. ನಮ್ಮ ತಾತಂದಿರು ಮಾತ್ರವೇ ಅದರೊಳಗೆ ರಾತ್ರಿ ಹೊತ್ತಿನಲ್ಲಿ ಹೋಗುತ್ತಿದ್ದರಂತೆ. ಅವರ ಬಳಿಕ ಯಾರಿಗೂ ಧೈರ್ಯ ಸಾಲದುದರಿಂದ ನಾವು ಆ ಬಾಗಿಲಿಗೆ ಗಾರೆಯನ್ನು ಬಳಿದು ಮುಚ್ಚಿದ್ದೆವು. ನೀನು ಸುಖವಾಗಿ ಹಿಂದಿರುಗಿದುದು ಪುಣ್ಯವಶ" ಎಂದರು. ಆದರೆ ಶೂದ್ರಕನು ಆ ದಾರಿಯು ಊರಾಚೆ ಇರುವ ಶಿವದೇವಸ್ಥಾನದಲ್ಲಿ ಸೇರುವುದೆಂಬ ವಿಷಯವನ್ನು ಮಾತ್ರ ಅವರಿಗೆ ತಿಳುಹಲಿಲ್ಲ.

ಆ ದಿನ ಸಾಯಂಕಾಲದಲ್ಲಿ ಹರಗಣನೂ ಶೂದ್ರಕನೂ ಸಾಯಂ ಸಂಧ್ಯೆಗಾಗಿ ನದಿಯನ್ನು ಸೇರಿ ಸಂಧ್ಯಾಕೃತ್ಯಗಳನ್ನು ನೆರವೇರಿಸಿ

ಶರತ್ಕಾಲದ ಚಂದ್ರಿಕೆಯಿಂದ ಆಹ್ಲಾದವಟ್ಟು ಮರಳು ದಿಣ್ಣೆಯ ಮೇಲೆ ಕುಳಿತು ಮಾತನಾಡುತ್ತಿರುವಲ್ಲಿ ಒಂದು ಗಿಳಿಯು ತನ್ನ ಮೂಗಿನಿಂದ ಒಂದು ಕಾಗದವನ್ನು ಕಚ್ಚಿ ತಂದು ಶೂದ್ರಕನ ಹೆಗಲಿನ ಮೇಲೆ ಕುಳಿತು ಕೊಂಡಿತು. ಶೂದ್ರಕನು ಆಶ್ಚರ್ಯಭರಿತನಾಗಿ ಆ ಲೇಖವನ್ನು ಬಿಚ್ಚಿ

ಕಂದ|| "ಅರಗಿಳಿ! ನಿನ್ನಯ ಘನತರ |
ವರಮಹಿಮೆಯನರಿಯದಿರ್ದೆನಿಂದಿನವರೆಗಂ
ಕರುಣಿಸು ಮುದದಿಂದೀಗಳ್
ಸುರುಚಿರಮಧುಮಧುರದಿವ್ಯವಚನಾವಳಿಯಿಂ"

ಓದಿ, ಹರಗಣನ ಕಯ್ಗೆ ಕೊಟ್ಟು, ಇದರ ಉದ್ದೇಶವೇನಿರಬಹು ದೆಂದು ಪ್ರಶ್ನೆಮಾಡಲಾಗಿ, "ಗೆಳೆಯಾ! ಇದೊಂದು ಆಶ್ಚರ್ಯ. ಇದು ಸಾಮಾನ್ಯ ಗಿಳಿಗಳಂತಲ್ಲ. ಪರರ ಇಂಗಿತಾಕಾರವೇಷಭಾಷಾದಿಗಳನ್ನು ಚೆನ್ನಾಗಿ ಕಂಡುಹಿಡಿಯಬಲ್ಲುದು. ದೂತಕರ್ಮವನ್ನು ಚತುರತೆಯಿಂದ ನಿರ್ವಹಿಸಬಲ್ಲುದು ಶತ್ರುಗಳನ್ನೂ ಮಿತ್ರರನ್ನೂ ತಿಳಿದುಕೊಳ್ಳುವುದರಲ್ಲಿ ಇದರ ಚಾತುರ್ಯವು ವರ್ಣನಾತೀತವಾದುದು ಇತರರ ತಂತ್ರಗಳನ್ನು ಅರಿಯುವುದರಲ್ಲಿ ಇದರ ಪ್ರವೀಣತೆಯು ಲೋಕೋತ್ತರವಾದುದು. ಹರಿಮತಿಯು ಇದನ್ನು ತನ್ನ ಶಯನಗೃಹದಲ್ಲಿ ಯಾರಿಗೂ ಕಾಣದಂತೆ ಪಂಜರದಲ್ಲಿಟ್ಟು ಸಾಕುತ್ತಿರುವಳು. ಅವಳಿಗೆ ಈ ಅರಗಿಣಿಯಲ್ಲಿ ಪುತ್ರ ವಾತ್ಸಲ್ಯವಿರುವುದು. ಇದು ನಮ್ಮಿಬ್ಬರ ಪ್ರಣಯ ಕಲಹಾದಿಗಳಲ್ಲಿ ಮಾಧ್ಯಸ್ಥ್ಯವನ್ನು ವಹಿಸುವುದೂ ಉಂಟು. ಬಹುಶಃ ವಿನಯವತಿಯು ಇದನ್ನು ಈ ಹೊತ್ತು ನೋಡಿ ಇದರ ಮಹತ್ವವನ್ನು ಕೇಳಿ ತಿಳಿದು, ಪರೀಕ್ಷಾರ್ಥವಾಗಿ ಈ ಪತ್ರವನ್ನು ಬರೆದು ಕಳುಹಿದಂತೆ ತೋರುತ್ತದೆ. ಇದರಲ್ಲಿನ ಪದ್ಯವು ಶ್ಲಿಷ್ಟವಾಗಿರುವುದರಿಂದ ಅದರ ಅರ್ಥವನ್ನು ಹೇಗೆ ಬೇಕಾದರೂ ಅನ್ವಯಿಸಿಕೊಳ್ಳಬಹುದು" ಎಂದನು. ಆಗ ಶೂದ್ರಕನು ಆಶ್ಚರ್ಯಭರಿತನಾಗಿ—

ಕಂದ|| "ಮುನ್ನೇಂತ ಪುಣ್ಯಫಲದಿಂ |
ನಿನ್ನಯ ಕಯ್ವಿಡಿದು ಜಗದಿ ಧನ್ಯನದೆಂತೋ ||
ಪನ್ನಗವೇಣೀ! ಭರದಿಂ
ದೆನ್ನಯ ವರಭವ್ಯಫಲದೆ ತಣಿಪೆಂ ನಿನ್ನಂ"

ಎಂಬುದಾಗಿ ಪ್ರತಿಲೇಖವನ್ನು ಬರೆದು ಗಿಳಿಗೆ ಕೊಟ್ಟನು. ಅದು ವಿನಯದಿಂದ ತಲೆವಾಗಿ ಆ ಪತ್ರಿಕೆಯನ್ನು ಮೂಗಿನಿಂದ ಕಚ್ಚಿಕೊಂಡು ಒಡನೆಯೇ ಅಲ್ಲಿಂದ ಹಾರಿ ನಿಮಿಷಮಾತ್ರದಲ್ಲಿ ಮಾಯವಾಯಿತು.

ಇತ್ತ ಹರಗಣನೂ ಶೂದ್ರಕನೂ ಹಕ್ಕಿಗಳ ಪ್ರಜ್ಞಾಚಾತುರ್ಯಗಳ ವಿಷಯವಾಗಿ ಬಹಳ ಹೊತ್ತಿನ ವರೆಗೆ ಮಾತನಾಡುತ್ತಿದ್ದರು. ಆಗ ಶೂದ್ರಕನು "ರಾಜನೀತಿಯ ಮರ್ಮವನ್ನರಿತವರು ಇಂತಹ ಪ್ರಜ್ಞಾಶಾಲಿಗಳಾದ ಹಕ್ಕಿಗಳನ್ನು ಸಾಕುತ್ತ, ಅವುಗಳ ಬುದ್ಧಿಚಾತುರ್ಯದಿಂದ ಎಂತಹ ದುಷ್ಕರ ಕಾರ್ಯಗಳನ್ನಾದರೂ ಸಾಧಿಸಿ ಕೀರ್ತಿಪಡೆಯುವರು ನಳಚಕ್ರವರ್ತಿಯು ಹಂಸದ ಸಹಾಯದಿಂದಲ್ಲವೇ ದಮಯಂತಿಯನ್ನು ಪಡೆದನು? ಪ್ರಭಾವತಿಯು ತನ್ನ ಪ್ರಣಯಲೇಖವನ್ನು ಸಾರಿಕೆಯ ಮೂಲಕ ಕಳುಹಿ ಪ್ರದ್ಯುಮ್ನನ ಕಯ್ ಹಿಡಿದಳಲ್ಲವೇ! ಹಿಂದೆ ಪದ್ಮಾವತೀ ಪಟ್ಟಣದಲ್ಲಿ ಅರಸನಾಗಿದ್ದ ನಾಗಸೇನನ ತಂತ್ರವನ್ನು ಕೇಳಿ ಸಾರಿಕೆಯು ತನ್ನ ಪ್ರಭುವಿಗೆ ತಿಳಿಯಪಡಿಸಿ, ಹಗೆಯನ್ನು ಯಮಲೋಕಕ್ಕೆ ಕಳುಹಿಸಿತಲ್ಲವೇ! ಇನ್ನು ಇಂತಹ ದೃಷ್ಟಾಂತಗಳು ಅನೇಕವಾಗಿರುವುವು ಅದರಿಂದ ಈ ಹಕ್ಕಿಯನ್ನು ತುಂಬ ಜೋಪಾನವಾಗಿ ಕಾಪಾಡಬೇಕು" ಎಂದನು.

ಆಗ ಹರಗಣನು "ಇದು ನಮಗೆ ದೊರೆತುದು ಒಂದು ಆಶ್ಚರ್ಯವು. ನಿನ್ನ ಮಿತ್ರಶ್ರೇಷ್ಠನಾದ ವಿಂಧ್ಯಕೇತುವು ನಮ್ಮ ದಂಪತಿಗಳಿಬ್ಬರನ್ನೂ ವಿಂಧ್ಯವಾಸಿನಿಗೆ ಬಲಿಗೊಡುವ ಸಲುವಾಗಿ ಕರೆದುಯ್ದನಷ್ಟೆ. ಆಗ ನಾವು ನಿನ್ನ ಕರುಣೆಯಿಂದ ಬದುಕಿ ಹಿಂದಿರುಗಿ ಬರುವಾಗ ಭಗವತಿಯಾದ ವಿಂಧ್ಯವಾಸಿನಿಯ ಮಂದಿರವನ್ನು ಹೊಕ್ಕು ಪ್ರಾಕಾರವನ್ನು ಸುತ್ತಿ ಬಂದು ಗರ್ಭಗೃಹವನ್ನು ಪ್ರದಕ್ಷಿಣಮಾಡುತ್ತಿದ್ದಾಗ ಅಲ್ಲಿ ತಪಸ್ಸುಮಾಡುತ್ತಿದ್ದ ಒಬ್ಬ ಸಿದ್ಧಪುರುಷನನ್ನು ಸಂದರ್ಶಿಸಿ, ನಾವಿಬ್ಬರೂ ಆತನಿಗೆ ದಂಡ ಪ್ರಣಾಮವನ್ನು ಮಾಡಲಾಗಿ, ಅವರು ನಮ್ಮನ್ನು ಹರಸುವುದಕ್ಕೆ ಮೊದಲೇ ಈ ಗಿಳಿಯು ಸ್ಫುಟವಾದ ಮಾನುಷವಾಕ್ಕಿನಿಂದ 'ದೀರ್ಘಸುಮಂಗಲೀ ಭವ'—ಎಂಬುದಾಗಿ ನನ್ನ ಗೃಹಿಣಿಯನ್ನು ಆಶೀರ್ವದಿಸಿ, ನನ್ನನ್ನು ಕುರಿತು "ಆಯ್ಯಾ ಬ್ರಾಹ್ಮಣೋತ್ತಮನೆ! ಇದರಿಂದಲೇ ನಿನ್ನನ್ನೂ ಆಶೀರ್ವದಿಸಿ ದಂತಾಯಿತು" ಎಂದಿತು. ಈ ಮಾತನ್ನು ಕೇಳಿ ಅಚ್ಚರಿಗೊಂಡ ಹರಿಮತಿಯು, ಪಂಜರದ ಸಮೀಪಕ್ಕೆ ಹೋಗಿ ಅಕ್ಕರೆಯಿಂದ ಲಾಲಿಸತೊಡಗಿ

ದಳು. ಆಗಳಾ ಸಿದ್ಧಪುರುಷನು 'ಅಮ್ಮಾ! ಇದು ನಿನಗೆ ಬೇಕೇ?' ಎಂದು ಕೇಳಿದನು. ಹರಿಮತಿಯು ಕಿರುನಗೆಯಿಂದ ತಲೆವಾಗಿದಳು. ಆ ಮಹನೀಯನು ಪಂಜರದೊಂದಿಗೆ ಗಿಳಿಯನ್ನು ಅವಳ ಕಯ್ಗೆ ಕೊಟ್ಟು ನನ್ನೊಂದಿಗೆ 'ಇದು ಭೂಲೋಕದಲ್ಲಿ ದೊರೆಯುವುದು ತುಂಬ ವಿರಳ. ನಿಮ್ಮ ಪುಣ್ಯವಿಶೇಷದಿಂದಲೇ ದೊರೆತಿರುವುದು. ಇದನ್ನು ನೀವು ನಿಮ್ಮ ಇಷ್ಟಾನುಸಾರವಾಗಿ ಕರೆದುಯ್ದು ಸಾಕಬಹುದು. ಆದರೆ ನನ್ನ ಅನುಮತಿಯಿಲ್ಲದೆ ಯಾರಿಗೂ ಕೊಡಬಾರದು' ಎಂಬುದಾಗಿ ಅಣತಿಯಿತ್ತನು"— ಎಂದನು ಆಗ ಶೂದ್ರಕನು "ಆ ಸಿದ್ಧಪುರುಷನ ಮಹಿಮೆಯು ಲೋಕೋತ್ತರವಾದುದು. ನಾನು ಆತನಿಗೆ ಚಿರಋಣಿಯಾಗಿರುವೆನು. ಆ ಮಹಾನುಭಾವನ ದರ್ಶನವು ಮಾತ್ರ ಇಂದಿನ ವರೆಗೂ ನನಗೆ ಲಭಿಸಲಿಲ್ಲ. ಆತನು ಯಾರೆಂಬುದನ್ನು ಬಲ್ಲೆಯಾ?" ಎಂದು ಪ್ರಶ್ನೆಮಾಡಲಾಗಿ "ಇಲ್ಲ, ಆತನ ತೇಜಃಪ್ರಸರವು ಎಂತಹವರ ಬಾಯನ್ನೂ ಮುಚ್ಚಿಸಿಬಿಡುತ್ತದೆ— ಅಲ್ಲಿ ಆ ಪ್ರಶ್ನೆಯನ್ನು ಕೇಳಬೇಕೆಂಬ ಕುತೂಹಲವು ನನಗೂ ಉಂಟಾಯಿತು. ಆದರೆ ಕೇಳಲಾರದೆ ಹೋದೆನು. ಆತನು ಯಾರೆಂಬುದನ್ನು ಅರಿತವರೇ ಇಲ್ಲ" ಎಂಬುದಾಗಿ ಮಾತನಾಡಿಕೊಳ್ಳುತ್ತ ಮನೆಯನ್ನು ಸೇರಿ ಭೋಜನಾನಂತರ ಆ ರಾತ್ರಿಯನ್ನು ಸಂತೋಷವಾಗಿ ಕಳೆದರು.

ಮರು ದಿನ ಬೆಳಗಾಗುತ್ತಲೇ ಶೂದ್ರಕನು ವನದುರ್ಗಕ್ಕೆ ಹೊರಡಲನುವಾದನು. ಇಷ್ಟರಲ್ಲಿ ಒಬ್ಬ ರಾವುತನು ಕುದುರೆಯನ್ನು ವೇಗವಾಗಿ ಓಡಿಸುತ್ತ ಆ ಮನೆಯ ಮುಂದೆ ನಿಂತು ಶೂದ್ರಕನನ್ನು ಸಂದರ್ಶಿಸಿ ಎರಡು ಲೇಖಗಳನ್ನಿತ್ತು ದೂರವಾಗಿ ಸರಿದು ನಿಂತನು

ಅವುಗಳನ್ನು ಬಿಚ್ಚಿ ಓದುವಲ್ಲಿ— ಶಬರನಾಯಕನಾದ ವಿಂಧ್ಯಕೇತುವನ್ನು ಅವಂತಿಯ ಸೈನಿಕರು ಸೆರೆಹಿಡಿದಿರುವುದಾಗಿ ಒಂದು ಲೇಖದಲ್ಲಿ ಒಕ್ಕಣಿಕೆ ಇದ್ದಿತು. ಎರಡನೆಯ ಪತ್ರದಲ್ಲಿ— ಮಾಹಿಷ್ಮತಿಯನ್ನು ಉಜ್ಜಯಿನಿಯ ಪಡೆಯು ಮುತ್ತಿಗೆ ಹಾಕಿರುವುದರಿಂದ ವಿಜಯಸಿಂಹನು ವನದುರ್ಗಕ್ಕೆ ಹಿಂದಿರುಗಿ ಬರುವುದು ಸಾಧ್ಯವಲ್ಲವೆಂತಲೂ ಶ್ರೀಮತಿಯಾದ ರಾಜಪುತ್ರಿಯನ್ನು ಹರಗಣನ ಮನೆಯಲ್ಲಿಯೇ ಬಿಟ್ಟು ಒಡನೆಯೇ ಹೊರಟು ಶಬರಪತಿಯ ಬಿಡುಗಡೆಗಾಗಿ ಸೇನೆಯೊಂದಿಗೆ ಹೋಗುತ್ತಿರುವ ತನ್ನನ್ನು ಇಂದ್ರಸರೋವರದ ತೀರದಲ್ಲಿ ಬಂದು ಸೇರಬೇಕೆಂತಲೂ

ಸಿಂಹಭಟನು ಬರೆದಿದ್ದನು ಶೂದ್ರಕನ ಅಂತರಂಗವು ಕಲುಷಿತವಾಯಿತು. “ಆಹಾ! ನಾನೆಂತಹ ನಿರ್ಭಾಗ್ಯನು. ಮಿತ್ರಸುಖವನ್ನು ದೈವವು ಸಹಿಸದಿರುವುದಲ್ಲಾ! ವಿಂಧ್ಯಕೇತುವು ಸೆರೆಸಿಕ್ಕಿದನೇ? ಈಗ ವಿನಯವತಿಯನ್ನು ಇಲ್ಲಿ ಬಿಟ್ಟು ಹೋಗುವುದು ನೀತಿಸಮ್ಮತವಲ್ಲ ಸಹಸ್ರಲೋಚನನಂತಿರುವ ಚಕೋರನ ರಾಜನೀತಿಯು ಊಹಿಸಲಳವಲ್ಲ. ಆದರೆ ಸಿಂಹಭಟನೇನೂ ಅವಿವೇಕಿಯಲ್ಲ. ಹಾಗಾದರೆ ವಿನಯವತಿಯನ್ನು ಇಲ್ಲಿಯೇ ಬಿಟ್ಟುಬರುವಂತೆ ಬರೆಯಲು ಕಾರಣವೇನಿರಬಹುದು. ಕಾಲವಿಳಂಬವಾಗುವುದೆಂದು ಹೀಗೆ ಬರೆದಿರಬಹುದೇ? ಇಲ್ಲವೆ ದುರ್ಗದಲ್ಲಿ ವಿನಯವತಿಯನ್ನು ಒಂಟಿಯಾಗಿ ಬಿಟ್ಟುಹೋಗಲು ಸಮ್ಮತಿಸದೆ ಹೀಗೆ ಬರೆದಿರುವನೇ? ಹೇಗಾದರಾಗಲಿ. ಈಗ್ಗೆ ಇಲ್ಲಿಯೇ ಬಿಟ್ಟಿರುವುದೇ ಒಳ್ಳೆಯದು” ಎಂಬುದಾಗಿ ನಿಶ್ಚಯಿಸಿ, ನಡೆದ ವೃತ್ತಾಂತವನ್ನೆಲ್ಲ ತನ್ನ ಮಿತ್ರನಿಗೆ ತಿಳುಹಿ, ರಾಜಪುತ್ರಿಯನ್ನು ಹೇಗೋ ಸಮಾಧಾನಪಡಿಸಿ, ವಿನಯವತಿಯ ಸಂರಕ್ಷಣೆಯನ್ನು ಆತನಿಗೆ ಒಪ್ಪಿಸುವಲ್ಲಿ, ಆ ಭೂಸುರೋತ್ತಮನು “ಅಯ್ಯಾ! ಹೆಚ್ಚು ಮಾತಿನಿಂದೇನು? ನೀನು ನಮ್ಮ ಪ್ರಾಣದಾತನು. ಶ್ರೀಮತಿಯು ನಮ್ಮ ಭಾಗದ ಕುಲದೈವವೆಂತಲೇ ಭಾವಿಸಿರುವೆವು ಆಕೆಯ ಸಂರಕ್ಷಣೆಯ ವಿಷಯದಲ್ಲಿ ನೀನು ಯೋಚಿಸ ಕೆಲಸವಿಲ್ಲ. ಆದಷ್ಟು ಬೇಗನೆ ಹಿಂದಿರುಗದಿದ್ದಲ್ಲಿ ನಿನ್ನ ಮೇಲಣ ಉತ್ಕಂಠೆಯೇ ನಮ್ಮ ಮೂವರನ್ನೂ ಮುಗಿಯಿಸಿಕೊಳ್ಳುವುದು” ಎಂದನು. ಶೂದ್ರಕನು “ಬ್ರಹ್ಮತೇಜೋವಿರಾಜಿತನಾದ ನೀನು ಅರುಂಧತೀಸಮಾನಳೆನಿಸಿದ ಗೃಹಿಣಿಯೊಂದಿಗೆ ಸ್ವಧರ್ಮನಿರತನಾಗಿರುವಲ್ಲಿ ನಿಮ್ಮ ಮರೆಯಲ್ಲಿರುವ ವಿನಯವತಿಗೆ ಯಾವ ಭಯವೂ ಇಲ್ಲವೆಂಬುದನ್ನು ಚೆನ್ನಾಗಿ ಬಲ್ಲೆನು. ಆದರೆ ರಾಜನೀತಿಯು ಅತಿಕುಟಿಲವಾದುದು. ವಿಷವೇಗಕ್ಕಿಂತಲೂ ಬೇಗನೆ ಹರಡುವುದು. ನೋಡುತ್ತಿರುವ ಹಾಗೆಯೇ ಜನಗಳನ್ನು ಮರುಳು ಮಾಡುವುದು. ನಾನಿನ್ನು ಹೊರಡುವೆನು” ಎನಲು; ಆ ಬ್ರಾಹ್ಮಣಶ್ರೇಷ್ಠನು—“ನೀನು ಹೆದರಬೇಡ. ಅಂತಹ ವಿಪತ್ತು ಒಂದು ವೇಳೆ ಸಂಭವಿಸಿತೆಂದರೆ, ನನ್ನ ಪತ್ನೀಪರಿವಾರಸಂಪತ್ತನ್ನಾದರೂ ಉಪೇಕ್ಷಿಸುವೆನಲ್ಲದೆ ನಿನ್ನ ಅರ್ಧಾಂಗಿಯನ್ನು ನಾನು ಬದುಕಿರುವ ವರೆಗೂ ಇತರರ ವಶಮಾಡೆನು. ಇದಕ್ಕೆ ಪಂಚಭೂತಗಳೂ ಕರ್ಮಸಾಕ್ಷಿಯಾದ ಸೂರ್ಯನೂ ಸಾಕ್ಷಿ” ಎಂಬುದಾಗಿ ಘೋರಪ್ರತಿಜ್ಞೆ

ಮಾಡಿದನು. ಆಗ ಶೂದ್ರಕನು "ಮಿತ್ರವರ್ಯ! ನಿನ್ನ ಮಾತಿನಲ್ಲಿ ನನಗೆ ಭರವಸೆ ಇಲ್ಲವೇ? ಇದಕ್ಕೇಕೆ ಇಷ್ಟೊಂದು ಭೀಕರ ಪ್ರತಿಜ್ಞೆ?" ಎಂದು ಹೇಳಿ ಮರಳಿ ವಿನಯವತಿಯ ಬಳಿಸಾರ್ದು ಬಗೆಬಗೆಯಿಂದ ತಿಳಿಯ ಹೇಳಿ ಅತಿಪ್ರಯಾಸದಿಂದ ಅವಳನ್ನು ಅಲ್ಲಿಯೇ ಇರಿಸುವುದಕ್ಕೆ ಒಪ್ಪಿಸಿ, ತನ್ನ ಸೆರಗಿನಿಂದ ಅವಳ ಕಂಬನಿಯನ್ನೊರೆಸಿ, ಕೂಡಲೇ ಅಲ್ಲಿಂದ ಹೊರಟು, ಸಿಂಹಭಟನು ತಿಳಿಸಿದ ಸಂಕೇತ ಸ್ಥಳವನ್ನು ಮುಖ್ಯಧ್ಯೇಯವನ್ನಾಗಿಟ್ಟು ಕೊಂಡು, ಹಳ್ಳತಿಟ್ಟುಗಳೆನ್ನದೆ ಕುದುರೆಯನ್ನು ವೇಗವಾಗಿ ಓಡಿಸುತ್ತ ಬರುವಲ್ಲಿ ಸಿಂಹಭಟನು ನಮಸ್ಕರಿಸಿ, ಕಾರ್ಯವು ವಿಷಮಾವಸ್ಥೆಗೆ ಬರಲು ಕಾರಣಗಳನ್ನೆಲ್ಲ ಈ ರೀತಿ ಒಕ್ಕಣಿಸಿದನು:—

"ನಾವು ಈಗ ತಡಮಾಡಿದರೆ ತುಂಬ ಕಿರುಕುಳಕ್ಕೆ ಒಳಗಾಗುವೆವು. ವಿಂಧ್ಯಕೇತುವು ಹೆಂಡತಿಯೊಡನೆ ಅಲ್ಪಪರಿವಾರದೊಂದಿಗೆ ತನ್ನ ಪಾಳೆಯದ ಹತ್ತಿರವಿರುವ ಒಂದು ಕಾಡಿನಲ್ಲಿ ನೆಲೆಸಿರುವ ಶಕ್ತಿಯನ್ನು ಪೂಜಿಸುತ್ತಿದ್ದಾಗ ಉಜ್ಜಯಿನಿಯ ಸೈನಿಕರು ಅವನನ್ನು ಮುತ್ತಿದರು. ಆಗ ಅವನು ನಿರಾ ಯುಧನಾಗಿದ್ದುದರಿಂದ ಅವನೆಷ್ಟು ಬಗೆಯಿಂದ ಹೋರಾಡಿದರೂ ನಿಷ್ಫಲ ವಾಯಿತು. ಪರಿವಾರದವರಲ್ಲಿ ಬಹಳ ಮಂದಿ ಪೂಜಾದ್ರವ್ಯಗಳನ್ನು ಹೊತ್ತುತಂದವರು ಕೆಲವರು ಮಾತ್ರವೇ ಬಿಲ್ಲು ಬಾಣಗಳೊಂದಿಗೆ ಬಂದಿದ್ದರು ಅಷ್ಟು ಸ್ವಲ್ಪ ಸೇನೆಯಿಂದ ಅವಂತೀಭಟರನ್ನು ಇದಿರಿಸಿ ಸಾಯುವುದಕ್ಕಿಂತಲೂ ಅವರ ಸೆರೆಯಾಳಾಗುವುದೇ ಒಳ್ಳೆಯದೆಂಬ ಭಾವ ನೆಯಿಂದ ಸಿಕ್ಕಿಬಿದ್ದನು ಈಗ ಅವನನ್ನೂ ಅವನ ಪರಿವಾರದವರನ್ನೂ ಉಜ್ಜಯಿನಿಗೆ ಕೊಂಡುಹೋಗುತ್ತಿದ್ದಾರೆ. ನಾನು ಆಗಲೇ ಕೆಲವು ಮಂದಿ ರಾವುತರನ್ನು ಕಳುಹಿ, ಈ ವರ್ತಮಾನವನ್ನು ವಿಜಯಸಿಂಹನಿಗೂ ತಿಳಿಯ ಪಡಿಸಿರುತ್ತೇನೆ. ಈಗ ನಾವು ಈ ಬೆಟ್ಟಗಳನ್ನು ದಾಟಿ ಅಡ್ಡ ದಾರಿಯನ್ನು ಹಿಡಿದು ಹೋದೆವಾದರೆ ಸಂಜೆಯೊಳಗಾಗಿ ಉಜ್ಜಯಿನೀ ಸೈನ್ಯವನ್ನು ಅಡ್ಡಗಿಸಬಲ್ಲೆವು. ನಮ್ಮ ಸೇನೆಯೂ ಮುಂದೆ ಹೋಗುತ್ತಿದೆ" ಹೀಗೆ ಬಿನ್ನಯಿಸಿದ ಸಿಂಹಭಟನ ಮಾತುಗಳನ್ನು ಕೇಳಿ, ಶೂದ್ರಕನು ಬೇಗನೆ ಆ ಸರೋವರದಲ್ಲಿ ಮಿಂದು ತನ್ನ ನಿತ್ಯ ಕೃತ್ಯಗಳನ್ನು ನೆರವೇರಿಸಿ, ವೀರ ವೇಷವನ್ನು ತಳೆದು ಸಿಂಹಭಟನೊಂದಿಗೆ ಕುವಲಯಾಮೋದವನ್ನೇರಿ ಹೊರಟನು. ಹಿಂದೆ ಬೆಂಬಲವಾಗಿ ಸ್ವಲ್ಪ ಸೈನ್ಯವೂ ಹೊರಟಿತು.

ಸಂಜೆಯಾಗುವುದರೊಳಗಾಗಿ ಅವರು ಸಿಂಹಭಟನು ಮೊದಲೇ ಕಳುಹಿದ್ದ ತಮ್ಮ ಗಜಸೇನೆಯನ್ನು ಕಲೆತರು ಶೂದ್ರಕನನ್ನು ನೋಡುತ್ತಲೇ ಸೈನಿಕರ ಹೃದಯವು ಉಕ್ಕಿತು ವಿಂಧ್ಯಕೇತುವನ್ನು ಸೆರೆಹಿಡಿದರೆಂಬ ಸುದ್ದಿಯನ್ನು ಕೇಳುತ್ತಲೇ ಪಾಳೆಯದವರೆಲ್ಲರು ಕಿರಾತವೇಷವನ್ನು ತಳೆದ ಶಿವನಂತೆ ಭೀಕರವಾದ ಬಿಲ್ಲು ಬಾಣಗಳನ್ನು ಧರಿಸಿ ಓಡುತ್ತ ಬಂದು ಶೂದ್ರಕನ ಸೇನೆಯನ್ನು ಸೇರಿಕೊಂಡರು. ಶೂದ್ರಕನು ಸಿಂಹಭಟನೊಂದಿಗೆ ಮಾತನಾಡುವ ಸಂದರ್ಭದಲ್ಲಿ, "ವಿಂಧ್ಯಕೇತುವು ಭಕ್ತಿಪರವಶನಾಗಿ ದೇವಿಯನ್ನು ಪೂಜಿಸುತ್ತಿದ್ದಾಗ ಹಗೆಗಳು ಮುತ್ತಿ ಅವನನ್ನು ಹಿಡಿದುಕೊಂಡರು. ಸಂಗಡ ಪರಿವಾರವು ಹೆಚ್ಚಾಗಿರಲಿಲ್ಲ ಹೀಗಾಗಿ ಉಜ್ಜಯಿನೀಭಟರಿಗೆ ವಿಂಧ್ಯಕೇತುವು ಸೆರೆಸಿಕ್ಕಿದನು. ಇಲ್ಲವಾದರೆ ಅವನು ಸೆರೆಯಾಳಾಗುವುದೆಂದರೇನು ? ಉಜ್ಜಯಿನೀಸೈನಿಕರು ಸಂಜೆಯ ಹೊತ್ತಿಗೆ ಇಲ್ಲಿಗೆ ಎರಡು ಹರಿದಾರಿಯ ದೂರದಲ್ಲಿರುವ ಸತ್ರದಲ್ಲಿ ಈ ರಾತ್ರಿ ಬಿಡಾರ ಮಾಡಿ, ಬೆಳಗಾಗುತಲೇ ಮುಂದೆ ಹೊರಡುವುದಾಗಿ ವರ್ತಮಾನವನ್ನು ಕೇಳಿದೆನು ಅದರಿಂದ ಹೇಗಾದರೂ ವಿಂಧ್ಯಕೇತುವನ್ನು ಅವರು ಪಟ್ಟಣಕ್ಕೆ ಕರೆದುಯ್ಯುವ ಮೊದಲೇ ನಾವು ಬಿಡಿಸಬೇಕು" ಎಂಬುದಾಗಿ ಸಿಂಹಭಟನು ವಿಜ್ಞಾಪಿಸಿದನು.

ಶೂದ್ರಕನು ಇವೆಲ್ಲವನ್ನು ಕಿವಿಗೊಟ್ಟು ಕೇಳಿ, ತನ್ನ ಸೈನಿಕರಿಗೆ ಧೈರ್ಯ ಹೇಳುತ್ತ ನಡೆತಂದು ಸಂಧ್ಯಾಸಮಯದಲ್ಲಿ ಆ ಸತ್ರಕ್ಕೆ ಸ್ವಲ್ಪ ದೂರದಲ್ಲಿ ನಿಂತು, ಹಗೆಗಳ ಚಳವಳವನ್ನು ತಿಳಿದು ಬರುವ ಸಲುವಾಗಿ ಚಾರರನ್ನು ಕಳುಹಿ, ತನ್ನ ಗಜಸೇನೆಯನ್ನೂ ಕುದುರೆಪಡೆಯನ್ನೂ ಕಾಲ್ಬಲವನ್ನೂ ಎರಡು ತಂಡವಾಗಿ ವಿಭಾಗ ಮಾಡಿ, ಸಿದ್ಧನಾಗಿರುವಷ್ಟರಲ್ಲಿ ಆ ಚಾರರು ಹಿಂದುರುಗಿ ಬಂದು, "ದೇವಾ ! ಉಜ್ಜಯಿನಿಯ ಸೈನ್ಯದಲ್ಲಿ ಹೆಚ್ಚು ಭಾಗವು ನಗರಕ್ಕೆ ಹೋಗಿದೆ ವಿಂಧ್ಯಕೇತುವನ್ನು ಸೆರೆಯಲ್ಲಿಟ್ಟು ಕೆಲವು ಸೈನಿಕರು ಮಾತ್ರವೇ ಇಲ್ಲಿ ಕಾವಲಿರುವರು" ಎಂಬುದಾಗಿ ಬಿನ್ನಯಿಸಿದರು. ಶೂದ್ರಕನು ಇದನ್ನು ಕೇಳಿ ಸಂತಸಗೊಂಡವನಾಗಿ ತನ್ನ ಇತ್ತಂಡದ ಸೈನ್ಯವನ್ನೂ ಎರಡು ದಾರಿಗಳಲ್ಲಿ ಕಳುಹಿ ಆ ಸತ್ರವನ್ನೂ ಅದರ ಸುತ್ತುಮುತ್ತಣ ಪಾಳೆಯವನ್ನೂ ಮುತ್ತುವಂತೆ ಆಣತಿಯಿತ್ತು, ತಾನು ಮಾತ್ರ ಆ ಕುವಲಯಾಮೋದದ ಮೇಲೆ ಸಿಂಹಭಟನೊಂದಿಗೆ

ಕುಳಿತು ಸ್ವಲ್ಪ ಕಾಲ ಅಲ್ಲಿಯೇ ವಿಶ್ರಮಿಸಿಕೊಂಡಿದ್ದು, ಕತ್ತಲಾಗುವ ಹೊತ್ತಿಗೆ ಸರಿಯಾಗಿ ಆ ಪಾಳೆಯದ ಮುಂದೆ ಬಂದುನಿಂತನು. ಕೂಡಲೇ ಯುದ್ಧಕ್ಕೆ ಮೊದಲಾಯಿತು. ಅವಂತಿಯ ಭಟರೂ ಬಹಳ ಹೊತ್ತಿನ ವರೆಗೆ ತಕ್ಕ ರೀತಿಯಲ್ಲಿ ಹೋರಾಡಿದರು. ಆದರೆ ಶಬರಸೇನೆಯ ಮುಂದೆ ನಿಲ್ಲಲಾರದೆ ಅಶ್ವಕಬಲವನ್ನೂ ಗಜಸೇನೆಯನ್ನೂ ಕಂಡು ಮತ್ತಷ್ಟು ಎದೆ ಗುಂದಿ, ಓಡಿಹೋಗುವುದಕ್ಕೆ ದಾರಿಯಿಲ್ಲದ ಕಾರಣ ಶೂದ್ರಕನನ್ನು ಮರೆ ಹೊಕ್ಕರು. ಇಷ್ಟರಲ್ಲಿ ಕಿರಾತನ ಪಡೆಯವರು ತಮ್ಮ ಪ್ರಭುವನ್ನು ಸೆರೆ ಯಿಟ್ಟಿದ್ದ ಕೋಣೆಯ ಬಳಿಸಾರ್ದು ಅಲ್ಲಿದ್ದ ಕಾವಲುಗಾರರನ್ನು ತರಿದು ಬಿಸುಟು ತಮ್ಮ ದಣಿಯ ಬಂಧನವನ್ನು ಮುರಿದು, ಆತನನ್ನು ಕರೆತಂದು ಶೂದ್ರಕನಿಗೆ ಕಾಣಿಸಿದರು ಶೂದ್ರಕನು ಒಡನೆಯೇ ಆನೆಯಿಂದಿಳಿದು ತನ್ನ ಪ್ರಿಯ ಮಿತ್ರನನ್ನು ಬಿಗಿಯಾಗಿ ಅಪ್ಪಿಕೊಂಡು, "ಮಿತ್ರಪುಂಗವಾ! ನನ್ನಿಂದಲ್ಲವೇ ನಿನಗೆ ಈ ದುರ್ದಶೆಯು ಪ್ರಾಪ್ತವಾಯಿತು" ಎನ್ನುತ್ತಿರು ವಲ್ಲಿ ವಿಂಧ್ಯಕೇತುವು ಬೆಚ್ಚಿಬಿದ್ದು ಕ್ಷಣಕಾಲದ ವರೆಗೆ ದಿಕ್ಕು ತೋರದವ ನಂತೆ ನಿಶ್ಚಲನಾಗಿ ನಿಂತಿದ್ದು, ಬಳಿಕ ಒಮ್ಮೆ ನಿಟ್ಟುಸಿರು ಬಿಟ್ಟು, ಪ್ರಳಯ ಕಾಲದ ಭೈರವ ಮೂರ್ತಿಯಂತೆ ರೌದ್ರಾವೇಶಭರಿತನಾಗಿ ಕಣ್ಣುಗಳಿಂದ ಕಿಡಿಗಳನ್ನು ಉಗುಳುತ್ತ "ದೇವಾ! ಪರಮೇಶ್ವರನು ತ್ರಿಪುರಾಸುರ ಧ್ವಂಸವನ್ನು ಮಾಡಿದನೆಂಬುದಾಗಿ ಪುರಾಣಗಳಲ್ಲಿ ಕೇಳಿರುವೆನು. ಅದು ದಿಟವೋ ಸುಳ್ಳೋ? ಆ ಮಾತು ಹಾಗಿರಲಿ. ಅವಂತೀನಗರಿಯನ್ನು ಸುಟ್ಟು ಬೂದಿಮಾಡಿ ರಾಜದಂಪತಿಗಳನ್ನು ಸೆರೆಹಿಡಿತಂದು ವಿಂಧ್ಯವಾಸಿನಿಗೆ ಬಲಿ ಕೊಡದಿದ್ದರೆ ನಾನು ಬೇಡನೇ ಅಲ್ಲ" ಎಂಬುದಾಗಿ ಘೋರವಾಗಿ ಪ್ರತಿಜ್ಞೆಮಾಡಿದನು.

ಆ ಮಾತಿಗೆ ಶೂದ್ರಕನು "ಗೆಳೆಯಾ! ಸಮಾಧಾನವನ್ನು ತಂದು ಕೊಳ್ಳು. ಅವಂತೀರಾಜನು ಸೋದರೀವಿರಹದಿಂದ ಈಗ ಭ್ರಾಂತಿಗೊಂಡಿರು ವನು. ಏನು ಮಾಡುವುದಕ್ಕೂ ತೋರದೆ ನನ್ನ ಮೇಲಣ ವೈರವನ್ನು ತೀರಿಸಿಕೊಳ್ಳುವುದಕ್ಕೆ ಬದಲಾಗಿ ನನ್ನ ಗೆಳೆಯರನ್ನು ಪೀಡಿಸತೊಡಗಿರು ವನು. ಮೊದಲು ನಿನ್ನನ್ನು ಸೆರೆಹಿಡಿದು, ಬಳಿಕ ಮಾಹಿಷ್ಮತೀಶ್ವರನನ್ನು ಸೋಲಿಸಿ ಆ ಮೇಲೆ ಸಹಾಯಹೀನನಾದ ನನ್ನನ್ನು ಹಿಡಿದು ಶಿಕ್ಷಿಸ ಬೇಕೆಂಬುದು ಆತನ ಅಭಿಪ್ರಾಯವಾಗಿರಬಹುದು ಆದರೆ ಇದು, ಕಾಡಿ ನಲ್ಲಿರುವ ಮರಗಳನ್ನೆಲ್ಲ ಕತ್ತರಿಸಿ, ಬಳಿಕ ಸಿಂಹವನ್ನು ಬಲೆಯೊಡ್ಡಿ ಹಿಡಿಯ

ಬೇಕೆಂಬುವ ಉದ್ದೇಶವೇ ಸರಿ” ಎಂದು ಹೇಳಿ, ಮರೆಹೊಕ್ಕ ಉಜ್ಜಯಿನೀ ಸೈನಿಕರ ಆಯುಧಗಳನ್ನೆಲ್ಲ ಕಸುಗೊಂಡು, ಯಾವ ರೀತಿಯಿಂದಲೂ ಹಿಂಸಿಸದೆ ಕಳುಹಿಬಿಡುವಂತೆ ಸಿಂಹಭಟನಿಗೆ ಆಣತಿಯಿತ್ತು, ಪಾಳೆಯು ದವರಿಗೆ ಯಾವ ಹೆದರಿಕೆಗೂ ಅವಕಾಶವಿಲ್ಲವೆಂದು ಅಭಯವಿತ್ತು ತನ್ನ ಮಿತ್ರಪರಿವಾರದೊಂದಿಗೆ ಆ ರಾತ್ರಿ ಅಲ್ಲಿಯೇ ಸುಖವಾಗಿದ್ದನು ಭೋಜನಾನಂತರ ಆ ಸತ್ರದ ಮೇಲ್ಮಹಡಿಯ ಮೇಲೆ ಶೂದ್ರಕನ ಸೆಜ್ಜೆಯು ಸಿದ್ಧವಾಯಿತು ಸಿಂಹಭಟನೊಂದಿಗೆ ಮೇಲ್ಮಹಡಿಯನ್ನೇರಿ ಹಾಸುಗೆಯ ಮೇಲೆ ಕುಳಿತು ಅಂದಿನ ಮಾರ್ಗಾಯಾಸವನ್ನು ಪರಿಹರಿಸಿಕೊಳ್ಳುವ ಸಲುವಾಗಿ ಬೇಗನೆ ಮಲಗಿಕೊಂಡನು ಇಷ್ಟರಲ್ಲಿ ವಿನಯವತಿಯ ನೆನಪು ಬಂದು ಕಣ್ಣಿಗೆ ನಿದ್ದೆ ಹತ್ತಲಿಲ್ಲ. ತನ್ನಿಂದ ಅಭಯವನ್ನು ಪಡೆದು ಓಡಿ ಹೋದ ಅವಂತೀಭಟರು ತಮಗೆ ಮುಂದೆ ಹೋಗಿದ್ದ ಸೇನೆಯೊಂದಿಗೆ ಮರಳಿ ಯುದ್ಧಕ್ಕೆ ಹಿಂದಿರುಗುವರೋ ಎಂಬ ಶಂಕೆಯೂ ತಲೆದೋರಿತು ಇಷ್ಟರಲ್ಲಿ ವಿಂಧ್ಯಕೇತುವು ತನ್ನ ಮಡದಿಯೊಂದಿಗೆ ಅಲ್ಲಿಗೆ ಬಂದು ಶೂದ್ರಕ ನಿಗೆ ವಂದಿಸಿ ಅವನ ಸತ್ಕಾರವನ್ನು ಮನ್ನಿಸಿ ಇದಿರಾಗಿ ಕುಳಿತನು ವಿಂಧ್ಯಾವಳಿಯು ಸ್ವಲ್ಪ ದೂರದಲ್ಲಿ ನಿಂತಿದ್ದಳು ಆಗ ಆ ನಾಲ್ವರೂ ಈ ರೀತಿ ಮಾತನಾಡತೊಡಗಿದರು.—

ವಿಂಧ್ಯಕೇತು—“ ಮಿತ್ರನೇ! ಅವರು ನನ್ನನ್ನು ಕರೆದುಯ್ದು ನಾಳೆ ಬೆಳಗಾಗುವಷ್ಟರಲ್ಲಿ ಅವಂತಿಯಲ್ಲಿ ಮಹಾಕಾಳಿಗೆ ಬಲಿಕೊಡಬೇಕೆಂಬುದಾಗಿ ಮಾತನಾಡಿಕೊಳ್ಳುತ್ತಿದ್ದರು. ತಕ್ಕ ಸಮಯದಲ್ಲಿ ನೀನು ಪರಿವಾರದೊಂದಿಗೆ ಬಂದು ನನ್ನ ಬಂಧನವನ್ನು ಬಿಡಿಸಿದೆ ನೀನು ಬಾರದಿದ್ದರೆ ಅದೇ ಗತಿ ಆಗುತ್ತಿದ್ದಿತೋ ಏನೋ! ”

ಶೂದ್ರ—“ ಉಜ್ಜಯಿನೀ ಸೇನಾಪತಿಯು ಇಲ್ಲಿ ಸ್ವಲ್ಪ ಸೈನ್ಯವನ್ನು ಮಾತ್ರವೇ ಇರಿಸಿ, ಮಿಕ್ಕ ಸೈನ್ಯವನ್ನೆಲ್ಲ ಇಷ್ಟು ಬೇಗನೆ ಕರೆಯಿಸಿಕೊಳ್ಳಲು ಕಾರಣವೇನೆಂಬುದನ್ನು ಬಲ್ಲೆಯಾ? ”

ವಿಂಧ್ಯಕೇತು—“ ಅವರು ರಹಸ್ಯವಾಗಿ ಮಾತನಾಡಿಕೊಳ್ಳುತ್ತಿದ್ದಾಗ ಕೇಳಿದೆನು ಮಾಹಿಷ್ಮತಿಯನ್ನು ಮುತ್ತುವ ಸಲುವಾಗಿ ಕಳುಹಿದ್ದ ಸೇನೆಯು ಸೋತು ಹಿಂದಿರುಗಿತಂತೆ! ಇಷ್ಟರಲ್ಲಿ ಮಗಧ ರಾಜನೂ ಶೂರ ಸೇನಾಧಿಪತಿಯೂ ಇಬ್ಬರೂ ಕಲೆತು ಉಜ್ಜಯಿನಿಯನ್ನು ಮುತ್ತುವರೆಂಬ

ಸುದ್ದಿಯು ತಿಳಿದು ಬಂದು ಬೇಗನೆ ಸೇನೆಯನ್ನು ಕರೆಯಿಸಿಕೊಂಡರಂತೆ. ಆದರೆ ಇದರಲ್ಲಿ ಎಷ್ಟು ನಿಜವೋ ನಾನರಿಯೆನು."

ವಿಂಧ್ಯಾವಳಿ—"ಭೂಸುರೋತ್ತಮಾ! ಉಜ್ಜಯಿನೀಭಟರ ದುರುದುಂಬಿತನವನ್ನು ಹೇಳತೀರದು ನನ್ನ ಪತಿ ಸನ್ನಿಧಾನದಲ್ಲಿಲ್ಲದಿದ್ದರೆ ಇಂದಿಗೆ ನನ್ನ ಗತಿಯೇನಾಗುತ್ತಿದ್ದಿತೋ!"

ಶೂದ್ರ—"ನೀನು ಪತಿವ್ರತೆ! ನಿನಗೆ ಯಾವಾಗಲೂ ಭಂಗಬರಲಾರದು."

ವಿಂಧ್ಯಾ—"ಆದರೆ ಈಗ ರಾಜಪುತ್ರಿಯನ್ನು ಅಲ್ಲಿ ಒಂಟಿಯಾಗಿ ಬಿಟ್ಟು ಬಂದಿರುವಿರಾ? ಆಕೆಯು ಎಷ್ಟು ಪರಿತಪಿಸುವಳೋ!"

ಶೂದ್ರ—"ರಾಜಪುತ್ರಿಯು ರಾಜಧರ್ಮಗಳನ್ನು ಬಲ್ಲವಳಷ್ಟೆ!"

ವಿಂಧ್ಯಾ—"ಪುರುಷರಿಗೆ ಯಾವಾಗಲೂ ಸ್ವಕಾರ್ಯಸಾಧನೆಯಲ್ಲಿ ತಾತ್ಪರ್ಯವೇ ಹೊರತು ಕುಸುಮಸುಕುಮಾರವನಿಸಿದ ಯುವತಿಯರ ಮನೋಧರ್ಮಗಳು ಅವರಿಗೆ ತಿಳಿಯುವುದಾದರೂ ಹೇಗೆ?"

ಶೂದ್ರ—"ದೇವೀ! ಇದೇನು ಒಳ್ಳೆಯ ಮಾತಿನಲ್ಲಿಯೇ"—ಎನ್ನುವಷ್ಟರಲ್ಲಿಯೇ ಹಗಲೆಲ್ಲ ದಣಿದು ನಿದ್ರಿಸುತ್ತಿದ್ದ ಮಾವುತನೊಬ್ಬನು "ಎಲ್ಲವೂ ದೈವ ಘಟನೆ! ಅದನ್ನು ಮೀರಬಲ್ಲವರಾರು? ಇಂದಿಗೆ ಜಯವು ಇಷ್ಟು ಬೇಗನೆ ಹೀಗೆ ಕೈಗೂಡುವುದೆಂದು ನಾನು ಕನಸಿನಲ್ಲಿಯೂ ಭಾವಿಸಿರಲಿಲ್ಲ" ಎಂಬುದಾಗಿ ಕನವರಿಸಿಕೊಳ್ಳುತ್ತಿದ್ದನು. ಮತ್ತೊಂದು ಕಡೆ ಜಗುಲಿಯ ಮೂಲೆಯಲ್ಲಿ ಮಲಗಿದ್ದ ಇನ್ನೊಬ್ಬ ಭಟನು "ದೈವವನ್ನೇ ನಂಬಿದರಾಗದು ಪುರುಷಕಾರವೂ ಅದಕ್ಕೆ ಅನುಕೂಲಿಸಿತೆಂದರೆ ಎಲ್ಲರು ಧನ್ಯರೇ ಸರಿ ಈ ಹೊತ್ತು ನಮ್ಮ ಪ್ರಭುವು, ಆ ಮಹರಾಯರು ಸಮಯಕ್ಕೆ ಸರಿಯಾಗಿ ಬಂದು ನಮ್ಮಲ್ಲಿ ಕಲೆತು ಮಾಡಿದ ಉಪಾಯಗಳಿಂದ ಜಯವಾಯಿತಲ್ಲದೆ ನಾವೇನು ಮಾಡಬಲ್ಲೆವು? ಈಗ ಆತನ ಅಂಕೆಗೆ ಅಡ್ಡಿಯೇ ಇಲ್ಲ. ಮುಂದೆ ನಾಳೆ ಏನಾಗುವುದೋ ಬಲ್ಲವರಾರು?" ಎಂಬುದಾಗಿ ಕನವರಿಸಿಕೊಳ್ಳುತ್ತಿದ್ದನು ಹೀಗೆ ಶೂದ್ರಕನು ವಿಂಧ್ಯಕೇತುವಿಗೆ ದೈವ ಪುರುಷಕಾರಗಳ ಮಹತ್ವವನ್ನು ನಿದರ್ಶಿಸುತ್ತಿರುವಲ್ಲಿ ಅಂತರಿಕ್ಷದಿಂದ ಒಂದು ಅರಗಿಳಿಯು ಧಟ್ಟನೆ ಅಲ್ಲಿಗೆ ಇಳಿದು ಶೂದ್ರಕನ ತೊಡೆಯ ಮೇಲೆ ಸೊಕ್ಕಿ ಬಿದ್ದಿತು ಅದರ ಕೊರಳಿಗೆ ಕಟ್ಟಿದ್ದ ಲೇಖವನ್ನು ಬಿಚ್ಚಿ ಶೂದ್ರಕನು ಓದತೊಡಗಿದನು. ಶಬರ ರಾಜದಂಪತಿಗಳು ಅಚ್ಚರಿಗೊಂಡು ಎವೆ ಇಕ್ಕದೆ ನೋಡುತ್ತಿದ್ದರು.

ಲೇಖವನ್ನು ಓದುತ್ತಿದ್ದಂತೆಯೇ ಶೂದ್ರಕನು ಮೂರ್ಛೆ ಹೊಂದಿದನು. ಶಬರ ರಾಜನು ಲೇಖದಲ್ಲಿ ಮರ್ಮವೇಧಕವಾದ ಯಾವುದೋ ಬರೆಹವಿರುವು ದೆಂದು ತಿಳಿದು ಶೀತಲೋಪಚಾರಗಳನ್ನು ಮಾಡತೊಡಗಿದನು. ಕೆಲವು ನಿಮಿಷಗಳಲ್ಲಿಯೇ ಶೂದ್ರಕನು ಎಚ್ಚರಗೊಂಡು ಆ ಲೇಖವನ್ನು ವಿಂಧ್ಯ ಕೇತುವಿನ ಕಯ್ಯಲ್ಲಿಟ್ಟು ಓದಹೇಳಿದನು ವಿಂಧ್ಯಕೇತುವು ಆ ಪತ್ರಿಕೆ ಯನ್ನು ಓದತೊಡಗಿದನು: ಆ ಪತ್ರಿಕೆಯಲ್ಲಿ ಹೀಗಿದ್ದಿತು.—

"ಕತ್ತಲೆಯಲ್ಲಿ ಗೂಗೆಗಳ ಹಿಂಡು ತಂಡೋಪತಂಡವಾಗಿ ಬಂದು ಹಕ್ಕಿಗಳ ಗೂಡುಗಳನ್ನು ಬೇಟೆಯಾಡುವಂತೆ ಸಂಘಿಲಕನು ದೊಡ್ಡ ಸೇನೆಯೊಂದಿಗೆ ಹರಗಣನ ಮನೆಯನ್ನು ಮುತ್ತಿದ್ದಾನೆ ಹರಿಮತಿಯೊಂ ದಿಗೆ ಅವರ ಮನೆಯನ್ನೇ ಸುಟ್ಟುಬಿಡುತ್ತಿರುವನು. ಅಯ್ಯೋ! ನೀನು ಹೇಗಾದರೂ ಪಾಡು ಪಟ್ಟು ಕೂಡಲೇ ಬಾರದಿದ್ದರೆ ಸ್ತ್ರೀಹತ್ಯೆ, ಬ್ರಹ್ಮ ಹತ್ಯೆ, ಮಿತ್ರ ದ್ರೋಹಗಳೆಲ್ಲವೂ ಒಮ್ಮೆಯೇ ನಿನ್ನನ್ನು ಆವರಿಸಿಕೊಳ್ಳದಿರವು. ನಾನೇ ಹರಿಮತಿಯು, ಹರಿಮತಿಯೇ ನಾನು. ನನ್ನ ಸಲುವಾಗಿ ಆ ದಂಪತಿಗಳು ವಿಪತ್ತಿಗೆ ಗುರಿಯಾದರಲ್ಲವೇ? ಇದನ್ನು ಕಣ್ಣಾರೆ ನೋಡುತ್ತ ಹೇಗೆ ಬದುಕಿರಲಿ!"

ಇದನ್ನು ಕೇಳುತ್ತಲೇ ವಿಂಧ್ಯಾವಳಿಯು ನಡುಗಿದಳು ಆಗ ಶಬರ ನಾಥನು "ಆಹಾ! ಎಂತಹ ದೈವದುರ್ವಿಲಾಸವಿದು? ಶ್ರೀಮತಿಯು ಸುಖ ವಾಗಿರಬಲ್ಲಳೇ? ಮಿತ್ರಾ! ಇನ್ನು ತಡವೇಕೆ? ಈಗಲಾದರೂ ಪ್ರತಿ ಕ್ರಿಯೆಗೆ ಇನ್ನೂ ಅವಕಾಶವಿರುವುದೆಂದು ಭಾವಿಸುವೆನು ಬೇಗನೆ ಹೊರಡು" ಎಂದನು. ಆಗ ಶೂದ್ರಕನು "ಆಹಾ! ಬೌದ್ಧಾಪಶದನ ಕ್ರೂರತನವು ಇಷ್ಟರ ಮಟ್ಟಿಗೆ ಪರಿಣಮಿಸುವುದೇ! ಇರಲಿ. ಇವನು ಎಷ್ಟು ಕುಣಿದು ಹಾರಾಡಿ ದರೂ ದೈವವೊಂದಿರುವುದಲ್ಲವೇ?" ಎನ್ನುವಷ್ಟರಲ್ಲಿ ಆ ಗಿಳಿಯು ಚೇತರಿಸಿ ಕೊಂಡಿತು ಅದು ಅಷ್ಟು ರಾತ್ರಿಯಲ್ಲಿ ಅಲ್ಲಿಗೆ ಹೇಗೆ ಬಂದಿತೆಂಬುದಾಗಿ ವಿಂಧ್ಯಾವಳಿಯು ಪ್ರಶ್ನೆಮಾಡಲಾಗಿ, ಶೂದ್ರಕನು ಸಿಂಹಭಟನನ್ನು ಕರೆದು ಬೇಗನೆ ಎರಡು ಆನೆಗಳನ್ನು ಪ್ರಯಾಣಕ್ಕೆ ಸಿದ್ಧಪಡಿಸುವಂತೆ ಹೇಳಿ ವಿಂಧ್ಯಾ ವಳಿಗೆ ಆ ಗಿಣಿಯ ಗುಣಾತಿಶಯವನ್ನು ಬಣ್ಣಿಸುವಷ್ಟರಲ್ಲಿ, ಸಿಂಹಭಟನು ಪ್ರಯಾಣಸನ್ನದ್ಧನಾಗಿ ಬಂದು ನಿಂತನು. ವಿಂಧ್ಯಾವಳಿಯು ಆ ಗಿಣಿಯ ಮಹಿಮೆಯನ್ನು ಕೇಳಿ ಅಚ್ಚರಗೊಂಡು, "ದೇವಾ! ಬೇಗನೆ ಹೊರಡಬೇಕು.

ಶ್ರೀಮತಿಯನ್ನೂ ಆ ಭೂಸುರ ದಂಪತಿಗಳನ್ನೂ ನಾನು ಬಹಳವಾಗಿ ಕೇಳಿದೆನೆಂದು ವಿಜ್ಞಾಪಿಸಬೇಕು" ಎನ್ನುತ್ತ ಕಂಬನಿ ಸುರಿಸಿದಳು. ಶೂದ್ರಕನು ವೀರವೇಷವನ್ನು ತಳೆದು ಖಡ್ಗಪಾಣಿಯಾಗಿ ನಿಂತು, ವಿಂಧ್ಯಕೇತುವನ್ನು ಕುರಿತು "ಮಿತ್ರವರ್ಯಾ! ನೀನಿನ್ನು ಸೇನೆಯೊಂದಿಗೆ ನಿನ್ನ ಬಿಡಾರಕ್ಕೆ ನಡೆ. ದೈವಾನುಕೂಲ್ಯವಿದ್ದಲ್ಲಿ ಮರಳಿ ಕಲೆತು ಸಾವಕಾಶವಾಗಿ ವಿನೋದಗೋಷ್ಠಿಯನ್ನು ನಡೆಯಿಸುವ" ಎನಲು, ಆಗಳಾ ಶಬರನಾಥನು, "ದೇವಾ! ನಾನೀಗ ಇಲ್ಲಿಂದ ಹೀಗೆಯೇ ಉಜ್ಜಯಿನಿಯನ್ನು ಮುತ್ತಿ ಆ ರಾಜದಂಪತಿಗಳನ್ನು ನಮ್ಮ ಕುಲದೇವತೆಗೆ ಬಲಿಗೊಟ್ಟಲ್ಲದೆ ಹೇಗೆ ಮನೆಗೆ ಹೋಗಬಲ್ಲೆನು ನನ್ನ ಪೂಜೆಗೆ ಅವನು ವಿಘ್ನವನ್ನುಂಟುಮಾಡಿದನು. ಅದರಿಂದ ನಮ್ಮ ದೇವತೆಯು ಆಗ್ರಹಗೊಳ್ಳದಿರಳು ನಾನು ಆದಿನ ಪೂಜೆಗೆ ಅಣಿಮಾಡಿದ್ದ ನೈವೇದ್ಯವು ಆಕೆಗೆ ಸಾಕಾಗಲಿಲ್ಲವೆಂದು ತೋರುತ್ತದೆ. ಅದರಿಂದಲೇ ನನ್ನ ಪೂಜೆಗೆ ವಿಘ್ನವಾಯಿತು. ಆ ದೇವಿಗೆ ತಕ್ಕ ನೈವೇಧ್ಯವನ್ನು ಸಮರ್ಪಿಸಿದಲ್ಲದೆ ನಾನು ನನ್ನ ಪಾಳೆಯವನ್ನು ಹೊಕ್ಕೆನೆಂದರೆ ಆಕೆಯು ನನ್ನನ್ನು ಜೀವದೊಂದಿಗೆ ಸುಮ್ಮನೆ ಬಿಡುವಳೇ! ಇರಲಿ ಈಗ ಬೇಗ ಹೊರಡುವ! ಪ್ರತಿಜ್ಞಾಪಾಲನಾನಂತರ ಮರಳಿ ಸಂದರ್ಶಿಸುವೆನು" ಎಂದನು. ಆಗ ಶೂದ್ರಕ ಸಿಂಹಭಟರು ಆನೆಗಳನ್ನೇರಿ ಕುಳಿತರು. ಲೆಕ್ಕವಿಲ್ಲದ ಸೇನೆಯು ಅವರನ್ನು ಹಿಂಬಾಲಿಸಿತು. ಅವರೆಲ್ಲರೂ ರಾಜಮಾರ್ಗವನ್ನು ಬಿಟ್ಟು ಅಡ್ಡಹಾದಿಯಿಂದ ವೇಗವಾಗಿ ಹೋಗುತ್ತಿದ್ದರು.

ಇತ್ತ ಸಂಜೆಯ ಹೊತ್ತಿನಲ್ಲಿ ವಿನಯವತಿಯೂ ಹರಿಮತಿಯೂ ಸರಸಸಲ್ಲಾಪಗಳಲ್ಲಿ ಮಗ್ನರಾಗಿದ್ದಾಗ, ಹರಗಣನು ಸಂಧ್ಯಾನುಷ್ಠಾನಕ್ಕಾಗಿ ನದಿಗೆ ಹೋಗಿದ್ದವನು ಮನೆಗೆ ಹಿಂದಿರುಗುವಷ್ಟರಲ್ಲಿ ತಲೆ ಬಾಗಿಲ ಬಳಿ ಇಬ್ಬರು ರಾವುತರು ಇವನನ್ನು ಒಳಕ್ಕೆ ಬಿಡದೆ ಅಡ್ಡಯಿಸಿದರು. ಅಷ್ಟರಲ್ಲಿ ಒಬ್ಬ ಬೌದ್ಧನು ಅವನ ಬಳಿಗೆ ಬಂದು "ಎಲೋ ಹಾರುವ! ನಿನ್ನ ಮನೆಯಲ್ಲಿ ರಾಜಪುತ್ರಿಯಿರುವಳಂತೆ ಕದ್ದು ತಂದ ಸೊತ್ತನ್ನು ಮನೆಯಲ್ಲಿಟ್ಟುಕೊಳ್ಳುವುದು ನಿನಗೆ ಯಾವ ಧರ್ಮವಯ್ಯಾ? ಇದು ಘೋರವಾದ ರಾಜದ್ರೋಹವೆಂಬುದು ನಿಮ್ಮ ಧರ್ಮಶಾಸ್ತ್ರಗಳಲ್ಲಿ ಬರೆದಿಲ್ಲವೋ? ಮರುಮಾತನಾಡದೆ ಆ ಕುಲಗೇಡಿಯನ್ನು ನಮಗೆ ಒಪ್ಪಿಸಿದರಾಯಿತು. ಇಲ್ಲವೆಂದರೆ ನಿನಗೆ ಈಗಲೇ ಆಯುಷ್ಯವು ಮುಗಿದಂತೆಯೇ ಸರಿ. ಏನು

ಹೇಳುವೆ? ನೀನು ಹಾರುವಯ್ಯನಾದುದರಿಂದ ನಿನಗೆ ಇಷ್ಟು ಅವಕಾಶ ಕೊಟ್ಟಿದ್ದೇನೆ. ಇನ್ನೊಬ್ಬನಾಗಿದ್ದರೆ ಇಷ್ಟು ಹೊತ್ತಿಗೆ ಏನಾಗಿ ಬಿಡುತ್ತಿದ್ದಿತೋ! ಧರ್ಮದ ಮೇಲೆ ದೃಷ್ಟಿಯಿಡು ಬೇಗ ಹೇಳು" ಎಂಬುದಾಗಿ ಗದರಿಸಿದನು.

ಹರಗಣ—"ನೀನು ಯಾರು? ನಿನ್ನ ಅಧಿಕಾರವೇನು?"

ಬೌದ್ಧ—"ನಾನು ಉಜ್ಜಯಿನಿಯ ಎರಡನೆಯ ಸೇನಾಪತಿ. ನನ್ನ ಹೆಸರು ಸಂಘಿಲಕ. ನಾವು ಬೌದ್ಧರು, ಎಂದಿಗೂ ಧರ್ಮವನ್ನು ಮೀರತಕ್ಕವರಲ್ಲ. ಧರ್ಮಕ್ಕೆ ತಪ್ಪಿನಡೆದವರನ್ನು ಸುಮ್ಮನೆ ಬಿಡತಕ್ಕವರೂ ಅಲ್ಲ. ನಿನ್ನಲ್ಲಿರುವವಳನ್ನು ಅವನು ಕದ್ದುತಂದನೆಂಬ ಸಂಗತಿಯನ್ನು ನೀನು ಅರಿಯೆ. ಅದಕ್ಕಾಗಿಯೇ ನಿನ್ನ ವಿಷಯವಾಗಿ ಇಷ್ಟು ಕರುಣೆಯನ್ನು ತೋರಿಸುವೆನು"

ಹರಗಣ—"ಕದ್ದು ತಂದು ಯಾರೊಬ್ಬರೂ ನನ್ನ ಮನೆಯಲ್ಲಿ ಏನನ್ನೂ ಇರಿಸಲಿಲ್ಲ. ನಾನಾದರೊ ಯಾವ ರಾಜದ್ರೋಹವನ್ನೂ ಮಾಡಲಿಲ್ಲ"

ಬೌದ್ಧ—"ಎಲೋ ಹಾರುವ! ಆ ಕುಲಗೇಡಿಯಾದ ರಾಜಪುತ್ರಿಯು ನಿನ್ನ ಮನೆಯಲ್ಲಿಲ್ಲವೇನೊ? ಅದು ಕಳ್ಳ ಸೊತ್ತಲ್ಲವ್ರೋ? ಎಲ್ಲಿ ಬಚ್ಚಿಟ್ಟಿರುವೆ? ಬೇಗನೆ ತೋರು ಇಲ್ಲವಾದರೆ—"

ಹರಗಣ—"ಶೂರನು ತನ್ನ ಪರಾಕ್ರಮವನ್ನು ತೋರಿ ತಂದುದು ಎಂದಿಗಾದರೂ ಕಳ್ಳ ಸೊತ್ತಾಗಬಲ್ಲುದೇ?"

ಬೌದ್ಧ—"ಓಹೋ! ನೀನು ಮಾತಿಗೆ ಸಿಕ್ಕುವವನಲ್ಲ ನಿನಗೆ ಪ್ರಾಯಶ್ಚಿತ್ತವಾಗ ಬೇಕೆಂದು ತೋರುತ್ತದೆ."

ಹೀಗೆಂದು ಹೇಳಿ ಭಟರನ್ನು ಕರೆದು ಹರಗಣನನ್ನು ಮನೆಯ ಮುಂದೆ ಒಂದು ಮರಕ್ಕೆ ಬಿಗಿದು ಸುತ್ತಲೂ ಕಾವಲಿರಿಸಿದನು ಗ್ರಾಮಸ್ಥರೆಲ್ಲರೂ ಅಲ್ಲಿ ಗುಂಪು ಸೇರಿದರು. ಯಾರೊಬ್ಬರೂ ಮುಂದೆ ಬಂದು ನಿಂತು ಧೈರ್ಯವಾಗಿ ಅವನ ಸಂಗಡ ಹೋರಾಡಲು ಸಾಹಸ ಮಾಡಲಿಲ್ಲ ಆಗ ಸಂಘಿಲಕನು ಮರಳಿ ಹರಗಣನ ಬಳಿಗೆ ಬಂದು 'ಅಯ್ಯಾ' ನೀನು ದೊಡ್ಡ ವಿದ್ಯಾವಂತನಂತೆ ಕಾಣುತ್ತೀಯೆ. ಅನ್ಯಾಯವಾಗಿ ರಾಜದಂಡನೆಗೆ ಗುರಿಯಾಗ ಬೇಡ. ರಾಜಪುತ್ರಿಯು ನಿನ್ನ ಮನೆ

ಯಲ್ಲಿಲ್ಲವೇ? ಅದು ಯಾರ ಸೊತ್ತು? ಸೊತ್ತಿನವರು ಸೊತ್ತು ಕೇಳಿದರೆ ಕೊಡದಿರುವುದಾದರೂ ಧರ್ಮವೇ? ನೀನು ಕೊಡದಿದ್ದ ಮಾತ್ರದಿಂದಲೇ ನಾನೇನು ಸುಮ್ಮನೆ ಹಿಂದಿರುಗುವೆನೆಂದು ಭಾವಿಸಿದೆಯಾ? ದೈವವು ಸಿಟ್ಟಾದರೆ ಅಪರಾಧಿಯು ಮಾತ್ರವೇ ದುಃಖಕ್ಕೆ ಈಡಾಗುವನು. ರಾಜನು ಕೋಪಗೊಂಡರೆ ವಂಶವೇ ಹಾಳಾಗುವುದಯ್ಯಾ! ಬೇಡ. ಈ ಒರಟು ತನವನ್ನು ಬಿಟ್ಟು ನನ್ನ ಮಾತನ್ನು ಕೇಳು" ಎಂದನು.

ಹರಗಣ—"ಆಹಾ! ಎಂತಹ ಧರ್ಮೋಪದೇಶವಿದು! ಅರಸರ ಅಧಿ ಕಾರವು ದೀಪಜ್ವಾಲೆಯಂತೆ ಚಂಚಲವಾದುದು. ಈ ದೇಹವಾಗಲಿ ಸಂಪತ್ತುಗಳಾಗಲಿ ಶಾಶ್ವತವಲ್ಲ. ಚಂಚಲಚಿತ್ತರಾದ ಅರಸರನ್ನು ನಂಬಿ ಪುಣ್ಯಲೋಕ ಸೋಪಾನದಂತಿರುವ ಶಾಶ್ವತವಾದ ಧರ್ಮವನ್ನು ಬಿಡ ಬಹುದೇ? ಅರಸುಮಗಳು ನನ್ನ ಮನೆಯಲ್ಲಿರುವುದೇನೋ ದಿಟ. ಆದರೆ ನಾನು ಆಕೆಯನ್ನು ನಿಮಗೆ ಬಿಟ್ಟುಕೊಡಲಾರೆನು. ಜಿಪುಣನು ಬದು ಕಿರುವಾಗ ಅವನ ಆಸ್ತಿಪಾಸ್ತಿಗಳನ್ನು ಬೇರೊಬ್ಬನು ಹೇಗೆ ಆಕ್ರಮಿಸಿ ಕೊಳ್ಳಲಾರನೋ ಅಂತಯೇ ನಾನು ಜೀವದಿಂದಿರುವ ವರೆಗೂ ನೀನು ಆಕೆಯನ್ನು ಕರೆದುಯ್ಯಲಾರೆ. ಇದೇ ದಿಟ. ಇನ್ನು ಹೆಚ್ಚು ಬಗೆಯಿಂದ ನನಗೆ ಅಲ್ಲಸಲ್ಲದ ಧರ್ಮೋಪದೇಶವನ್ನು ಮಾಡಿ ಕಂಠಶೋಷಣ ಮಾಡಿ ಕೊಳ್ಳ ಬೇಡ."

ಬೌದ್ಧ—"ವೇದವನ್ನೋದಿದವರಿಗೆ ಒರಟುತನವೂ ಹಠವೂ ಸಹಜ ವಾದುವೆಂಬುದಾಗಿ ಕೇಳಿದ್ದೆನು. ಅದೀಗ ನಿನ್ನಲ್ಲಿ ಸರಿಹೋಯಿತು. ನಾನು ಹಳ್ಳಿಯ ಗೌಡನಲ್ಲ. ರಾಜನ ಸೇನಾಪತಿ. ನಿನ್ನ ಬೇಳೆಯು ಇಲ್ಲಿ ಬೇಯುವುದಿಲ್ಲ. ಚೆನ್ನಾಗಿ ತಿಳಿದುಕೊಳ್ಳು. ನೀನು ನೋಡುತ್ತಿರು ವಾಗಲೇ ಒಂದು ನಿಮಿಷಮಾತ್ರದಲ್ಲಿ ಆ ರಾಜಪುತ್ರಿಯನ್ನು ಹೊರಸೆಳ ತಂದು ಏನು ಮಾಡುವೆನೋ ನೋಡುವೆಯಂತೆ."

ಹರಗಣ—"ನೀನು ಘೋರ ನರಕಕ್ಕೆ ಹೋಗುವೆ. ನನ್ನ ನಿಟ್ಟುಸಿರು ಬರಿದಾಗಿ ಹೋಗಲಾರದು. ನನ್ನ ಶಾಪವು—"

ಬೌದ್ಧ—"ನಿನ್ನ ಶಾಪಗೀಪಗಳು ನಮ್ಮನ್ನೇನೂ ಮಾಡಲಾರವು. ಇಷ್ಟರ ಮೇಲೆ ನಾನು ರಾಜಾಜ್ಞೆಯನ್ನು ನೆರವೇರಿಸಲು ಬಂದಿರುವೆನು. ಅದೆಲ್ಲಾ ರಾಜರಿಗೇ ಸೇರಿದುದು. ಒಳ್ಳೆಯ ಮಾತಿನಿಂದ ರಾಜಪುತ್ರಿಯನ್ನು

ಒಪ್ಪಿಸಿಬಿಡು. ಇಲ್ಲವಾದರೆ ನನ್ನ ಭಟರು ನಿನ್ನ ಮಡದಿಯನ್ನು ಭಂಗ ಗೊಳಿಸುವರು. ನಿನ್ನ ಒರಟುತನವು ಲೋಕದಲ್ಲೆಲ್ಲ ಹರಡಿಕೊಳ್ಳುವುದು."

ಹರಗಣ--"ಹಾಗಾದರೆ ನನಗೆ ಒಂದು ಮುಹೂರ್ತದ ವರೆಗೆ ಅವಕಾಶಕೊಟ್ಟೆಯಾದರೆ ನಾನು ಒಳಗೆ ಹೋಗಿ ಯೋಚಿಸಿಬರುವೆನು"

"ಒಳ್ಳೆಯದು. ಬಾವಿಯ ನೀರು ಎಲ್ಲಿಗೂ ಹೋಗಲಾರದು" ಎನ್ನುತ್ತ ಸಂಘಿಲಕನು ಸಮ್ಮತಿಸಿದನು. ಕೂಡಲೇ ಭಟರು ಅವನ ಕಟ್ಟುಗಳನ್ನು ಬಿಚ್ಚಿದರು. ಬ್ರಾಹ್ಮಣನು ಒಳಹೊಕ್ಕನು. ಸ್ವಲ್ಪ ಹೊತ್ತಿನಲ್ಲಿ ಈಚೆಗೆ ಬಂದು "ಬೌದ್ಧಶಿಖಾಮಣೀ! ನಿಮ್ಮ ಅರಸನ ಅಪ್ಪಣೆಯಾದರೂ ಏನು?" ಎಂದು ಕೇಳಿದನು.

ಬೌದ್ಧ—"ರಾಜಪುತ್ರಿಯು ಕಾಣಿಸಿದ ಕೂಡಲೇ ಅವಳನ್ನು ಅಲ್ಲಿಯೇ ಸುಟ್ಟುಬರಬೇಕು ಎಂದು. ನೀನು ಈಗ ಅದಕ್ಕೆ ಅನುಕೂಲನಾದರೆ ನಿನ್ನ ಮನೆಯೊಂದಿಗೆ ಅವಳನ್ನು ಸುಟ್ಟು ಬೂದಿಮಾಡಿ ಒಡನೆಯೇ ನಿನ್ನನ್ನು ಮಡದಿ ಮಕ್ಕಳೊಂದಿಗೆ ಅರಸನಲ್ಲಿಗೆ ಕರೆದುಯ್ದು ನಿನ್ನ ಧರ್ಮಬುದ್ಧಿಯನ್ನು ಬಿತ್ತರಗೊಳಿಸಿ ಬೇಕಾದಷ್ಟು ಮನೆಮಠಗಳನ್ನು ಕೊಡಿಸುವೆನು. ಈಗ ಅವನೆಲ್ಲಿ ಆ ರಾಜದ್ರೋಹಿ? ಹುಟ್ಟುಗಳ್ಳ?"

ಹರಗಣ—"ಎಲ್ಲಿಯೋ ಯಾವನೋ ಬೇಡನನ್ನು ಯಾರೋ ಹಿಡಿದು ಬಿಟ್ಟರಂತೆ. , ಅವನ ಸಂರಕ್ಷಣೆಗಾಗಿ ಹೋಗಿದ್ದಾನೆ"

ಹೀಗೆ ಹೇಳಿ ಹರಗಣನು ಒಳಹೊಕ್ಕು ವಿನಯವತಿಯನ್ನು ಕುರಿತು "ಅಮ್ಮಾ! ನಿನ್ನ ಊಹೆಯು ಸರಿಹೋಯಿತು. ಶೂದ್ರಕನಾದರೋ ಇನ್ನೂ ಬರಲಿಲ್ಲ. ಈಗ ಕರ್ತವ್ಯವೇನು?" ಎಂದನು.

"ನನ್ನನ್ನು ರಾಜಪುತ್ರಿಯ ವೇಷದಿಂದ ಇಲ್ಲಿರಿಸಿ ನೀವೆಲ್ಲರೂ ಈಗ್ಗೆ ಪಾರಾಗುವುದು ಲೇಸು" ಎಂದು ಹರಿಮತಿ ಹೇಳಿದಳು.

ವಿನಯವತಿ—"ಅದ್ಯಾಕೆ? ನಾನೇ ಇಲ್ಲಿರುವೆನು. ನೀವೆಲ್ಲರೂ ಹೊರಡಿರಿ. ಅಪರಾಧಿಯು ನಾನಿರುವಲ್ಲಿ ಶಿಕ್ಷೆಯು ಬೇರೆಯವರಿಗೆ ನ್ಯಾಯವಲ್ಲ. ನಿಮಗೇನು ಹುಚ್ಚು? ಇದಕ್ಕೆ ಇಷ್ಟು ಚಿಂತೆಯೇ?"

ಹರಗಣ—"ಅದು ಎಂದಿಗೂ ಆಗತಕ್ಕದಲ್ಲ. ನಾನು ಉಸಿರಾಡುತ್ತಿರುವ ವರೆಗೂ ನಾನು ಬ್ರಾಹ್ಮಣನೇ ಆಗಿದ್ದರೂ ಕ್ಷತ್ರಿಯ ವೀರನಂತೆ ಹೋರಾಡಿ ಸಾಯುವೆನಲ್ಲದೆ ನಿನ್ನನ್ನು ಮಾತ್ರ ಬಿಟ್ಟುಕೊಡಲಾರೆನು."

ವಿನಯವತಿ—“ಹಾಗಾದರೆ ನೀವು ಈಗ ಈ ವಿಪತ್ತಿನಿಂದ ಪಾರಾಗುವ ಬಗೆ ಯಾವುದು? ನನ್ನನ್ನು ಕಾಪಾಡುವುದಾದರೂ ಹೇಗೆ?”

ಹರಿಮತಿ—“ನಾಥಾ! ನನ್ನ ಮಾತನ್ನು ಲಾಲಿಸಬೇಡುವೆನು. ಈ ಗಿಳಿಯ ಮೂಲಕ ಬೇಗನೆ ಸಮಾಚಾರವು ನಿಮ್ಮ ಸ್ನೇಹಿತನಿಗೆ ಬರೆದು ಕಳುಹಿಸಲ್ಪಡಲಿ. ನಾನು ವಿನಯವತಿಯಾಗುವೆನು. ಶ್ರೀಮತಿಯನು ನನ್ನ ವೇಷದಿಂದ ಕರೆದುಕೊಂಡು ಮಾಧವಿಯ ಸಂಗಡ ನೀವು ಪಾರಾಗಿರಿ. ನಾವಿಬ್ಬರು ಬೇರೆ ಬೇರೆಯಾಗಿದ್ದಲ್ಲಿ ಯಾರೊಬ್ಬರೂ ಗುರುತಿಸಲಾರರು. ಇದೀಗ ಅರಸು ಮಗಳನ್ನು ಕಾಪಾಡುವ ಉಪಾಯ.”

ವಿನಯವತಿ (ಕಿವಿಗಳನ್ನು ಮುಚ್ಚಿಕೊಂಡು)—“ಶಿವಶಿವಾ! ಎಂತಹ ಸಲಹೆ? ಬ್ರಾಹ್ಮಣಿ! ಪತಿವ್ರತೆ! ಪರಮಪಾವನೆ! ನನ್ನ ಪ್ರಾಣಸಖಿ, ನನ್ನ ಈ ಹಾಳು ಪ್ರಾಣಗಳಿಗಾಗಿ ನಿನ್ನನ್ನು ಕಣ್ಣೆದಿರಲ್ಲಿ ಬೆಂಕಿಗೆ ಆಹುತಿ ಕೊಟ್ಟು ಹೋಗಬೇಕೆನ್ನುವೆಯಾ? ಹಿಂದಣ ಜನ್ಮದಲ್ಲಿ ಯಾವ ಪಾಪವನ್ನು ಮಾಡಿದೆನೋ ಅದರ ಫಲವು ಇನ್ನು ಸವೆಯದಿರುವಾಗ ಅದರ ಜತೆಗೆ ಇದೂ ಒಂದು ಹೇಳ ತೀರದ ಪಾತಕವೇ! ಹಾಗಾದರೆ ಈಗಿರುವ ಯಾವ ನರಕದಲ್ಲಿಯೂ ನನಗೆ ಸ್ಥಾನವಿಲ್ಲ ನನಗಾಗಿಯೇ ಹೊಸದೊಂದು ನರಕವು ಕಲ್ಪಿತವಾಗಬೇಕು. ದಿಟ. “ರಾಜ್ಯಾಂತೇ ನರಕಂ ಧ್ರುವಂ” ಎಂಬ ಮಾತನ್ನು ಸುಮ್ಮನೆ ಹಿರಿಯರು ಹೇಳಲಿಲ್ಲ”

ಹರಗಣ—“ಹಾ! ವಿಧಿಯೇ! ಈಗ ನಾನೇನು ಮಾಡಬಲ್ಲೆನು, ನನ್ನ ವಶದಲ್ಲಿ ವಾಸವಾಗಿರುವ ಅರಸುಗುವರಿಯನ್ನು ಬಿಟ್ಟುಕೊಟ್ಟು ಧರ್ಮಭ್ರಷ್ಟನಾಗಿ ಆಚಂದ್ರಾರ್ಕವಾಗಿ ಅಪಕೀರ್ತಿಗೆ ಗುರಿಯಾಗುವೆನೇ! ಇಲ್ಲವಾದರೆ ನೆಳಲಿನಂತೆ ನಂಬಿರುವ ಅನನ್ಯಪರಾಯಣೆಯಾದ, ಅಗ್ನಿಸಾಕ್ಷಿಕವಾಗಿ ಕಯ್ ಹಿಡಿದ, ಗುಣಭೂಷಿತೆಯೂ ಅನುಕೂಲೆಯೂ, ರೂಪನಿಧಿಯೂ ಎನಿಸಿದ ಈ ಧರ್ಮಪತ್ನಿಯನ್ನು ನೀಗಿಕೊಳ್ಳಲೇ? ಎಂತಹ ಕಿರುಕುಳಕ್ಕೆ ಸಿಲುಕಿದೆನು. ಹೇಗೂ ವಿನಯವತಿಯನ್ನು ಬಿಟ್ಟುಕೊಡದಿದ್ದರೆ ಸತ್ಯಕ್ಕೆ ತಪ್ಪಿಬಿದ್ದಂತಾಗುವುದು. ಹಿಂದೆ ಹರಿಶ್ಚಂದ್ರನು ಸತ್ಯಪಾಶಬದ್ಧನಾಗಿ ಚಂಡಾಲ ದಾಸವೃತ್ತಿಯನ್ನವಲಂಬಿಸಿ ಸಾಧ್ವೀಮಣಿ

ಯಾದ ಚಂದ್ರಮತಿಯನ್ನು ಕೊಲ್ಲಲು ಕತ್ತಿಯನ್ನೆತ್ತಲಿಲ್ಲವೇ! ಅಪವಾದ ಭಯದಿಂದಲ್ಲವೇ ರಾಮನು ಪೂರ್ಣಗರ್ಭಿಣಿಯಾಗಿದ್ದ ಮಡದಿಯನ್ನು ಕಾಡಿಗೆ ಅಟ್ಟಿದುದು? ಧರ್ಮಪಾಶಕ್ಕೆ ಒಳಪಟ್ಟು ಧರ್ಮಾತ್ಮಜನು ಪತ್ನೀ ಸಹೋದರರೊಂದಿಗೆ ವನವಾಸಕ್ಕೆ ಹೋಗಲಿಲ್ಲವೇ? ದಾನಶೌಂಡನಾದ ಕರ್ಣನು ತನ್ನ ದೇಹದೊಂದಿಗೆ ಬಂದ ಕವಚ ಕುಂಡಲಗಳನ್ನು ತರಿದು ಕೊಡಲಿಲ್ಲವೇ? ಕರುಣಾವಶದಿಂದ ದಧೀಚಿಯು ತನ್ನ ಬೆನ್ನ ಮೂಳೆಯನ್ನೇ ದೇವತೆಗಳಿಗೆ ಅರ್ಪಿಸಿದನಲ್ಲವೇ? ಶಿಬಿಚಕ್ರವರ್ತಿಯೂ ಆಶ್ರಿತೋದ್ಧರಣದ ಸಲುವಾಗಿ ತನ್ನ ದೇಹವನ್ನು ತುಂಡುತುಂಡಾಗಿ ಕತ್ತರಿಸಿ ಕೊಟ್ಟನಲ್ಲವೇ? ಚಂದ್ರಹಾಸನು ತನ್ನ ಮಾವನೈದುನರನ್ನು ಬದುಕಿಸುವ ಸಲುವಾಗಿ ತನ್ನನ್ನೇ ಚಂಡಿಗೆ ಆಹುತಿಯನ್ನಾಗಿ ಅರ್ಪಿಸಿದನಲ್ಲವೇ? ಇಂತಹ ಮಹಾ ಮಹಿಮಸಂಪನ್ನರೆನಿಸಿದ ದಿವ್ಯಪುರುಷರ ಕೀರ್ತಿಯಿಂದ ಬೆಳಗುತ್ತಿರುವ ಈ ಭಾರತಭೂಮಿಯಲ್ಲಿಯೇ ಜನಿಸಿ ತಕ್ಕಮಟ್ಟಿಗೆ ವೇದಶಾಸ್ತ್ರಾಧ್ಯಯನ ಧುರೀಣನೆನಿಸಿದ ನಾನು ಈಗ ಧರ್ಮವನ್ನು ಕೆಡಿಸಬಹುದೇ? ಇಲ್ಲ ಅದೆಂದಿಗೂ ನನ್ನಿಂದಾಗ ತಕ್ಕ ಕೆಲಸವಲ್ಲ. ನನ್ನ ಪ್ರಾಣವನ್ನಾದರೂ ಅರ್ಪಿಸಬಲ್ಲೆನು. ನನ್ನ ಸರ್ವಸ್ವವನ್ನೂ ಸೂರೆಬಿಡುವೆನು. ಪ್ರಾಣಕಾಂತೆಯನ್ನಾದರೂ ತೊರೆಯಬಲ್ಲೆನು. ಕಠೋರವೆನಿಸಿದ ಕಾರಾಗೃಹಶಿಕ್ಷೆಯನ್ನಾದರೂ ಅನುಭವಿಸುವೆನು. ಎಷ್ಟೋ ಭರವಸೆಯಿಂದ ನನ್ನಲ್ಲಿ ನ್ಯಾಸವಾಗಿರುವ, ಮಿತ್ರನ ಸರ್ವಸ್ವವನ್ನೂ ಮೃತ್ಯುವಿನ ಬಾಯಲ್ಲಿ ತುತ್ತಾಗಿಸಲಾರೆನು.”

ಹರಿಮತಿ—“ನಾಥಾ! ಹಾಗಾದರೆ ಇನ್ನು ತಡವೇಕೆ? ಚಿಂತೆಗೆ ಅವಕಾಶವನ್ನು ಕೊಡುವುದು ಧೀರಲಕ್ಷಣವಲ್ಲ. ನನ್ನನ್ನು ಬೇಗನೆ ಸೇನಾಪತಿಯ ವಶಕ್ಕೆ ಬಿಟ್ಟುಕೊಟ್ಟರಾಯಿತು. ನಾನು ಮುಂಚಿತವಾಗಿ ಹೋಗಿ ಅಲ್ಲಿ ತಮ್ಮ ಆಗಮನವನ್ನು ನಿರೀಕ್ಷಿಸುತ್ತ ಎಲ್ಲವನ್ನೂ ಅಣಿಮಾಡಿಡುವೆನು. ತಾವು ಈ ಸತೀಮಣಿಯನ್ನು ನಮ್ಮ ಮಿತ್ರವರ್ಯನಿಗೆ ಒಪ್ಪಿಸಿ, ನ್ಯಾಸಭರವನ್ನು ತೀರಿಸಿದ ಬಳಿಕ ಬೇಗನೆ ಅಲ್ಲಿ ಬಿಜಮಾಡುವುದು ದಿಟ.”

ವಿನಯವತಿ—“ಇದಾವ ಧರ್ಮವಿದು? ನನ್ನ ಪ್ರಾಣವು ಒಂದು ಹುಲ್ಲು ಕಡ್ಡಿಗಿಂತ ಕೀಳು. ಈ ಲೋಕದಲ್ಲಿ ನಾನು ಇನ್ನೆಷ್ಟು ಕಾಲ

ತಕ್ಕ ಪ್ರಾಯಶ್ಚಿತ್ತವನ್ನು ಕೊಟ್ಟು ಹಿಂದಿರುಗುವಷ್ಟರೊಳಗಾಗಿ ಮನೆಯು ವಿನಯವತಿಯೊಂದಿಗೆ ಸುಟ್ಟು ಬೂದಿಯಾಗಿ ಬಿಡುವುದೆಂದು ಭಾವಿಸಿ, ಬೇಗನೇ ಆನೆಯನ್ನು ಜೀರ್ಣಶಿವಾಲಯದ ಬಳಿಗೆ ಓಡಿಸಿ, ಅಲ್ಲಿಂದ ಇಳಿದು ಒಬ್ಬನೇ ಒಳಹೊಕ್ಕು ಸುರಂಗ ಮಾರ್ಗವಾಗಿ ಬೇಗಬೇಗನೆ ನಡೆತಂದು ನೋಡುವಲ್ಲಿ ಹರಿಮತಿಯು ಪೂಜಾಗೃಹದಲ್ಲಿ ಗಡಗಡನೆ ನಡುಗುತ್ತ ನಿಂತಿದ್ದಳು. ದೈವಾನುಗ್ರಹದಿಂದ ಬೆಂಕಿಯು ಆ ಕಡೆಗೆ ಇನ್ನೂ ಹರಡಿರ ಲಿಲ್ಲ ಶೂದ್ರಕನು ಗುಪ್ತದ್ವಾರದಿಂದ ಪೂಜಾಮಂದಿರವನ್ನು ಹೊಕ್ಕ ಕೂಡಲೇ ಹರಿಮತಿಯು ಅವನನ್ನು ಗುರುತಿಸಲಾರದೆ ಯಾವನೋ ರಾಜ ಭಟನು ತನ್ನನ್ನು ಭಂಗಪಡಿಸಲು ಬಂದಿರುವನೆಂಬುದಾಗಿ ಭಾವಿಸಿ ಮತಿಗೆಟ್ಟು ಮೂರ್ಛೆಬಿದ್ದಳು. ಶೂದ್ರಕನು ಆಕೆಯನ್ನು ತನ್ನ ಎರಡು ಕೈಗಳಿಂದ ಎತ್ತಿಕೊಂಡು ಸುರಂಗಮಾರ್ಗವಾಗಿ ಶಿವಾಲಯಕ್ಕೆ ತಂದು ಮಲಗಿಸಿ ಶೈತ್ಯೋಪಚಾರದಿಂದ ಎಚ್ಚರಗೊಳಿಸಿ ತನ್ನ ಗುರುತನ್ನು ಹೇಳಿ ಸಂತೈಸಿದನು. ಇಷ್ಟರಲ್ಲಿ ಮನೆಯು ಚಾವಣಿಯು ಸುಟ್ಟುಬಿದ್ದಿತು ಗ್ರಾಮಸ್ಥರೆಲ್ಲರೂ ದಿಕ್ಕು ತೋರದೆ ಬಗೆಬಗೆಯಾಗಿ ಪರಿತಪಿಸ ತೊಡಗಿದರು

ಇತ್ತಲಾ ಬೌದ್ಧನು ತಾನು ಸಾಧಿಸಿದ ರಾಜಕಾರ್ಯದ ಮಹತ್ವವನ್ನು ರಾಜನಿಗೆ ಅರಿಕೆಮಾಡುವ ಸಲುವಾಗಿ ರಾತ್ರಿಯೆನ್ನದೆ ಹಳ್ಳತಿಟ್ಟುಗಳೆನ್ನದೆ, ಬಗೆಬಗೆಯಿಂದ ತನ್ನನ್ನು ಬಯ್ಯುತ್ತಿರುವ ಜನಗಳ ಕರ್ಣಕಠೋರ ವಾಕ್ಯ ಗಳನ್ನು ಕೇಳಿದರೂ ಕೇಳದವನಂತೆ, ದಯಾಮಯನಾದ ಬೌದ್ಧನ ಮತಕ್ಕೆ ಕಳಂಕಪ್ರಾಯನಾಗಿ ಈ ಹಾಳು ಪಾಪಿಯು ಎಲ್ಲಿಂದ ಬಂದನೆಂಬುದಾಗಿ ತನ್ನ ಭಟರೇ ತನ್ನನ್ನು ದೂರುತಿದ್ದರೂ ಮಹಾಶಾಂತಸ್ವಭಾವವನ್ನು ತಳೆದಿರುವಂತೆ ತೋರ್ಪಡಿಸಿ ನಗುತ್ತ, ಅಂತರಂಗಕ್ಕೆ ಸೇರಿದ ಆಪ್ತನಾದ ಒಬ್ಬ ಭಟನನ್ನು ಕರೆದು "ಬೇಡರ ಪಾಳೆಯಗಾರನನ್ನು ಬಿಡಿಸುವುದಕ್ಕಾಗಿ ಅವಂತೀಭಟರೊಂದಿಗೆ ಯುದ್ಧಮಾಡುವಲ್ಲಿ ಶೂದ್ರಕನು ರಣರಂಗದಲ್ಲಿ ಸತ್ತುಹೋದನೆಂಬುದಾಗಿ ಒಂದು ಕಾಗದವನ್ನು ಯಾರಿಗೂ ತಿಳಿಯದ ಹಾಗೆ ರಹಸ್ಯವಾಗಿ ಬರೆದು ತೆಗೆದುಕೊಂಡು ಬಾ" ಎಂಬುದಾಗಿ ಆಜ್ಞಾಪಿಸಲು, ಆ ಭಟನು "ಅಯ್ಯಾ! ಸರ್ವಸ್ವವನ್ನೂ ಹಾಳು ಮಾಡಿ ಕೊಂಡು, ತನ್ನ ಮನೆಗೆ ತಾನಾಗಿಯೇ ಅತಿಥಿಯಾಗಿ ಕರೆತಂದಿದ್ದ ರಾಜ ಪುತ್ರಿಯು ತನ್ನ ಮನೆಯಲ್ಲಿ ಅನ್ಯಾಯವಾಗಿ ಬೆಂಕಿಗೆ ಆಹುತಿಯಾದ

ಷಲುವಾಗಿ ದೈವವನ್ನು ದೂರುತ್ತ ಶೋಕಿಸುತ್ತಿರುವ ಆ ಬಡ ಬ್ರಾಹ್ಮಣನನ್ನು ನಿಷ್ಕಾರಣವಾಗಿ ಏಕೆ ಬಾಧಿಸಬೇಕು? ಇದು ತರವಲ್ಲ. ನಾನು ಈ ಕೆಲಸಕ್ಕೆ ಸಮ್ಮತಿಸಲಾರೆನು" ಎನಲಾಗಿ, ಸಂಘಿಲಕನು ಹುಬ್ಬು ಗಂಟಿಕ್ಕಿ ದುರದುರನೆ ನೋಡುತ್ತ "ಎಲಾ! ರಾಜಾಜ್ಞೆಯನ್ನು ಮೀರಿ ನಡೆಯುವಷ್ಟು ಕೆಚ್ಚು ಬಂದಿತೇ ನಿನಗೆ? ಈ ಕಾಗದವನ್ನು ಬರೆದುಕೊಟ್ಟರೆ ಇದನ್ನು ಓದಿ ಆ ಬಡ ಹಾರುವನೂ ಮಡಿಯುವನು. ಮೊದಲೇ ಹೆಂಡತಿಯ ಮರಣದಿಂದ ಕೊರಗುತ್ತಿರುವ ಶೂದ್ರಕನು ತನ್ನ ಸ್ನೇಹಿತನೂ ಸತ್ತನೆಂದರೆ ಕೂಡಲೇ ದೇಹತ್ಯಾಗ ಮಾಡುವನು. ಇದೀಗ ಶತ್ರುನಿರ್ಮೂಲನೋಪಾಯವು. ಇದನ್ನು ನೀನು ಮಾಡದಿದ್ದರೆ ಇದೋ ಈ ಖಡ್ಗಕ್ಕೆ ಆಹುತಿಯಾಗ ಬೇಕಾಗುವುದು" ಎಂಬುದಾಗಿ ಭಯಪಡಿಸಲು, ಆ ಭಟನು ಬೇರೆ ದಾರಿ ತೋರದೆ ಆ ರೀತಿಯಾಗಿ ಒಂದು ಕಾಗದವನ್ನು ಬರೆದು ತಂದು ಕೊಟ್ಟನು ಸಂಘಿಲಕನು ಅದನ್ನು ಬೇರೆ ಒಬ್ಬ ಭಟನ ಮೂಲಕ ಹರಗಣನಿಗೆ ಕೊಡ ಹೇಳಿ ತನ್ನ ದಾರಿಯನ್ನು ಹಿಡಿದು ಬೇಗನೆ ನಡೆತಂದನು.

ಅತ್ತಲಾ ಭೂಸುರಶ್ರೇಷ್ಠನು ಮಾಧವೀವಿನಯವತಿಯರೊಂದಿಗೆ ಮನೆಯಿಂದ ಹೊರಟು ಒಂದು ಹರಿದಾರಿಯ ದೂರ ನಡೆತಂದು ಹಾಳು ಬಿದ್ದಿದ್ದ ಒಂದು ಬೌದ್ಧಾಲಯವನ್ನು ಸೇರಿ, ಅವರಿಬ್ಬರನ್ನೂ ಅಲ್ಲಿಯೇ ನಿಲ್ಲಿಸಿ ಸ್ವಲ್ಪ ಹೊತ್ತು ಮೌನವಾಗಿ ಕುಳಿತಿದ್ದು ಎಷ್ಟು ಬಗೆಯಿಂದ ತಿಳಿವು ತಂದು ಕೊಂಡರೂ ನೆಮ್ಮದಿ ಇಲ್ಲದವನಾಗಿ ಸುಟ್ಟು ಹೋದ ಮನೆಯನ್ನು ನೋಡಿ ಬರುವನೆಂಬುದಾಗಿ ಹೇಳಿ, ರಾಜಪುತ್ರಿಯ ಅನುಮತಿಯನ್ನು ಪಡೆದು ಮನೆಯ ಕಡೆ ಹೊರಟನು. ಇಷ್ಟು ಹೊತ್ತಿಗೆ ರಾತ್ರಿಯ ನಾಲ್ಕನೆಯ ಯಾಮವು ಪ್ರಾರಂಭವಾಗಿದ್ದಿತು. ಮನೆಯ ಹತ್ತಿರಕ್ಕೆ ಬರುವಾಗ್ಗೆ ಮನೆಯು ಧಗಧಗನೆ ಉರಿಯುತ್ತಿದ್ದಿತು. ಅಗ್ನಿಜ್ವಾಲೆಗಳು ಸುತ್ತು ಮುತ್ತಣ ಮರಗಳ ಕೊಂಬೆಗಳ ವರೆಗೂ ವ್ಯಾಪಿಸಿದ್ದುವು. ಹರಗಣನು ದಿಕ್ಕು ತೋರದೆ ಕಲ್ಲುಕಂಬದಂತೆ ನಿಂತು ಬಿಟ್ಟಿದ್ದನು. ಅಷ್ಟರಲ್ಲಿ ಒಬ್ಬ ಭಟನು ಅಲ್ಲಿಗೆ ಬಂದು ತಾನು ತಂದಿದ್ದ ಲೇಖವನ್ನು ಅವನ ಕಯ್ಗೆ ಕೊಟ್ಟನು. ಅವನು ಅದನ್ನು ಆ ಭಟನ ಕಯ್ಯಲ್ಲಿದ್ದ ದೀವಟಿಗೆಯ ಬೆಳಕಿನಲ್ಲಿ ಓದಿ, ಅದು ಬೇಡರ ಪಾಳೆಯಗಾರನ ಹೆಸರಿನಲ್ಲಿದ್ದುದರಿಂದ, ನಂಬಿದವನಾಗಿ 'ಹಾ! ಮಿತ್ರಾ! ಶೂದ್ರಕಾ!' ಎನ್ನುತ್ತ ಮೂರ್ಛೆಬಿದ್ದನು.

ಬದುಕಿದರೂ ಬರುವ ಭಾಗ್ಯವೇನು? ನನ್ನ ವಂಶಕ್ಕೆ ತಕ್ಕ ಕೃತ್ಯವನ್ನೇ ನಾನೀಗ ನಡೆಯಿಸಬೇಕು. ಶೌರ್ಯನಿಧಿಯೆನಿಸಿದ ಕ್ಷತ್ರಿಯನಲ್ಲಿ ಜನಿಸಿ, ಮಹಾಪರಾಕ್ರಮಿಯೂ ಧರ್ಮನಿಧಿಯೂ, ವಿದ್ಯಾಭಿಮಾನಿಯೂ ಎನಿಸಿದ ಭೂಸುರವರನ ಕಯ್ಸೇರಿ, ಆತನ ಕೀರ್ತಿಸಾಹಸಗಳನ್ನು ಕಣ್ಣಾರ ಕಂಡು, ಕಿವಿಯಾರ ಕೇಳಿದೆನು. ಇನ್ನು ಈ ಲೋಕದಲ್ಲಿ ನನ್ನಿಂದಾಗತಕ್ಕ ಮಹಾ ಕಾರ್ಯವಾದರೂ ಯಾವುದು? ಈ ಹಾಳು ದೇಹಕ್ಕೋಸುಗ ಮಹಾ ತಪಸ್ವಿನಿಯೂ ಬ್ರಾಹ್ಮಣಿಯೂ ಪ್ರಾಣಪ್ರಿಯೆಯೂ ಎನಿಸಿದ ಈ ಪತಿವ್ರತಾಶಿಖಾಮಣಿಯನ್ನು ಬೆಂಕಿಯಲ್ಲಿ ಬಿಸುಡಬಲ್ಲೆನೇ? "

**ಹರಗಣ**—"ರಾಜಪುತ್ರಿ! ನಿನ್ನನ್ನು ನೀನೇ ಅರಿಯದಿರುವೆ. ನಿನ್ನಿಂದ ಇನ್ನು ಮುಂದೆ ಈ ಲೋಕದಲ್ಲಿ ಎಷ್ಟೋ ಮಹೋಪಕಾರಗಳು ನಡೆಯಬೇಕಾಗಿವೆ. ನಿನ್ನನ್ನು ಕಾಪಾಡುವುದರಿಂದ ಧರ್ಮವೇ ಲೋಕದಲ್ಲಿ ನೆಲೆಗೊಳ್ಳುವುದು. ಯಾವ ಒಂದು ಪ್ರಾಣಿಯು ಬದುಕಿರುವುದರಿಂದ ಲೋಕವೆಲ್ಲವೂ ಉಸಿರಾಡಬಲ್ಲುದೋ ಅಂತಹವರು ಬದುಕಿ ಸಾರ್ಥಕ"

**ವಿನಯವತಿ**—"ಮಹಾಮಹಿಮನೆ! ಹಾಗೆ ಅಪ್ಪಣೆ ಕೊಡಿಸಲಾಗದು. ನಾನೆಷ್ಟರವಳು? ಈ ಲೋಕಕ್ಕೆಲ್ಲ ನಾನೊಬ್ಬಳೇ ಅಂತಹವಳೋ? "ತಿಮಿಂಗಿಲ ಗಿಲೋಪ್ಯಸ್ತಿ ತದ್ಗಿಲೋಪ್ಯಸ್ತಿ" ಎಂಬಂತೆ ನನ್ನನ್ನೂ ಮಿಂಚಿಸಿದ ಸಾಧ್ವೀರತ್ನಗಳು ಈ ಭೂಮಿಯಲ್ಲಿ ಎಷ್ಟೋ ಅಡಗಿರುವುವು. ಸಮಯ ಬಂದಾಗ ಒಂದೊಂದಾಗಿ ಹೊರಬೀಳದಿರಲಾರವು"

**ಹರಿಮತಿ**—"ಅಮ್ಮಾ! ನೀನೇಕೆ ಆತುರಪಡುವೆ? ಎಂದಿಗಾದರೂ ಧರ್ಮವೇ ಜಯಿಸಬಲ್ಲುದು ಮುಂಚಿನಂತೆ ನೀನು ಈ ಗಿಣಿಯ ಮೂಲಕ ನಿನ್ನ ಪ್ರಾಣಕಾಂತನಿಗೆ ಬರೆದು ಕಳುಹು. ಆತನು ಬಂದನೆಂದರೆ ಎಲ್ಲವೂ ಸರಿಹೋಗುವುದು.—"

ಅನಂತರ ವಿನಯವತಿಯು ಬೇಗನೆ ಶಯನಗೃಹವನ್ನು ಹೊಕ್ಕು ಒಂದು ಪತ್ರಿಕೆಯನ್ನು ಬರೆದು ಆ ಗಿಳಿಯ ಕೊರಳಿಗೆ ಕಟ್ಟಿ ಕಳುಹಿದಳು. ಅಷ್ಟರಲ್ಲಿ ಹರಿಮತಿಯು ವಿನಯವತಿಯ ವೇಷವನ್ನು ಧರಿಸಿದಳು. ಆಗ ವಿನಯವತಿಯು ಅಲ್ಲಿಗೆ ಬಂದು ನೋಡಿ, ಗಟ್ಟಿಯಾಗಿ ಅಳುತ್ತ ಹರಿಮತಿಯ ಕಾಲಿಗೆ ಅಡ್ಡ ಬಿದ್ದು ಬಗೆ ಬಗೆಯಿಂದ ಬೇಡವೆಂದು ಬೇಡಿಕೊಂಡಳು. ಆದರೆ ಹರಗಣನು "ತಾಯೇ! ಹೆದರ ಬೇಡ. ನನ್ನ ಬಲಗಣ್ಣು ಹಾರುತ್ತಿದೆ.

ಬೇಗನೆ ನಮ್ಮ ವಿಪತ್ತು ಮಾಯವಾಗುವುದು, ಇತ್ತ ಬಾ. ನನ್ನ ಮಾತನ್ನು ಲಾಲಿಸು. ದೇವತೆಗಳು ನಿನಗೆ ಮೇಲ್ಮೆಯನ್ನುಂಟುಮಾಡುವರು. ನೀನು ಬೇಗನೆ ಹರಿಮತಿಯಾಗು" ಎನ್ನುತ್ತ ಬಲಾತ್ಕರಿಸಲು, ವಿನಯವತಿಯು ಉಪಾಯಹೀನೆಯಾಗಿ ಹರಿಮತಿಯ ವೇಷವನ್ನು ಧರಿಸಿದಳು. ಅಲ್ಲಿಂದ ನಾಲ್ವರೂ ಪೂಜಾಗೃಹವನ್ನು ಹೊಕ್ಕು ಇಷ್ಟದೇವತೆಯನ್ನು ಮನಸಾ ಧ್ಯಾನ ಮಾಡಿ ನಮಸ್ಕರಿಸುವಲ್ಲಿ, ಆ ದಂಪತಿಗಳು "ಇಂದಿನ ವರೆಗೆ ನಾವು ಗೃಹಸ್ಥ ಧರ್ಮವನ್ನು ರವೆಯಷ್ಟಾದರೂ ಮೀರದೆ ನಡೆಯಿಸಿದುದೇ ಆದರೆ ನಮ್ಮ ಧರ್ಮವೇ ನಮ್ಮನ್ನು ಈಗ ಕಾಪಾಡ ಬೇಕು" ಎಂದರು. ಆಗ ವಿನಯವತಿಯೂ ಮಾಧವಿಯೂ ಏನೇನನ್ನೋ ಬೇಡಿಕೊಳ್ಳುತ್ತಿದ್ದರು ಇಷ್ಟರಲ್ಲಿ ಸಂಘಿಲ ಕನು ತನ್ನ ಪರಿವಾರದೊಂದಿಗೆ ತಲೆಬಾಗಿಲ ಬಳಿಹಾಯ್ದು ನಿಂತು ಬಲ ವಾಗಿ ಬಾಗಿಲನ್ನು ಒಡೆಯಲಾಗಿ ಬಾಗಿಲು ಮುರಿದು ಬಿದ್ದಿತು. ಈ ಶಬ್ದವನ್ನು ಕೇಳಿ ಹರಗಣನು ಮಾಧವಿಯನ್ನೂ ವಿನಯವತಿಯನ್ನೂ ಕರೆದುಕೊಂಡು ಯಾರೊಬ್ಬರಿಗೂ ಯಾವ ಅನುಮಾನವೂ ತಟ್ಟದ ಹಾಗೆ ಮನೆಯನ್ನು ಬಿಟ್ಟು ಹೊರಟು ಬಂದನು. ಅಷ್ಟರಲ್ಲಿ ಸಂಘಿಲಕನ ಅಪ್ಪಣೆಯ ಮೇರೆಗೆ ಭಟರು ಅಗರು, ಸಾಂಬ್ರಾಣಿ, ಸಜ್ಜರಸಗಳಿಂದ ಮಿಶ್ರವಾದ ದ್ರಾವಕಗಳನ್ನು ಮನೆಯ ಸುತ್ತಲು ಸುರಿದು, ನಾಲ್ಕು ಕಡೆಯ ಬಾಗಿಲುಗಳನ್ನೂ ಕಿಟಕಿ ಗಳನ್ನೂ ಮುಚ್ಚಿ, ಆ ಮನೆಯನ್ನು ಪರಶುರಾಮನಿಗೆ ಪ್ರೀತಿಯಾಗಿಸಿದರು. ಹರಿಮತಿಯು ಪೂಜಾಮಂದಿರದಲ್ಲಿ ದೇವರ ಇದಿರಾಗಿ ನಿಶ್ಚಲ ಭಾವದಿಂದ, ವಿನಯವತಿಯನ್ನು ಯಾರೊಬ್ಬರೂ ಅನುಮಾನಿಸದಿರಲೆಂದು ಬೇಡುತ್ತ ನಿಂತಿದ್ದಳು.

ಇಷ್ಟರಲ್ಲಿ ಅಗ್ನಿದೇವನು ತನ್ನ ನಾಲಗೆಗಳನ್ನು ಹೊರಚಾಚಿ ಸವರಿ ಕೊಳ್ಳುತ್ತ, ಚಟಪಟನೆ ಖಾದ್ಯವಸ್ತುಗಳನ್ನು ತಿನ್ನುತ್ತಿದ್ದನು. ಇದನ್ನು ಕಂಡು ಸಂಘಿಲಕನು ತನ್ನ ಪರಿವಾರದೊಂದಿಗೆ ಸಂತೋಷದಿಂದ ಹಿಂದಿರು ಗಿದನು. ಇತ್ತ ನಮ್ಮ ವೀರಶಿಖಾಮಣಿಯು ವಾಯುವೇಗದಿಂದ ಆನೆಯ ನ್ನೋಡಿಸುತ್ತ ಆ ಗ್ರಾಮದ ಎಲ್ಲೆಯ ಹತ್ತಿರಕ್ಕೆ ಬರುವಷ್ಟರಲ್ಲಿ ಗ್ರಾಮ ವಾಸಿಗಳು ಅಲ್ಲಿನ ವಿದ್ಯಮಾನಗಳನ್ನೆಲ್ಲ ಅರುಹಿ, ವಿನಯವತಿಯೊಂದಿಗೆ ಮನೆಗೆ ಈಗ ತಾನೇ ಬೆಂಕಿಹೊತ್ತಿಸಿ ಹೊರಟುಹೋದರೆಂಬುದಾಗಿ ತಿಳಿಸಿ ದರು. ಕೂಡಲೇ ಉಜ್ಜಯನೀ ಭಟರನ್ನು ಹಿಂಬಾಲಿಸಿ ಹೋಗಿ ಅವರಿಗೆ

ವಿಪತ್ತನ್ನು ನೀನು ಎಂದಾದರೂ ಅನುಭವಿಸಿದ್ದರೆ ಆಗಲ್ಲವೇ ನಿನ್ನ ಮನಸ್ಸಿನಲ್ಲಿ ಕನಿಕರವು ಹುಟ್ಟುತ್ತಿದ್ದಿತು! ಎಲೆ ಅಗ್ನಿ ದೇವನೆ! ಅನುದಿನವು ಸಂಧ್ಯಾ ಸಮಯಗಳಲ್ಲಿ ನಾವು ದಂಪತಿಗಳಿಬ್ಬರೂ ಭಕ್ತಿಪುರಸ್ಸರವಾಗಿ ಅರ್ಪಿಸುತ್ತಿದ್ದ ಹೋಮದ್ರವ್ಯವು ನಿನಗೆ ಸಾಕಾಗಲಿಲ್ಲವೇ? ಸೀತೆಯು ಹಿಂದೆ ನಿನ್ನಲ್ಲಿ ದುಮ್ಮಿಕ್ಕಿದಾಗ ಆಕೆಯು ಮುಡಿದಿದ್ದ ಹೂದಂಡೆಯೂ ಬಾಡದ ಹಾಗೆ ನಿನ್ನ ಕಯ್ಗಳಿಂದ ನೀನೇ ಎತ್ತಿತಂದು ರಾಮನಿಗೆ ಒಪ್ಪಿಸಿದೆ ಎನ್ನುವರಲ್ಲವೇ? ಇದು ದಿಟವಾದರೆ ನೀನು ಹರಿಮತಿಯನ್ನು ಸುಡಲಾರೆ. ಎಲ್ಲಿಯಾದರೂ ಬಚ್ಚಿಟ್ಟಿರುವೆಯಾ? ಎಲ್ಲಿ? ಬೇಗನೆ ತೋರು. ಹರಿಮತಿ! ಹರಿಮತಿ! ಇದೋ ನಾನೂ ಬರುವೆನು, ನಿಲ್ಲು—ನಿಲ್ಲು—ಹೋಗಬೇಡ. ನಿನಗೆ ದೇವತೆಗಳು ಕಳುಹಿಸಿದ ವಿಮಾನದಲ್ಲಿ ನನಗೂ ಸ್ಥಳವಿಲ್ಲವೆನ್ನುವೆಯಾ? ದಿಟ. ಅಂತಹ ಗೌರವಕ್ಕೆ ನಾನು ಯೋಗ್ಯನಲ್ಲ. ನನ್ನಲ್ಲಿ ನಿನಗೆ ಪ್ರೀತಿಯಿಲ್ಲವೇ? ಹಾಗಾದರೆ ಸ್ವಲ್ಪ ನಿಲ್ಲು. ನಾನೂ ಬಂದೆನು. ಇದೇನು? ಎಲ್ಲಿಯೋ ಮಾಯವಾಗಿ ಬಿಟ್ಟೆಯಲ್ಲಾ! ಪರಿಹಾಸಮಾಡುವ ಸಲುವಾಗಿ ಅವಿತುಕೊಂಡಿರುವೆಯಾ?" ಎನ್ನುತ್ತ ಆ ಬೆಂಕಿಯಲ್ಲಿ ದುಮ್ಮಿಕ್ಕುವಷ್ಟರಲ್ಲಿ, ಅವನನ್ನೇ ಹುಡುಕುತ್ತ ಬಂದ ಶೂದ್ರಕನು ಓಡಿಬಂದು ತನ್ನ ಎರಡು ಕಯ್ಗಳಿಂದ ಅವನನ್ನು ಹಿಂದುಗಡೆಯಿಂದ ಬಲವಾಗಿ ತಬ್ಬಿ ಹಿಂದಕ್ಕೆ ಎಳೆದುಕೊಂಡು—"ಮಿತ್ರಾ! ಇದೇನು?" ಎನ್ನುವುದನ್ನು ಕೇಳಿ, "ಎಲೋ ಹಾಳು ಬೌದ್ಧನೆ! ಇನ್ನೂ ನನ್ನ ಮೇಲೆ ನಿನಗೆ ಸೇಡು ತೀರಲಿಲ್ಲವೇ? ಬೇಡ ನೀನು ಕೊಲ್ಲಬೇಡ ನಾನಾಗಿಯೇ ಸಾಯುವೆನು. ಬಿಟ್ಟುಬಿಡು. ನನ್ನ ಗೃಹಿಣಿಯು ದಗ್ಧವಾದ ಅಗ್ನಿಯಲ್ಲಿಯೇ ನಾನೂ ಬೀಳುವೆನು ಬೇಗ ಬಿಡು. ಇಲ್ಲವಾದರೆ ನಿನಗೆ ಶಾಪ ಕೊಡುವೆನು" ಎಂದನು. ಶೂದ್ರಕನು ಮಾರುತ್ತರವನ್ನೀಯದೆ ತನ್ನ ಎದೆಗೆ ಅವನನ್ನು ಆನಿಸಿಕೊಂಡು, ಸೆರಗಿನಿಂದ ಬೀಸತೊಡಗಿದನು. ಇಷ್ಟರಲ್ಲಿ ಉಷಃಕಾಲದ ತಂಗಾಳಿಯು ಬೀಸ ತೊಡಗಿತು ಹರಗಣನು ಸ್ವಲ್ಪಸ್ವಲ್ಪವಾಗಿ ಮೆಲ್ಲಮೆಲ್ಲನೆ ಚೇತರಿಸಿ ಕೊಳ್ಳುತ್ತಿದ್ದನು. ಆಗ ಶೂದ್ರಕನು ಸ್ವಲ್ಪಸ್ವಲ್ಪವಾಗಿ ತಾನಾರೆಂಬುದನ್ನು ತಿಳಿಯ ಪಡಿಸಿ, ವಿಂಧ್ಯಕೇತುವೂ ವಿಂಧ್ಯಾವಳಿಯೂ ಸುಖವಾಗಿರುವರೆಂಬ ಸಮಾಚಾರವನ್ನು ಹೇಳಿ, ಹರಿಮತಿಯನ್ನು ತಾನು ಕಾಪಾಡಿದ ವಿವರವನ್ನು ತಿಳಿಸಿ, ವಿನಯವತಿಯೂ ಮಾಧವಿಯೂ ಎಲ್ಲಿರುವರೆಂಬುಗಾಗಿ ಕೇಳಲಾಗಿ,

ಆಶ್ಚರ್ಯಭರಿತನಾದ ಹರಗಣನು ಇದೇನು ಕನಸೋ ಇಂದ್ರಜಾಲವೋ, ಭ್ರಾಂತಿಯೋ, ಮನೋವಿಕಾರವೋ, ಉನ್ಮಾದವೋ? ಎಂದು ದಿಕ್ಕು ತೋರದವನಂತೆ ಸುತ್ತಲೂ ನೋಡುತ್ತ ಕಡೆಗೆ, ಭಟನೊಬ್ಬನು ತನಗೆ ಲೇಖವನ್ನು ತಂದಿತ್ತುದನ್ನೂ ಅದನ್ನು ತಾನು ಓದಿಕೊಂಡು ವಿನಯವತಿಗೆ ಕಳುಹಿದುದನ್ನೂ ಹೇಳಲಾಗಿ ಶೂದ್ರಕನು—"ಹಾ! ಎಂತಹ ಘಾತವಾಯಿತು! ವಿನಯವತಿಯು ಇನ್ನೂ ಬದುಕಿರಬಲ್ಲಳೇ? ಮಿತ್ರನೇ! ಏಳು, ಬೇಗನೆ ನಡೆ, ಆ ಹಾಳು ದೇವಾಲಯವನ್ನು ತೋರು" ಎನ್ನುತ್ತ ಬೇಗನೆ ನಡೆಯ ತೊಡಗಿದನು. ಹರಗಣನೂ ಅವನ ಹಿಂದೆಯೇ ಓಡಿ ಹೋಗುತ್ತಿದ್ದನು.

ಇತ್ತಲಾ ಭಟನು ಕಾಗದವನ್ನು ತೆಗೆದುಕೊಂಡು ಜೀರ್ಣ ಬೌದ್ಧಾಲಯವನ್ನು ಸೇರಿ ಅಲ್ಲಿ ಹರಿಮತಿಯು ಯಾರೆಂದು ಕೇಳುವಲ್ಲಿ, ಮಾಧವಿಯು, ಅವನು ಯಾರು, ಎಲ್ಲಿಂದ ಬಂದವನೆಂಬ ಸಮಾಚಾರವನ್ನು ತಿಳಿದುಕೊಂಡು ಹರಗಣನು ನೋದಿ ಕಳುಹಿದ ಲೇಖವನ್ನು ತೆಗೆದುಕೊಂಡಳು. ಭಟನು ಕರ್ತವ್ಯವನ್ನು ನೆರವೇರಿಸಿ ಹೊರಟುಹೋದನು. ವಿನಯವತಿಯು ಅದನ್ನು ಓದಿದಕೊಡಲೇ 'ಹಾ ದೈವವೇ!' ಎನ್ನುತ್ತ ನೆಲದ ಮೇಲೆ ಬಿದ್ದಳು. ಬಹಳ ಹೊತ್ತಿನ ವರೆಗೂ ಚೇತರಿಸಿಕೊಳ್ಳಲೇ ಇಲ್ಲ ಮಾಧವಿಯು ಎಷ್ಟೋ ಬಗೆಯಿಂದ ಉಪಚರಿಸಿದರೂ ಏನೂ ಫಲವಾದಂತೆ ತೋರಲಿಲ್ಲ. ಮಾಧವಿಯು ಕಂಬನಿಮಳೆಗರೆಯುತ್ತ ತನ್ನ ಸೆರಗಿನಿಂದ ಅವಳ ಮೋರೆಯ ಮೇಲೆ ಗಾಳಿಬೀಸುತ್ತ, ವಿನಯವತಿಯ ತಲೆಯನ್ನು ತನ್ನ ತೊಡೆಯ ಮೇಲಿಟ್ಟುಕೊಂಡು, ಎಡಗಯ್ಯಿಂದ ಆ ಕಾಗದವನ್ನು ತೆಗೆದು ಓದಿನೋಡಿ, ತನ್ನ ಸಖಿಯನ್ನು ಕುರಿತು, "ತಾಯೇ! ಇದು ದಿಟವಾಗಿರಲಾರದು. ಇದು ಹಗೆಗಳ ಕೃತ್ರಿಮವಾಗಿರಬೇಕು. ನಿನ್ನ ಪ್ರಾಣಕಾಂತನು ಇಷ್ಟು ಬೇಗನೆ ರಣರಂಗದಲ್ಲಿ ಹಗೆಗಳಿಂದ ಹತನಾಗನು. ಸಂತವಿಸಿಕೊಳ್ಳು" ಎನುತ್ತ ಮೆಲ್ಲಗೆ ಆಕೆಯ ಮೋರೆಯ ಮೇಲೆ ಜೋಲಾಡುತ್ತಿದ್ದ ಮುಂಗುರುಗಳನ್ನು ತಿದ್ದುತ್ತಿದ್ದಳು. ಸ್ವಲ್ಪ ಹೊತ್ತಿನ ಮೇಲೆ ವಿನಯವತಿಯು "ಸಖಿ! ಏನೆಂದೆ? ಇದು ಕೃತ್ರಿಮವೆಂದೆಯಾ? ಹಾಗಿರಲಾರದು. ಈಗ ನಾನು ಹರಿಮತಿಯೆಂಬ ಬ್ರಾಹ್ಮಣಿಯಾಗಿರುವೆನಲ್ಲವೇ? ನನ್ನ ಕೊಲೆಯಿಂದ ಅವರಿಗೆ ಬರತಕ್ಕ

ಭಟನ ಶೈತ್ಯೋಪಚಾರದಿಂದ ಸ್ವಲ್ಪ ಚೇತರಿಸಿಕೊಂಡು "ಅಯ್ಯೋ! ಎಷ್ಟು ಅನರ್ಥವಾಯಿತು? ನಾನೊಂದನ್ನು ಬಗೆದರೆ ದೈವವು ಮತ್ತೊಂದನ್ನು ಬಗೆಯಿತಲ್ಲವೇ? ಅಷ್ಟೊಂದು ಸಾಹಸಿಯಾದ ನೀನು ರಣರಂಗದಲ್ಲಿಯೇ ಮಡಿದೆಯಾ? ನಿನ್ನ ಸಾಹಸವೇ ನಿನ್ನ ಮರಣಕ್ಕೆ ಕಾರಣವಾಯಿತೇ? ಮಿತ್ರಾ! ನಾನು ಯಾರಿಗೆ ಮೊರೆಯಿಡುವೆನು? ಇನ್ನು ಯಾರ ಸಲುವಾಗಿ ಬದುಕಿರಬೇಕು?" ಎಂಬುದಾಗಿ ಪರಿತಪಿಸುತ್ತ ಆ ಭಟನನ್ನು ಕುರಿತು "ಅಯ್ಯಾ! ಲೇಖವನ್ನು ತಂದು ಕೊಟ್ಟು, ನೆಲೆಯಿಲ್ಲದೆ ಡೋಲಾಯಮಾನ ವಾಗಿದ್ದ ನನ್ನ ಮನಸ್ಸಿಗೇನೋ ನೆಲೆಯನ್ನುಂಟು ಮಾಡಿದೆ. ಇದೊಂದು ಮಹೋಪಕಾರವೆಂತಲೇ ಭಾವಿಸಬೇಕು ಆದರೆ ನಿನ್ನಿಂದಲೇ ಇನ್ನೊಂದು ಉಪಕಾರವು ಆಗಬೇಕಾಗಿದೆ. ಇದೋ ಈ ದಾರಿಯಲ್ಲಿ ಹೋದರೆ ಸ್ವಲ್ಪ ದೂರದಲ್ಲಿ ಬಲಗಡೆ ಒಂದು ಬೌದ್ಧರ ಹಾಳು ಗುಡಿ ಇದೆ ಅದರಲ್ಲಿ ರಾಜ—ಅಲ್ಲ, ವಿನ—ಅಲ್ಲ—ನನ್ನ ಹೆಂಡತಿ—ಅಲ್ಲ, ಹರಿಮತಿಯೆಂಬ ಒಬ್ಬ ಕನ್ಯೆ ಅಲ್ಲ—ಒಬ್ಬ ದ್ವಿಜರಮಣಿಯು ಇದ್ದಾಳೆ ಈ ಕಾಗದವನ್ನು ನಾನು ಕೊಟ್ಟೆನೆಂದು ಆಕೆಗೆ ಕೊಟ್ಟುಹೋಗು. ನಾನು ಎಲ್ಲಿ?—ಎಂಬುದಾಗಿ ಆಕೆಯು ಕೇಳಿದರೆ ಮನೆಯು ಸುಡುತ್ತಿರುವುದನ್ನು ನೋಡುವುದಕ್ಕೆ ಹೋದನೆಂದು ಹೇಳು" ಎಂಬುದಾಗಿ ಆ ಭಟನನ್ನು ಕಳುಹಿಸಿ "ಅಯ್ಯೋ ಶೂದ್ರುಕಾ! ಏನು ಮಾಡಿ ಹೋದೆ? ಸ್ನೇಹಿತನನ್ನು ಬಂಧನದಿಂದ ಬಿಡಿಸುವುದು ಧರ್ಮ. ಈ ಧರ್ಮಕ್ಕೆ ಕಟ್ಟು ಬಿದ್ದು ಬೆಂಕಿಯ ಮೇಲೆ ಈಚಲ ಹುಳದಂತೆ ಹೋಗಿ ಬಿದ್ದೆಯಾ? ಇಲ್ಲವೇ ನಿನಗೆ ತಿಳಿಯದಂತೆಯೇ ವಿಷಲಿಪ್ತವಾದ ಬಾಣವನ್ನು ಯಾರಾದರೂ ನಿನ್ನ ಮೇಲೆ ಬಿಟ್ಟರೇನು? ಹಾಳು ನಿರ್ಭಾಗ್ಯನಾದ ಆ ಬೇಡರ ಪಾಳೆಯಗಾರನ ಗತಿಯಾದರೂ ಏನಾಯಿತು? ಅವನನ್ನು ನೀನು ಬಿಡಿಸದಿದ್ದರೆ ಅವನು ಕಾಗದವನ್ನು ಬರೆಯುವುದು ಹೇಗೆ? ನನ್ನ ಅರಗಿಳಿಯು ನಿನಗೆ ಲೇಖವನ್ನು ತಂದು ಕೊಡಲಿಲ್ಲವೇ? ರಾಜಪುತ್ರಿಯ ಗತಿಯೇನು? ಸಾಯುವಾಗ ನೀನು ಏನು ಹೇಳಬೇಕೆಂದಿದ್ದೆಯೋ? ಅವಳು ಮುಂದೆ ಬದುಕುವ ದಾರಿ ಯಾವುದು? ಅವಳಾದರೂ ಬದುಕಿರಬಲ್ಲಳೇ? ಬದುಕಿದರೂ ಫಲ ವೇನು? ನಾನು ಈ ಸುಟ್ಟಮೋರೆಯನ್ನು ಆಕೆಗೆ ಹೇಗೆ ತೋರಬಲ್ಲೆನು? ಬೆಳಗಾಯಿತೆಂದರೆ ಆಕೆಯ ಗುಟ್ಟು ಹೊರಬೀಳದಿರುವುದೇ? ಗುಟು

ರಟ್ಟಾಯಿತೆಂದರೆ ಮುಂದೆ ಗತಿಯೇನು? ಒಂದು ವೇಳೆ ರೂಪಸಾದೃಶ್ಯ ದಿಂದ ಹರಿಮತಿಯೆಂಬುದಾಗಿ ಜನಗಳು ಭಾವಿಸಿದರೂ ನಾನು ಆಕೆಯ ಸಂಗಡ ಹೇಗೆ ವಾಸಮಾಡಬಲ್ಲೆನು? ಪರಸತಿಯಲ್ಲವೇ? ಈ ಊರನ್ನೇ ಬಿಟ್ಟು ಎಲ್ಲಿಗಾದರೂ ಹೋಗುವೆನೆಂದರೆ ಹೋದ ಮಾತ್ರದಿಂದ ಫಲವೇನು? ಆಕೆಯ ದುಃಖವು ಮತ್ತಷ್ಟು ದುರ್ಭರವಾಗುವುದಲ್ಲವೇ? ಆಕೆಯು ಬದುಕಿರಬಲ್ಲಳೇ? ನಾನಾದರೂ ಆಕೆಗೆ ಏನೆಂಬುದಾಗಿ ತಿಳಿಯ ಹೇಳು ವೆನು? ದುರ್ಮರಣವು ಯೋಗ್ಯವಲ್ಲವೆನ್ನುವೆನೇ? ಇಲ್ಲವಾದರೆ ಆಕೆಯ ದುಃಖವು ಶಾಂತವಾಗುವುದು ಹೇಗೆ? ಅಯ್ಯೋ! ವಿನಯವತೀ! ಅತ್ತ ಅಣ್ಣಂದಿರನ್ನೂ ಬಂಧುಬಳಗವನ್ನೂ ತ್ಯಾಗಮಾಡಿ, ಏನೋ ಭೋಗಭಾಗ್ಯ ಗಳನ್ನು ಅನುಭವಿಸುವೆನೆಂಬ ಆಸೆಯಿಂದ ಹೊರಟುಬಂದು ಈಗ ಈ ಗತಿ ಯೊದವಿದ ಕಾರಣ ಉಭಯಭ್ರಷ್ಟೆಯಾದ ನೀನು ಎಂತಹ ಕೆಲಸ ಮಾಡಿದೆ? ಹಾ ಹರಿಮತೀ! ನಿನ್ನ ಸಾಹಸವೆಲ್ಲವೂ ನಿಷ್ಫಲವಾಯಿತು. ನಿನ್ನ ಧೈರ್ಯವು ಸುಟ್ಟು ಹೋಯಿತು. ನಿನ್ನ ಕನಿಕರವು ಬೂದಿ ಪಾಲಾಯಿತು. ನಿನ್ನ ಧರ್ಮಬುದ್ಧಿಯು ವಿಫಲವಾಯಿತು. ನಿನ್ನ ಸೌಂದರ್ಯವೂ ಗುಣಸಂಪತ್ತಿಯೂ ನಿನ್ನ ದೇಹದೊಡನೆಯೇ ಮಾಯವಾದುವು. ನಿನ್ನ ಸ್ನೇಹವು ಬೆಂಕಿಗೆ ಆಹುತಿಯಾಯಿತು. ಅಗ್ನಿಯಾದರೂ ನಿನ್ನನ್ನು ಹೇಗೆ ಸೋಕಿದನು? ಪತಿವ್ರತೆಯರನ್ನು ಅಗ್ನಿಯು ಸೋಕಲಾರನೆನ್ನುವರಲ್ಲವೇ? ನೀನು ಹೆದರಿ ಸತ್ತು ಬಿದ್ದ ಬಳಿಕ ನಿನ್ನ ಶರೀರವನ್ನು ಆಹುತಿಗೊಂಡನೇ? ಅಂತಹ ಕೋಮಲದೇಹವನ್ನು ಅವನಾದರೂ ಹೇಗೆ ಸುಟ್ಟನೋ ನಾನರಿಯೆನು!" ಎಂಬುದಾಗಿ ಪ್ರಲಾಪಿಸಿ ಸ್ವಲ್ಪಹೊತ್ತು ಮೂರ್ಛೆಬಿದ್ದು ಮರಳಿ ಎಚ್ಚತ್ತು "ಹಾ ವಿನಯವತೀ! ನಾನು ಕಳುಹಿದ ಭಟನು ನಿನಗೆ ಲೇಖವನ್ನು ಕೊಟ್ಟನೇ? ನಾನು ಬೇರೆ ಇನ್ನು ನಿನ್ನ ಮೊಗವನ್ನು ನೋಡ ಲಾರೆನು. ನನ್ನ ಪ್ರಾಣಗಳು ಹಾರಿಹೋಗುತ್ತಿವೆ! ನಿನ್ನ ಅನುರಾಗವನ್ನು ಏನೆಂದು ಹೊಗಳಬಲ್ಲೆನು? ರಾಜಪುತ್ರಿಯಾಗಿದ್ದರೂ ಬ್ರಾಹ್ಮಣನನ್ನು ವರಿಸಿದೆಯಲ್ಲವೇ! ನನ್ನಂತಹ ಬಡವನ ಮನೆಯಲ್ಲಿ ಬಂದು ನಿಂತು ಈ ಗತಿಯಾದೆಯಾ? ಹಾಳು ದೈವವೇ! ಏನಿದು ನಿನ್ನ ಸಾಹಸ? ಎಂತಹ ಕ್ರೂರಕೃತ್ಯವನ್ನು ಮಾಡಿಬಿಟ್ಟೆ? ಅನುರಕ್ತರಾದ ದಂಪತಿಗಳ ಅನುಕೂಲ ದಾಂಪತ್ಯವನ್ನು ಸಹಿಸಲೊಲ್ಲೆಯಾ? ನಿನಗೂ ಸಾವಿಲ್ಲವೇ? ಇಂತಹ

ಎಲೆ ಮಾಧವಿ! ನಮ್ಮ ಸ್ನೇಹವು ಇಂದಿಗೆ ಮುಗಿದುದು. ನೀನು ನನಗಿನ್ನು ಉಪಚಾರಮಾಡಿ ಫಲವಿಲ್ಲ. ಸಾಕು ಮಾಡು. ಮತ್ತೊಂದು ಜನ್ಮದಲ್ಲಿ ನಾನು ನಿನ್ನ ಋಣವನ್ನು ತೀರಿಸಿಕೊಳ್ಳುವೆನು. ನನಗೆ ಮುಂದೆ ಜನ್ಮವಾದರೂ ಇರುವುದೇ? ನಾನು ಬ್ರಹ್ಮಘಾತುಕಿ, ಸ್ತ್ರೀಘಾತುಕಿ. ನನಗೆ ಬ್ರಹ್ಮರಾಕ್ಷಸಿಯ ಜನ್ಮವು ಬರುವುದು ದಿಟ. ವೀರಸ್ವರ್ಗದಲ್ಲಿಯಾದರೂ ನನ್ನ ಪತಿಯನ್ನು ಹುಡುಕುವೆನೆಂದರೆ ಬ್ರಹ್ಮರಾಕ್ಷಸಿಯನ್ನು ಸ್ವರ್ಗದೊಳಕ್ಕೆ ಬಿಡುವರೇನು? ಆತ್ಮಹತ್ಯೆಯು ಶಾಸ್ತ್ರನಿಷಿದ್ಧವೆಂದು ಋಷಿಗಳೇಕೆ ಬರೆದಿಟ್ಟರೋ ಕಾಣೆನು! ಓ ಮಹರ್ಷಿಗಳಿರಾ! ನಿಮ್ಮ ಧರ್ಮಶಾಸ್ತ್ರಗಳು ರಾಜಶಾಸನಗಳಿಗಿಂತ ಕ್ರೂರವಾದುವು. ಆದರೆ ನನ್ನನ್ನು ಅವು ಅಡ್ಡಯಿಸಲಾರವಲ್ಲವೇ? ಮಾಧವೀ! ಬೇಗನೆ ಚಿತಿಯನ್ನು ಪೇರಿಸಿಡು. ನನ್ನ ಕಾಂತನು ನನ್ನ ಹಾದಿಯನ್ನೇ ಇದಿರು ನೋಡುತ್ತಿರುವನು. ಆತನನ್ನು ಬಹಳ ಹೊತ್ತು ಕಾದಿರುವಂತೆ ಮಾಡುವುದು ಧರ್ಮವಲ್ಲ. ಇನ್ನು ಮುಂದೆ ಮಕ್ಕಳನ್ನು ಹೆದರಿಸುವಾಗ ಜನನಿಯರು ಆಗೋ ಅಲ್ಲಿ ನೋಡು ವಿನಯವತಿಯೆಂಬ ಬ್ರಹ್ಮರಾಕ್ಷಸಿಯು ಬರುತ್ತಾಳೆ ಎನ್ನುವರಲ್ಲವೇ? ಆಹಾ! ನನ್ನ ಜನ್ಮವೇ? ನಾನು ಚಕ್ರವರ್ತಿನಿಯಾಗಿ ಬಾಳಿ ಕೀರ್ತಿ ಪಡೆದುದು ಇದಲ್ಲವೇ? ಮಾಧವಿ! ತಡಮಾಡ ಬೇಡ ಬೇಗನೆ ಚಿತಿಯನ್ನು ಸಿದ್ಧಮಾಡು. ಇದೇಕೆ? ಸುಮ್ಮನಿರುವ? ನನ್ನ ಚಿತಿಯನ್ನು ನಾನೇ ಪೇರಿಸಿಕೊಳ್ಳಬೇಕೇ? ನಿನಗೂ ಮರುಕವಿಲ್ಲವಾಯಿತೇ? ಅದನ್ನೂ ನಾನೇ ಮಾಡಿಕೊಳ್ಳುವೆನು. ದೈವವು ವಿಮುಖವಾಯಿತೆಂದರೆ ಗೆಳತಿಯರೂ ಸವತಿಯರಂತಾಗುವರಲ್ಲವೇ? ಇದೀಗ ಕಾಲವೈಪರೀತ್ಯವು. ಎಲೆ ಸಾಮುದ್ರ ಶಾಸ್ತ್ರಜ್ಞರಿರಾ! ನನಗೆ ಎಂಟು ಮಂದಿ ಸವತಿಯರೆಂದು ಹೇಳಿದಿರಲ್ಲವೇ? ರುಕ್ಮಿಣಿಯು ಹದಿನಾರು ಸಾವಿರ ಮಂದಿ ಸವತಿಯರೊಂದಿಗೆ ಹೆಣಗಾಡಿದಳಂತೆ! ಇಷ್ಟು ತಾನೇ? ನಾನು ಎಂಟು ಮಂದಿಯ ಸಂಗಡ ಹೆಣಗಾಡಲಾರೆನೇ ಎಂಬುದಾಗಿ ನಾನು ಅಂದು ನಿಮಗೆ ಪ್ರತ್ಯುತ್ತರ ಕೊಟ್ಟೆನಲ್ಲಾ ! ನಿಮ್ಮ ಮಾತು ಈಗ ಏನಾಯಿತು? ನಾನು ತೊಂಭತ್ತು ವರ್ಷಕಾಲ ಬದುಕುವೆನೆಂದು ಧರ್ಮಪಾಲನು ಹೇಳಿದ್ದನಲ್ಲಾ! ಆತನು ಮಹಾಸತ್ಯಸಂಧನೆಂಬುದಾಗಿ ನಮ್ಮ ತಂದೆಯು ಹೇಳುತ್ತಿದ್ದನು. ಓ ಧರ್ಮಪಾಲಾ ! ಈಗೆಲ್ಲಿ ಅಡಗಿ ಕೊಂಡಿರುವೆ? ನಿನ್ನ ಮಾತು ಸುಳ್ಳಾಯಿತೆಂಬುದಾಗಿ ನೀನು ಕಾಡುಪಾಲಾದೆಯಾ? ನಿನ್ನ ಮುದ್ದು

ಗುವರಿಯಾದ ಚಂದ್ರರೇಖೆಯು ಶುಕ್ಲಪಕ್ಷದ ಚಂದ್ರರೇಖೆಯಂತೆ ಬಳೆಯು ತ್ತಿರುವಳಲ್ಲವೇ? ಅವಳು ನನ್ನಂತೆ ಶೂದ್ರಕನನ್ನೇ ಮದುವೆಯಾಗು ವೆನೆಂದು ಪ್ರತಿಜ್ಞೆಮಾಡಿದ್ದಳು. ಅವಳ ಅದೃಷ್ಟವೂ ಒಡಕಾಯಿತೇನು? ಮಾಧವೀ! ಬೆಳಕು ಹರಿಯುತ್ತ ಬಂದಿತು. ತಡಮಾಡ ಬೇಡ; ಬೇಗನೆ ಚಿತಿಯನ್ನು ಪೇರಿಸು. ದನಕಾಯುವವರು ದನಗಳನ್ನು ಹೊಡೆದು ಕೊಂಡು ಬಂದು ಬಿಡುವರು. ಆ ಮೇಲೆ ನನ್ನನ್ನು ಅಗ್ನಿಯಲ್ಲಿ ಬೀಳಗೊ ಳಿಸರು. ಮಾಧವೀ! ನೀನೂ ನನ್ನೊಂದಿಗೆ ಸಾಯುವೆನೆನ್ನುವೆಯಾ? ಬೇಡ ಬೇರೊಬ್ಬ ರಾಜಪುತ್ರಿಯನ್ನು ಹುಡುಕಿಕೊಂಡು ಓಲಗಿಸುತ್ತ ಎಲ್ಲಿಯಾ ದರೂ ಸುಖವಾಗಿ ಬಾಳು. ನನ್ನಂತಹ ದುರದೃಷ್ಟವತಿಯು ಮತ್ತೊಬ್ಬ ಳಿರಲಾರಳು. ನಿನಗೇನೂ ಕಡಮೆಯಾಗುವುದಿಲ್ಲ ನಿನ್ನ ಸರಳವ ರ್ತನವೇ ಎಲ್ಲೆಲ್ಲಿಯೂ ನಿನಗೆ ಮನ್ನಣೆಯನ್ನುಂಟುಮಾಡಬಲ್ಲುದು. ನಿನಗೆ ಬದುಕಿರುವುದು ಇಷ್ಟವಿಲ್ಲವೇ? ಹಾಗಾದರೆ ಬಾ. ನಾವಿಬ್ಬರು ಒಮ್ಮೆಯೇ ಚಿತಿಯನ್ನು ಪ್ರವೇಶಿಸಿದರಾಯಿತು. ನಾನು ರಾಜಸ್ತ್ರೀಯಾಗಿರು ವುದರಿಂದ ಮೊದಲು ನಾನು ನಡೆಯುವೆನು. ನೀನು ನನ್ನ ಸಂಗಡ ಬಾ! ಅಯ್ಯೋ, ಇದೇನು ಕೇಡುಗಾಲ! ಈಗಿರುವುದು ಸಾಲದೇ, ಇನ್ನೂ ಪಾಪ ವನ್ನು ಕಟ್ಟಿಕೊಳ್ಳಬೇಕೇ? ಬೇಡ. ನೀನು ಚಿತಿಯನ್ನು ಹುಗಬೇಡ."

ಹೀಗೆ ಪ್ರಲಾಪಿಸುತ್ತಿರುವ ವಿನಯವತಿಯ ಉನ್ಮಾದವು ಅಂಟುರೋ ಗದಂತೆ ಮಾಧವಿಯನ್ನೂ ಹಿಡಿದುಕೊಂಡಿತು. ಅವರಿಬ್ಬರೂ ಸ್ವಲ್ಪ ದೂರ ನಡೆತರುವಲ್ಲಿ ರಾತ್ರಿಯ ಹೊತ್ತು ದಾರಿಗರು ಕೆಲವು ಗಾಡಿಗಳನ್ನು ಬಿಟ್ಟು ಅಡುಗೆ ಮಾಡಿಕೋಡು, ಬೆಳಗಾಗುತ್ತಲೇ ಹೊರಡುತ್ತಿದ್ದರು. ಆ ಗಾಡಿಗಳೆಲ್ಲವೂ ಹೊರಟುಹೋದುವು. ಸುತ್ತುಮುತ್ತಣ ತರಗೆಲೆಗಳು ಗಾಳಿಗೆ ಹೊಡೆದುಕೊಂಡು ಬಂದು ಆ ದಾರಿಗರು ಅಡುಗೆ ಮಾಡಿದ್ದ ಬೆಂಕಿಯ ಮೇಲೆ ಬೀಳಲು ಅದು ಧಗ್ಗನೆ ಉರಿಯತೊಡಗಿತು. ಮಾಧವಿಯು "ಅಮ್ಮಾ! ಇದೋ ನಿನ್ನ ಅದೃಷ್ಟಕ್ಕೆ ತಕ್ಕಂತೆ ಚಿತಿಯು ತಾನಾಗಿಯೇ ಸಿದ್ಧ ವಾಯಿತು" ಎಂದಳು ವಿನಯವತಿಯು ಅಲ್ಲಿಗೆ ಓಡಿದಳು. ಮಾಧ ವಿಯು ಸಂಗಡಲೇ ಓಡಿಹೋಗಿ ಕೊಳ್ಳಿಯದೆವ್ವದಂತೆ ಸುತ್ತುಮುತ್ತಣ ಸೊಪ್ಪುಸದೆಗಳನ್ನು ತಂದು ಒಟ್ಟುಗೂಡಿಸಿ ಆ ಬೆಂಕಿಯ ಸುತ್ತಲೂ ಚಪ್ಪಾಳೆ ತಟ್ಟುತ್ತ ಕುಣಿಯತೊಡಗಿದಳು. ವಿನಯವತಿಯು ಅಣ್ಣನಿಗೆ ಮನಸಾ

ಲಾಭವಾವುದು? ಇಂತಹ ಸುದ್ದಿಯು ಎಂದಿಗೂ ಸುಳ್ಳಾಗಲಾರದು. ನಿನಗೆ ಹುಚ್ಚು ಹಿಡಿದಿದೆ; ಇಲ್ಲವಾದರೆ ನನ್ನ ಶೋಕಭಾರವನ್ನು ಕಡಮೆ ಮಾಡುವ ಸಲುವಾಗಿ ನೀನು ಹೀಗೆ ಹೇಳುತ್ತಿರಬಹುದು" ಎಂದು ಗೋಳಿಡುತ್ತ ಕಂಬನಿಗರೆಯುತ್ತಿದ್ದಳು. ಮಾಧವಿಯು ಇದು ಎಷ್ಟು ಮಾತ್ರಕ್ಕೂ ದಿಟವಾಗಿರದು. ಶೂದ್ರಕನೆಂದರೇನು? ರಣರಂಗದಲ್ಲಿ ಆತನನ್ನು ಇದಿರಿಸಿ ಕೊಲ್ಲುವುದೆಂದರೇನು! ಅದೆಲ್ಲವೂ ಹೇಡಿಯಾದ ಆ ಬೌದ್ಧನ ತಂತ್ರವಾಗಿರಬಹುದೆಂದು ನನ್ನ ಅಂತರಾತ್ಮವು ಒತ್ತಿವೊತ್ತಿ ಹೇಳುತ್ತಿರುವುದು. ಇಷ್ಟು ಮಾತ್ರವಲ್ಲದೆ ನಿನ್ನ ಮೋರೆಯ ಮೇಲೆ ಯಾವ ವಿಧವಾದ ಕಾಂತಿವೈಲಕ್ಷಣ್ಯವೂ ತೋರಿ ಬರುವುದಿಲ್ಲ. ಇತ್ತ ನೋಡು— ನನ್ನ ಮಾತಿಗೆ ಉಪಶ್ರುತಿಯಾಗಿ ಆ ಗಿಡದ ಮೇಲಣ ಹಕ್ಕಿಗಳು ಚಿಲಿಪಿಲಿಗುಟ್ಟುತ್ತಿವೆ. ನೀನು ಕಳುಹಿದ ಶುಕವಾದರೂ ಹಿಂದಿರುಗಲಿಲ್ಲ. ಅದು ಆ ಲೇಖವನ್ನು ಮತ್ತಾರ ವಶಕ್ಕೂ ಕೊಡಲಾರದು. ಹಾಗೆ ಶೂದ್ರಕನು ಮಡಿದಿದ್ದುದೇ ದಿಟವಾದರೆ ಅದಾದರೂ ಬಂದು ಸಮಾಚಾರ ವನ್ನು ಹೇಳದಿರುತ್ತಿರಲಿಲ್ಲ. ಇಷ್ಟರ ಮೇಲೆ ಶಬರನಾಥನಾದರೂ ಈ ರಾತ್ರಿಯಲ್ಲಿ ಇಂತಹ ಲೇಖವನ್ನು ಬರೆದು ಕಳುಹುವನೇ? ಇದೇಕೋ ನನಗೆ ಸಂದೇಹವನ್ನುಂಟು ಮಾಡುತ್ತಿದೆ" ಎಂದಳು.

ವಿನಯವತಿಯು "ನಿನಗೀಗ ಹುಚ್ಚು ಹಿಡಿದಿರುವುದು ದಿಟ"— ಎನ್ನುತ್ತ "ಹಾ ನಾಥಾ! ನನ್ನನ್ನು ಎಷ್ಟು ಬಗೆಯಿಂದ ಮೋಹಲೋಭಗಳಿಗೆ ಗುರಿ ಮಾಡಿದೆ! ನಿನ್ನ ಭರವಸೆಯಿಂದಲ್ಲವೇ ಅತ್ತ ಅಣ್ಣನನ್ನೂ ಇತ್ತ ಬಂಧುಗಳನ್ನೂ ತೊರೆದುಬಂದೆನು. ಈಗ ನಿನ್ನ ಧೈರ್ಯಪರಾಕ್ರಮಗಳು ಏನಾದುವು? ಅಭಿ ಮನ್ಯು, ಸಾಂಬ, ಪ್ರದ್ಯುಮ್ನರಿಗಿಂತಲೂ ನೀನು ಸಾಹಸಿಯಲ್ಲವೇ? ನಿನ್ನ ಸಾಹಸವೇ ನಿನ್ನನ್ನು ಮುಳುಗಿಸಿತೇ! ನಿನ್ನನ್ನು ಸರ್ವಜ್ಞನೆಂದು ಭಾವಿಸಿದ್ದೆನ ಲ್ಲವೇ! ನಿನ್ನನ್ನು ಒಲಿದಿದ್ದ ಸರಸ್ವತಿಯು ಕೈಬಿಟ್ಟು ಹೋದಳೇ! ನಿನ್ನ ಬುದ್ಧಿಯು ಮರುಳಾಯಿತೇ? ನಿನ್ನ ಸೌಂದರ್ಯವು ಮಣ್ಣು ಪಾಲಾಯಿತೇ? ಹರನ ನೇತ್ರಾಗ್ನಿಯಿಂದ ದಗ್ಧನಾದ ಮನ್ಮಥನ ದೇಹದ ಬೂದಿಯ ರಾಶಿ ಯನ್ನು ಕಣ್ಣಾರ ನೋಡಿ ಅದರ ಮೇಲೆ ಬಿದ್ದು ಹೊರಳಾಡಿದ ರತಿಯು ನನ ಗಿಂತಲೂ ಎಷ್ಟೋ ಪಾಲು ಪುಣ್ಯವತಿಯಲ್ಲವೇ? ನಿನ್ನ ಬೂದಿಯಾದರೂ ನನಗೆ ದೊರೆಯಲಾರದು. ನೀನು ಹೊರಡುವಾಗ ನಾನೂ ಸಂಗಡಲೇ

ಬರುವೆನೆಂದು ಬೇಡಿಕೊಂಡೆನಲ್ಲಾ! ನನ್ನ ಹೆದರಿಕೆಯು ದಿಟವಾಯಿತಲ್ಲವೇ? ಹೇಗೋ ಹಟ ಹಿಡಿದು ನಾನು ನಿನ್ನೊಂದಿಗೆ ಬಂದಿದ್ದರೆ ಅಂತ್ಯಕಾಲದಲ್ಲಿ ನಿನ್ನ ದರ್ಶನವಾದರೂ ನನಗೆ ದೊರೆಯುತ್ತಿದ್ದಿತು! ನಿನ್ನನ್ನು ಮೃತ್ಯು ವಾದರೂ ಹೇಗೆ ಕೊಂಡುಯ್ದನು? ಮುಂದೆ ನನಗೆ ದಾರಿ ಯಾವುದು? ಈ ಕಾಡಿನಲ್ಲಿ, ಈ ಹಾಳು ದೇವಳದಲ್ಲಿ ಕಣ್ಣುಮೂಗುಗಳಿಲ್ಲದ ಈ ಬುದ್ಧ ವಿಗ್ರಹದ ಇದಿರಾಗಿಯೇ ನಾನು ಸಾಯಬೇಕೆಂದು ವಿಧಿಯು ಬರೆದಿ ದ್ದನೇ? ನಾನು ಹುಟ್ಟಿದುದೆಲ್ಲಿ? ಈಗಣ ಸ್ಥಿತಿ ಯಾವುದು? ಈಗ ಹರಗಣನಾದರೂ ಎಲ್ಲಿ? ಆತನು ಈ ಲೇಖವನ್ನು ನನಗೆ ಕಳುಹಿ ಎಲ್ಲಿಗೆ ಹೋದನು? ತನ್ನ ಮಡದಿಯು ಹಾದಿಯನ್ನೇ ಹಿಡಿದಿರುವನೇ? ಸಾಧುಶಿಖಾಮಣೀ! ಭೂಸುರೋತ್ತಮಾ! ನನಗಾಗಿ ಸರ್ವಸ್ವವನ್ನು ಹಾಳುಮಾಡಿಕೊಂಡೆಯಲ್ಲಾ! ನಿನ್ನ ಸ್ವಾರ್ಥತ್ಯಾಗವು ವಿಫಲವಾಯಿತು. ಎಷ್ಟೊಂದು ಆತುರಪಟ್ಟೆ! ನಿನ್ನ ಸಂಸಾರವೇ ಹಾಳಾಯಿತಲ್ಲಾ! ನಿನಗೆ ನಿಲ್ಲಲು ಒಂದಿಷ್ಟು ಗುಡಿಸಲಿಗೂ ಮಾರ್ಗವಿಲ್ಲವಾಯಿತೇ? ಇಷ್ಟೊಂದು ಅನರ್ಥಗಳಿಗೆಲ್ಲ ನಾನೇ ಗುರಿಯಲ್ಲವೇ! ಮಾಧವೀ! ನಾನಿನ್ನು ಬದುಕಿರ ಲೊಲ್ಲೆನು. ಬೆಳಗಾಯಿತೆಂದರೆ ಮುಂದೆ ಗತಿಯೇನು? ಹಗೆಗಳ ಪಾಲಾಗಿ ಭಂಗಪಡಬೇಕಾಗುವುದಲ್ಲಾ! ಎಲ್ಲರೂ ನನ್ನನ್ನು ಗುರುತಿಸಿ ಬಿಡುವರಲ್ಲವೇ! ನಾನು ಬದುಕಿದೆನೆಂದರೆ ನನ್ನನ್ನು ಕಂಡಕಂಡವರೆಲ್ಲರೂ ಅಯ್ಯೋ! ಇವಳು ವಿನಯವತಿಯಲ್ಲಾ, ಹರಿಮತಿಯನ್ನೂ ಆಕೆಯ ಗಂಡ ನನ್ನೂ ಕೊಂದ ದೆವ್ವವೆಂಬುದಾಗಿ ನನ್ನ ಮೇಲೆ ಬೆಂಕಿಯ ಮಳೆಯನ್ನೇ ಸುರಿಸುವರು. ನಾನು ಚಕ್ರವರ್ತಿನಿಯಾಗಿ ನಿನ್ನ ಪಕ್ಕದಲ್ಲಿ ಕುಳಿತು ಸೋಮಪಾನ ಮಾಡುವೆನೆಂಬುದಾಗಿ ಅಂದು ಸಾಮುದ್ರಿಕನೊಬ್ಬನು ಹೇಳಿದ್ದನಲ್ಲವೇ? ಅವನ ಮಾತು ಸುಳ್ಳಾಯಿತೇ? ಮಹಾನುಭಾವನಾದ ನಮ್ಮ ತಂದೆಯು ನಾನು ಅಶ್ವಮೇಧಯಾಗದಲ್ಲಿ ಯಜಮಾನಿಯಾಗುವೆ ನೆಂದು ಹೇಳಿದ್ದನು. ಆತನ ಮಾತು ಬೂಟಾಟಿಕೆಯ ಮಾತಾಯಿತಲ್ಲವೇ! ಜೋಯಿಸರು ನನ್ನ ಜಾತಕವನ್ನು ತಪ್ಪಾಗಿ ಗುಣಿಸಿರಬಹುದೇ? ಹಾಗಾದರೆ ಇಂದಿನ ವರೆಗೆ ನಡೆದ ಫಲವೆಲ್ಲ ಅನುಗುಣವಾಗಿಯೇ ಇರುವುದಲ್ಲಾ. ಒಂದು ವೇಳೆ ಮುಖವಿಕಾಸಾರ್ಥವಾಗಿ ಮುಂದಣ ಭವಿಷ್ಯವನ್ನು ಸುಳ್ಳಾಗಿ ಹೇಳಿರಬಹುದೇ? ಹಾಗೆ ಹೇಳಿದುದರಿಂದ ಅವರಿಗೆ ಬಂದ ಲಾಭವೇನು?

ಸಿಂಹಭಟನು ಬೇಗನೆ ಅವರ ಬಳಿಸಾರ್ದುರ್ಗ ಕರೆತರಲು ಹೊರಟನು. ಮಿಕ್ಕ ಸೈನ್ಯವೆಲ್ಲವೂ ಆ ದೇವಳದ ಮುಂದೆಯೇ ಇದ್ದಿತು ಹರಿಮತಿಯು ಅವರ ಹಾದಿಯನ್ನೇ ಇದಿರು ನೋಡುತ್ತ ಕುತೂಹಲಭರಿತೆಯಾಗಿ ಬಾಗಿಲ ಮುಂದೆ ನಿಂತಿದ್ದಳು. ಬಳಿಕ ಎಲ್ಲರೂ ಆ ಶಿವಾಲಯವನ್ನು ಹೊಕ್ಕರು.

ವಿನಯವತಿಯು ಹರಿಮತಿಯನ್ನು ಬಿಗಿದಪ್ಪಿಕೊಂಡು ಆನಂದ ಬಾಷ್ಪಗಳನ್ನು ಸುರಿಸುತ್ತ, "ತಾಯೇ! ನನ್ನ ಭಾಗ್ಯ ದೇವತೆ! ನನ್ನ ವಂಶ ವನ್ನೂ ಕೀರ್ತಿಯನ್ನೂ ನೆಲೆಗೊಳಿಸಿದ ಸತೀರತ್ನವೇ!" ಎನ್ನುವಷ್ಟರಲ್ಲಿ ಗಂಟಲು ಬಿಗಿದಿತು. ಬಾಯಿಂದ ಮಾತೇ ಹೊರಡಲಿಲ್ಲ ಹರಿಮತಿಯು ಮೆಲ್ಲಗೆ ಸಮಾಧಾನ ಹೇಳಿ ವಿನಯವತಿಯನ್ನು ಕುಳ್ಳಿರಿಸಿದಳು ಎಲ್ಲರೂ ಕುಳಿತ ಬಳಿಕ ಶೂದ್ರಕನು—ತಾನು ಮಹೇಶ್ವರ ಗ್ರಾಮದಿಂದ ಹೊರಟು, ಸಿಂಹಭಟನೊಂದಿಗೆ ಕಲೆತು, ಕಿರಾತದಂಪತಿಗಳನ್ನು ಬಿಡಿಸಿ, ಅರಗಿಳಿಯು ತಂದ ಲೇಖನವನ್ನು ಓದಿ ಬೇಗನೆ ಹೊರಟು ಬಂದು, ಹರಿಮತಿಯ ದಹನ ವೃತ್ತಾಂತವನ್ನು ಕೇಳಿ, ಶಿವಾಲಯದ ಸುರಂಗದ್ವಾರದಿಂದ ಆಕೆಯನ್ನು ಕಾಪಾಡಿ, ಹರಗಣನನ್ನು ಹುಡುಕತೊಡಗಿ ಬೆಂಕಿಯಲ್ಲಿ ಬೀಳಲು ಆವೇಶ ಗೊಂಡು ದುಮುಕುತ್ತಿದ್ದವನನ್ನು ಎಳೆದುತಂದು, ವಿನಯವತಿಯನ್ನು ಅರಸುತ್ತ ಹೋಗಿ ಚಿತಿಯಲ್ಲಿ ಬೀಳಲು ಸಿದ್ಧಳಾಗಿದ್ದವಳನ್ನು ಹಿಡಿದು, ಮೂರ್ಛೆಗೊಂಡ ಆಕೆಯನ್ನು ಮೆಲ್ಲಗೆ ಸಂತವಿಸಿ ಕರೆತಂದ ವಿಷಯಗಳನ್ನೆಲ್ಲ ವಿಶದವಾಗಿ ಹೇಳಿದನು. ಆ ರಾತ್ರಿಯಲ್ಲಿ ನಡೆದ ಒಂದೊಂದು ಚರ್ಯೆಯೂ ವಿಷಾದವಿಸ್ಮಯಗಳನ್ನುಂಟು ಮಾಡುತ್ತಿದ್ದಿತು. ಒಂದೊಂದು ಘಟನೆ ಯಲ್ಲಿಯೂ ದೇವರು ಶೂದ್ರಕನಿಗೆ ಸಹಾಯಕನಾಗಿದ್ದು ಜಯವನ್ನೊ ದವಿಸಿದ ಫಲವಾಗಿ ಎಲ್ಲರೂ ಏಕಮನಸ್ಕತೆಯಿಂದ ಸರ್ವಶಕ್ತನಾದ ಮಹಾಕಾಳೇಶ್ವರನನ್ನು ಹೊಗಳಿ ಕೊಂಡಾಡಿದರು ಬಳಿಕ ಅವರೆಲ್ಲರೂ ಆ ದಿನವೆಲ್ಲ ಆ ಶಿವಾಲಯದ ಬಳಿಯಲ್ಲಿ ಬಿಡಾರಮಾಡಿದ್ದು ಮರುದಿನ ಬೆಳಗಾಗುತ್ತಲೇ ಸುಖಪ್ರಯಾಣ ಬೆಳೆಯಿಸಿ ವನದುರ್ಗವನ್ನು ಸೇರಿದರು.

ಶೂದ್ರಕನು ವನದುರ್ಗದಲ್ಲಿ ಒಂದೆರಡು ದಿನಗಳು ವಿಶ್ರಾಂತಿಯನ್ನು ಪಡೆದು ಆ ಸಂಘಿಲಕನಿಗೆ ತಕ್ಕ ಶಿಕ್ಷೆಯನ್ನು ಯಾವ ರೀತಿಯಲ್ಲಿ ಮಾಡಬೇಕೆಂಬುದಾಗಿ ಯೋಚಿಸುತ್ತಿದ್ದನು. ಮಾರನೆಯ ದಿನ ಸಂಜೆಯ ವೇಳೆಯಲ್ಲಿ ಶೂದ್ರಕನು ಮಾಧವಿ, ವಿನಯವತಿ, ಹರಿಮತಿ, ಹರಗಣ, ಸಿಂಹ

ಭಟರೊಂದಿಗೆ ಉದ್ಯಾನವನದಲ್ಲಿ ಸಂಚರಿಸುತ್ತ ಲೋಕಾಭಿರಾಮವಾಗಿ ಮಾತನಾಡಿಕೊಳ್ಳುತ್ತಿರುವಾಗ ಹರಗಣನ ಮನೆಯಲ್ಲಿದ್ದ ಅರಗಿಳಿಯು ಕೊಕ್ಕಿನಲ್ಲಿ ಒಂದು ಲೇಖವನ್ನು ಕಚ್ಚಿಕೊಂಡು ಥಟ್ಟನೆ ಆಕಾಶದಿಂದ ಇಳಿದಿತು ಶೂದ್ರಕನು ಆ ಲೇಖವನ್ನು ತೆಗೆದು ಬಿಚ್ಚಿ ಓದಿ, ಸಿಂಹಭಟನ ಕಯ್ಗೆ ಕೊಟ್ಟು ಎಲ್ಲರಿಗೂ ಕೇಳಿಸುವಂತೆ ಗಟ್ಟಿಯಾಗಿ ಓದ ಹೇಳಿದನು. ಆ ಲೇಖದಲ್ಲಿ ಈ ರೀತಿಯಾಗಿ ಬರೆದದ್ದಿತು.—

"ಸ್ವಸ್ತಿ ಶ್ರೀಮದುಜ್ಜಯಿನೀನರಪತಿ ಸೇನಾಧ್ಯಕ್ಷ ಸಂಘಿಲಕ ಮಹಾಶಯರಿಗೆ—ಮಧುರಾಧಿಪತಿಯಾದ ಜಯಪಾಲನು ಪ್ರೀತಿಪೂರ್ವಕವಾಗಿ ಬರೆದು ಕಳುಹಿದ ಪತ್ರಿಕೆ—ಉ ಕು. ಸಾಂ ||

ನಿಮ್ಮ ಪತ್ರಗಳೆಲ್ಲವು ಸಕಾಲದಲ್ಲಿ ಸೇರಿದುವು. ಆದರೆ ನಿಮ್ಮ ಹಗೆಯಾದ ಕಿರಾತಪತಿಯು ಸೆರೆಸಿಕ್ಕಿದನೆಂತಲೂ, ಸೇನೆಯು ಮಾಹಿಸ್ಮತಿಯಲ್ಲಿ ವಿಜಯೋನ್ಮುಖವಾಗಿರುವುದೆಂತಲೂ, ರಾಜಪುತ್ರಿಯು ಕಥಾವಶಿಷ್ಟಳಾದಳೆಂತಲೂ ಬರೆದಿರುತ್ತೀರಿ ಇವು ನನಗೆ ಅಷ್ಟೊಂದು ತೃಪ್ತಿಕರವಾಗಿ ಕಂಡು ಬರುವುದಿಲ್ಲ ಹೇಗಾದರೂ ನಡೆದು ಹೋದುದು ನಡೆಯಿತು. ನಾನು ದಶಮಿಾ ಶುಕ್ರವಾರ ಸಂಜೆಯ ಸಮಯದಲ್ಲಿ ಉಜ್ಜಯಿನಿಯನ್ನು ಮುತ್ತುವೆನು ನೀನು ರಣರಂಗದಲ್ಲಿ ಗೋಪಾಲನ ಕಯ್ಗೆ ಸೆರೆ ಸಿಕ್ಕಿದ ಹಾಗೆ ಸಿಕ್ಕ ಬಿದ್ದು ಸೇನೆಯೊಂದಿಗೆ ಚೇದಿರಾಜ್ಯಕ್ಕೆ ಹೊರಟು ಹೋಗು. ನನ್ನ ಕಾರ್ಯವು ಕಯ್ಗೂಡಿತೆಂದರೆ ನೀನು ಬಯಸಿದಂತೆ ಅರ್ಧರಾಜ್ಯವನ್ನು ಕೊಡುವುದರಲ್ಲಿ ಸಂದೇಹವಿಲ್ಲ"

ಇತಿ
ಮಧುರೇಶ್ವರ ಜಯಪಾಲ.

ಸಿಂಹಭಟ—"ಪ್ರಭೋ! ಈ ಲೇಖವು ಈ ಗಿಳಿಗೆ ಹೇಗೆ ಸಿಕ್ಕಿತು?"

ಶೂದ್ರಕ—"ಇದು ನನಗೆ ಲೇಖವನ್ನು ತಂದುಕೊಟ್ಟ ಬಳಿಕ ಸ್ವಲ್ಪ ಕಾಲ ಮೋಹಗೊಂಡಿದ್ದು, ನಾನು ಹೊರಡುವುದಕ್ಕೆ ಸ್ವಲ್ಪ ಹೊತ್ತು ಮುಂಚಿತವಾಗಿ ಹರಿಮತಿಯ ಮೇಲಣ ಮೋಹದಿಂದ ಬೇಗನೆ ಹಾರಿ ಬಂದಿತು. ಇದು ಬರುವಾಗ್ಗೆ ಮನೆಯು ಉರಿಯುತ್ತಿದ್ದಿರಬಹುದು. ಬಳಿಕ ಅಲ್ಲಿಯೇ ಹಾರಾಡುತ್ತಿದ್ದು ಸಂಘಿಲಕನ ಕಯ್ಗೆ ಸಿಕ್ಕಬಿದ್ದು ಅವನ

ಒಮ್ಮೆ ನಮುಸ್ಕರಿಸಿದಳು. ಅತ್ತಿಗೆಯನ್ನು ಬೇಡಿಕೊಂಡಳು. ಅಷ್ಟರಲ್ಲಿ ಜನನಿಯ ನೆನಪು ಬಂದಿತು.

"ಅಮ್ಮಾ! ಈಗ ನೀನಿಲ್ಲದಿರುವುದು ಎಷ್ಟೋ ಲೇಸಾಯಿತು. ನೀನು ಬದುಕಿದ್ದರೆ ಈ ಗತಿಯನ್ನು ನೋಡಿ ಎಷ್ಟು ಮರುಗುತ್ತಿದ್ದೆಯೋ! ದೇವರು ಇದನ್ನೆಲ್ಲವನ್ನೂ ಯೋಚಿಸಿಯೇ ನಿನ್ನನ್ನು ಮೊದಲು ಒಯ್ದಿರಬೇಕು. ಅಣ್ಣಾ! ನನಗಾಗಿ ಮರುಗದಿರು. ಅಥವಾ ನಿನಗೇಕೆ ದುಃಖವು ಬರುವುದು? ನಾವಿಬ್ಬರೂ ಒಡಹುಟ್ಟಿದವರಾಗಿದ್ದರಲ್ಲವೇ ಆ ಚಿಂತೆ? ರಾಜ್ಯದ ಮೇಲೆ ನನಗಿರುವ ಹಕ್ಕು ನಿನಗಿರಲಿಲ್ಲ. ರಾಜ್ಯಲೋಭದಿಂದಲ್ಲವೇ ನೀನು ಇಷ್ಟೊಂದು ತಂತ್ರವನ್ನು ಹೂಡಿದುದು! ನಾನು ಹೆಂಗುಸು. ನನಗೆ ರಾಜ್ಯದಲ್ಲಿ ಹಕ್ಕಿಲ್ಲ ವೆನ್ನುವೆಯಾ? ಅದು ಸಾಧ್ಯವಲ್ಲ ನಮ್ಮ ತಂದೆಯು ಅವಸಾನ ಕಾಲದಲ್ಲಿ ನನಗ ವಾಗ್ದತ್ತ ಮಾಡಿದ್ದ ಅರ್ಧ ರಾಜ್ಯದ ಆಸೆಯಿಂದಲ್ಲವೇ ನಾನು ಬದುಕಿ ರಬಾರದೆಂಬುದಾಗಿ ನನ್ನನ್ನು ಸುದಬೇಕೆಂಬುದಾಗಿ ಯೋಚಿಸಿದೆ ಎಲಾ ಕುಲಘಾತಕಾ! ನಿನ್ನ ಕೋರಿಕೆಯು ಈಡೇರಿತಲ್ಲವೇ? ಒಳ್ಳೆಯದು. ಧೈರ್ಯ ವಾಗಿರಬೇಡ. ಕಾಳಸರ್ಪವು ನಿನ್ನ ಸಂಗಡಲೇ ಇರುವುದು. ಯಾರೆಂದು ಕೇಳುವೆಯಾ? ಅನಂಗಲೇಖೆ. ಎಲೆ ಅನಂಗಲೇಖೆ! ನೀನೂ ಒಬ್ಬ ಹೆಂಗುಸು. ಆದರೆ ನಿನ್ನ ಮಯ್ಯೆಲ್ಲವೂ ವಿಷವೆಂಬುದಾಗಿ ಧರ್ಮಪಾಲನು ನನಗೆ ಹೇಳಿದ್ದನು ಮಹಾನುಭಾವ! ಧರ್ಮಪಾಲಾ! ನಿನ್ನ ಮಾತುಗಳೆಲ್ಲವೂ ಬರಿ ದಾದುವಲ್ಲಾ! ನನ್ನ ತಂದೆಯು ಮೃತ್ಯುಶಯ್ಯೆಯಲ್ಲಿದ್ದಾಗ ನನ್ನನ್ನು ನಿನ್ನ ವಶಕ್ಕೆ ಒಪ್ಪಿಸಿದನಲ್ಲವೇ? ನಿನ್ನ ಸ್ವಾಮಿಭಕ್ತಿಯು ಎಲ್ಲಿ ಮಾಯವಾಯಿತು? ಕಳ್ಳನಂತ ಎಲ್ಲಿ ಓಡಿಹೋದೆ? ನಿನ್ನ ಕರ್ತವ್ಯವನ್ನು ನೀನು ನೆರವೇರಿಸಿದೆಯಾ? ಆಹಾ! ತಂಗಾಳಿಯು ಬೀಸುತ್ತಿದೆ. ಇನ್ನು ತಡಮಾಡಬಾರದು ನನ್ನ ಅಂತರಂಗದ ದುಃಖಭರವು ಕಡಮೆಯಾಗುತ್ತಿದೆ ಇದೇ ತಕ್ಕ ಸಮಯ."

ಹೀಗೆ ಪ್ರಲಾಪಿಸಿ ವಿನಯವತಿಯು ಬೆಂಕಿಗೆ ಮೂರು ಸಲ ಪ್ರದಕ್ಷಿಣೆ ಮಾಡಿ ಕಯ್ಮುಗಿದು ನಿಂತು ಲೋಕಪಾಲರನ್ನು ಬೇಡಿ ದುಮ್ಮಿಕ್ಕುವಷ್ಟರಲ್ಲಿ ದೂರದಲ್ಲಿ ಯಾವನೋ ಒಬ್ಬ ವೀರಪುರುಷನು "ವಿನಯವತೀ! ಬೇಡ; ಬೇಡ; ಸ್ವಲ್ಪತಡೆ" ಎಂಬುದಾಗಿ ಅರಚಿಕೊಳ್ಳುತ್ತ ಓಡಿಬರುತ್ತಿದ್ದನು. ಅವನ ಹಿಂದೆ ಕಂಗೆಟ್ಟು ಬಸವಳಿದ ಮತ್ತೊಬ್ಬ ತರುಣನೂ ಓಡಿಬರುತ್ತಿರು ವುದನ್ನು ಕಂಡು—"ಹಾ! ವಿಧಿಯೇ! ಇನ್ನೂ ನಿನ್ನ ಸೇಡು ತೀರಲಿಲ್ಲವೇ?

ಮಾಧವಿ! ಇತ್ತ ನೋಡು! ಸಂಘಿಲಕನು ನನ್ನನ್ನು ಹಿಡಿದು ಮಾನಭಂಗಗೊಳಿಸಿ, ಚಿತ್ರ ಹಿಂಸೆ ಮಾಡುವ ಸಲುವಾಗಿ ಓಡಿಬರುತ್ತಿರುವನು. ಬಾ, ಬೇಗ ಬಾ ಬೆಂಕಿಯಲ್ಲಿ ಬಿದ್ದು ಮಾನವನ್ನು ಕಾಪಾಡಿಕೊಳ್ಳು" ಎನ್ನುವಷ್ಟರಲ್ಲಿ ಆ ವೀರಪುರುಷನು ವಿನಯವತಿಯನ್ನು ಬಾಚಿತಬ್ಬಿಕೊಂಡು ಹಿಂದಕ್ಕೆ ಎಳೆದುಕೊಂಡನು. ವಿನಯವತಿಯು ಮೋಹಗೊಂಡಳು. ಮಾಧವಿಗೆ ಏನೊಂದೂ ತೋರಲಿಲ್ಲ. ಚಿತ್ರದ ಬೊಂಬೆಯಂತೆ ನಿಂತಲ್ಲಿಯೇ ಕುಸಿದು ಬಿದ್ದಳು. ಸ್ವಲ್ಪ ಹೊತ್ತಿನಲ್ಲಿ ಚೇತರಿಸಿಕೊಂಡು ನೋಡುವಲ್ಲಿ ಅವಳ ಭಯವು ಮಾಯವಾಯಿತು.

ಶೂದ್ರಕನು ವಿನಯವತಿಯನ್ನು ತನ್ನ ತೊಡೆಯ ಮೇಲೆ ಮಲಗಿಸಿಕೊಂಡು ಹರಗಣನ ಮೂಲಕ ಸಮೀಪದಲ್ಲಿದ್ದ ಕೊಳದಿಂದ ಸ್ವಲ್ಪ ನೀರನ್ನು ತರಿಸಿ ಅವಳ ಕಣ್ಣುಗಳನ್ನು ತೊಳೆದು, ಮಂದ ಸ್ವರದಿಂದ "ವಿನಯವತೀ! ಹೆದರಬೇಡ. ನಾನು, ನಿನ್ನ ಪತಿಯು, ಶೂದ್ರಕನು" ಎನಲು, ವಿನಯವತಿಯು ಮೆಲ್ಲಗೆ ಕಣ್ದೆರೆದು ಉಸಿರಾಡಿಸಿದಳು. ಸ್ವಲ್ಪ ಹೊತ್ತಿನ ತರುವಾಯ ಮರಳಿ ಮೂರ್ಛೆ ಹೊಂದಿದಳು. ಮಾಧವಿಯು ದಿಕ್ಕು ತೋರದವಳಾಗಿ ಪಕ್ಕದಲ್ಲಿ ಕುಳಿತು "ಅಮ್ಮಾ, ಹೆದರಬೇಡ. ಚೇತರಿಸಿಕೊಳ್ಳು. ಕಣ್ದೆರೆದು ನೋಡು" ಎನ್ನುತ್ತ ಅವಳ ಗಲ್ಲವನ್ನು ಹಿಡಿದು ಮೆಲ್ಲನೆ ಅಲುಗಾಡಿಸಿದಳು. ತನ್ನ ಮಡದಿಯು ಮರಳಿ ಮೋಹಗೊಂಡುದನ್ನು ಕಂಡು ಶೂದ್ರಕನು ವಿಹ್ವಲನಾದನು ಹರಗಣನು "ಮಿತ್ರನೇ! ಹೆದರದಿರು. ಸೂರ್ಯೋದಯ ಕಾಲವು ಸಕಲವನ್ನೂ ಉಜ್ಜೀವನಗೊಳಿಸತಕ್ಕುದು. ಪಾಪಹಾರಕವಾದುದು. ಆಪನ್ನಿವಾರಕವಾದುದು" ಎಂಬುದಾಗಿ ಧೈರ್ಯ ಹೇಳುತ್ತಿದ್ದನು ಕೆಲವು ನಿಮಿಷಗಳಲ್ಲಿಯೇ ವಿನಯವತಿಯು ಎಚ್ಚತ್ತು ಸುತ್ತಲು ನೋಡಿ ನಾಚಿಕೆಯಿಂದ ಝುಗ್ಗನೆ ಎದ್ದು ಸರಿದು ನಿಂತಳು. ಬಳಿಕ ನಾಲ್ವರೂ ಸ್ವಲ್ಪ ಹೊತ್ತಿನ ವರೆಗೆ ಪ್ರಭಾತವಾಯುವನ್ನು ಸೇವಿಸುತ್ತ ಅಲ್ಲಿಯೇ ಕುಳಿತಿದ್ದು, ಸೂರ್ಯೋದಯವಾದ ಕೂಡಲೇ ಅಲ್ಲಿಂದ ಮೆಲ್ಲಗೆ ಹೊರಡಲು ಅನುವಾದರು. ವಿನಯವತಿಗೆ ಅರೆ ತಿಳಿವಳಿಕೆಯು ಬಂದ ಕೂಡಲೇ ಶೂದ್ರಕನು ಹರಿಮತಿಯು ಬದುಕಿರುವಳೆಂಬುದನ್ನು ಸಾವಕಾಶವಾಗಿ ಅವಳಿಗೆ ತಿಳಿಯಪಡಿಸಿದನು. ಇದರಿಂದ ಅವರೆಲ್ಲರೂ ನಿಶ್ಚಿಂತರಾಗಿ ಅಲ್ಲಿಂದ ಹೊರಟರು. ದೂರವಾಗಿ ನಡೆದು ಬರುವ ಇವರನ್ನು ಕಂಡು

ಸಂಗಡಲೇ ಇರುತ್ತ ಹೊಂಚುಹಾಕಿ ಈ ಕಾಗದವನ್ನು ಕಚ್ಚಿಕೊಂಡು ಬಂದಿರಬಹುದು. ಅಹುದೋ ಅಲ್ಲವೋ ಅದನ್ನೇ ಕೇಳಿದರಾಯಿತು."

ಸಿಂಹ—"ಶುಕರಾಜ! ಇದು ನಿನ್ನ ವಶಕ್ಕೆ ಹೇಗೆ ಬಂದಿತು?"

ಗಿಳಿ—"ಅಯ್ಯಾ! ನಾನು ನಿಮ್ಮ ಪ್ರಭುವಿನ ಅಪ್ಪಣೆಯನ್ನು ಪಡೆದು ಹಾರಿಬಂದುದೂ ದಿಟ ನಾನು ಬರುವಾಗ್ಗೆ ಮನೆಯು ಉರಿಯುತ್ತಿದ್ದುದೂ ನಿಜ. ಆಗ ನನಗೆ ಕಣ್ಣು ತಿರುಗಿದಂತಾಗಿ ನೆಲದ ಮೇಲೆ ಬಿದ್ದೆನು ಬಳಿಕ ಎಚ್ಚರಗೊಂಡಾಗ ಸಂಘಿಲಕನ ಬಿಡಾರದಲ್ಲಿದ್ದೆನು. ಆದರೆ ನಾನು ಅಲ್ಲಿ ಒಂದು ದಿನದ ಮಟ್ಟಿಗೆ ಇದ್ದೆನೆಂದು ತೋರುವುದು"

ಸಿಂಹ—"ಭಲಾ! ಇದೂ ನಮಗೆ ಅನುಕೂಲವೇ ಸರಿ. ಮುಂದಣ ಕೆಲಸವನ್ನು ಯೋಚಿಸುವ! ಈ ಹೊತ್ತು ಪಂಚಮಿಯಲ್ಲವೇ?"

ಶೂದ್ರಕ—"ಮಿತ್ರಾ! ಅದು ಹಾಗಿರಲಿ ಮಾಹಿಷ್ಮತೀಶ್ವರನು ನಮ್ಮ ಆಪ್ತಮಿತ್ರನಲ್ಲವೇ! ಮೊದಲು ಆತನನ್ನು ವಿಪತ್ತಿನಿಂದ ಬಿಡಿಸಿ, ತರುವಾಯ ಉಜ್ಜಯಿನಿಯ ವಿಷಯವನ್ನು ಯೋಚಿಸಿದರಾಯಿತು. ಈಗ ನಾವು ಆತನಿಗೆ ಒತ್ತಾಸೆ ಮಾಡದಿದ್ದರೆ ದ್ರೋಹಿಗಳಾಗುವೆವು."

ಸಿಂಹ—"ಅಪ್ಪಣೆ ಈ ಗಜಸೇನೆಯೊಂದಿಗೆ ತಾವು ಅಲ್ಲಿಗೆ ಹೊರಡಬಹುದು ನಾನು—"

ಶೂದ್ರಕ—"ಆದರೆ ಇದೊಂದು! ಮಧುರಾಧಿಪನು ಅವಂತಿಯನ್ನು ಆಕ್ರಮಿಸದಂತೆ ನಾವು ಕಾಪಾಡಿದೆವಾದರೆ ಅರಸನು ನಮ್ಮ ಮೇಲಣ ಪೂರ್ವವಿರೋಧವನ್ನು ಮರೆತು ವಿನಯವತಿಯ ವಿವಾಹಕ್ಕೆ ಸಮ್ಮತಿಸಬಹುದು. ಅದರ ಮೂಲಕ ಸರ್ವವೂ ಅನುಕೂಲವಾಗುವುದು."

ಸಿಂಹ—"ದೇವಾ! ಅದು ಶುದ್ಧ ಭ್ರಾಂತಿ. ಉಜ್ಜಯಿನೀಶ್ವರನು ಅರ್ಧ ರಾಜ್ಯವನ್ನು ಅಪಹರಿಸಬೇಕೆಂಬ ದುರಭಿಸಂಧಿಯಿಂದಲ್ಲವೇ ಶ್ರೀಮತಿಯನ್ನು ಕೊಲ್ಲಿಸತೊಡಗಿದನು. ಈಗ ನಾವು ಸಾಮೋಪಾಯವನ್ನು ಕೈಕೊಂಡೆವಾದರೆ ಅವನು ನಿಮ್ಮಿಬ್ಬರನ್ನು ಸೆರೆಯಲ್ಲಿಡಿಸಿಯೋ ಇಲ್ಲವೇ ಕೊಲ್ಲಿಸಿಯೋ ಬಿಡುವನು. ಇದು ನನ್ನ ಊಹೆ."

ಶೂದ್ರಕ—"ಆದರೆ ನಾನು ಅವಂತೀಪತಿಗೆ ಕೇಡು ಬಯಸಲಾರೆನು. ನೀನಿಲ್ಲಿಯೇ ದುರ್ಗವನ್ನು ಕಾಪಾಡಿಕೊಂಡಿರು ನಾನು ಮೊದಲು ಮಾಹಿಷ್ಮತಿಗೆ ಹೊರಡುವೆನು."

ಇದಕ್ಕೆ ಎಲ್ಲರೂ ಅನುಮತಿಸಿದರು. ಮರುದಿನ ಬೆಳಗಾಗುತ್ತಲೇ ಶೂದ್ರಕನು ಪ್ರಸ್ಥಾನಮಂಗಳವನ್ನು ನಿರ್ವರ್ತಿಸಿ, ಭೂಸುರಶ್ರೇಷ್ಠನಾದ ಹರಗಣನ ಸ್ಮಿತಪುರಸ್ಕೃತವಾದ ಆಶೀರ್ವಚನವನ್ನು ಶಿರಸಾಧಾರಣಮಾಡಿ, ವಿನಯವತಿಯು ಮುಗುಳ್ನಗೆಯೊಂದಿಗೆ ಬಾಗಿಲ ವರೆಗೆ ಹಿಂಬಾಲಿಸಲಾಗಿ, ಉತ್ಸಾಹಭರಿತರಾದ ಯೋಧವೀರರ ಢಕ್ಕಾ ಭೇರೀ ಮೊದಲಾದ ವಾದ್ಯ ಧ್ವನಿಯೊಂದಿಗೆ ಹೊರಟು, ಇಂದ್ರುಸರಸ್ತೀರವನ್ನು ಸೇರಿ, ಆ ರಾತ್ರಿ ಅಲ್ಲಿಯೇ ಬಿಡಾರ ಮಾಡಿ, ವೇದಸಾರಸ್ತುತಿ ಮುಂತಾದ ಸ್ತೋತ್ರಗಳಿಂದ ಭಗವತಿಯಾದ ವಿಂಧ್ಯವಾಸಿನಿಯನ್ನು ಮೆಚ್ಚಿಸಿ, ಮರು ದಿನ ಉಷಃಕಾಲ ದಲ್ಲಿ ಎದ್ದು ಪ್ರಯಾಣಮಾಡಿ, ಮಧ್ಯಪರ್ವತಗಳನ್ನು ದಾಟಿ, ಒಂದೆರಡು ದಿನಗಳಲ್ಲಿ ಮಾಹಿಷ್ಮತಿಯನ್ನು ಸೇರಿದನು.

ಆಗ ಸಂಧ್ಯಾಕಾಲ. ಸೂರ್ಯನು ದ್ವಿಜರಾಜನ ಅಭ್ಯುದಯವನ್ನು ಕಂಡು ಸಹಿಸಲಾರದೆ ಸಂಧ್ಯಾರುಣವಾಗಿದ್ದ ಪಶ್ಚಿಮಾದ್ರಿಯ ತಪ್ಪಲಲ್ಲಿ ನಿಂತು ಕಡಲಿನಲ್ಲಿ ದುಮ್ಮಿಕ್ಕಿದನು. ಸೇನೆಯೆಲ್ಲವೂ ನರ್ಮದೆಯ ಒಡ್ಡಿನಲ್ಲಿ ಬಿಡಾರಮಾಡಿತು. ಭೋಜನಾನಂತರ ಎಲ್ಲರೂ ಮರಳು ದಿಣ್ಣೆಗಳ ಮೇಲೆ ಮಲಗಿ ಯುದ್ಧದ ರೀತಿಯನ್ನು ವರ್ಣಿಸುತ್ತಲೂ, ವೀರಾಲಾಪಗಳನ್ನು ಬಣ್ಣಿಸುತ್ತಲೂ, ವ್ಯೂಹರಚನಾ ಭೇದನೋಪಾಯಗಳನ್ನು ಬಿತ್ತರಿಸುತ್ತಲೂ, ಧರ್ಮಯುದ್ಧದ ಸ್ವರೂಪವನ್ನು ವಿವರಿಸುತ್ತಲೂ, ಪರಚಕ್ರವಂಚನಾದಿಗಳನ್ನು ಒಕ್ಕಣಿಸುತ್ತಲೂ, ಏಕಾಂಗ ಯುದ್ಧ, ಕೂಟ ಯುದ್ಧ, ದ್ವಂದ್ವ ಯುದ್ಧ, ಸಂಕೀರ್ಣ ಯುದ್ಧ ಮುಂತಾದ ರೀತಿಗಳನ್ನು ಸೂಕ್ಷ್ಮವಾಗಿ ವಿಮ ರ್ಶಿಸುತ್ತಲೂ ಆ ರಾತ್ರಿಯನ್ನು ಒಂದು ಗಳಿಗೆಯಂತೆ ಕಳೆದರು. ಬೆಳಗಾಗುತ್ತಲೇ ಆ ಸೈನಿಕರೆಲ್ಲರೂ ತಮ್ಮ ತಮ್ಮ ದಿನಚರ್ಯೆಗಳನ್ನು ಮುಗಿಸಿ, ಆನೆಕುದುರೆಗಳಿಗೆ ದಾಣೆಕೊಟ್ಟು, ಹೊರಡುವುದಕ್ಕೆ ಸಿದ್ಧರಾಗುವ ಹೊತ್ತಿಗೆ, ಗೋಪಾಲನು ಶೂದ್ರಕನ ಸೈನ್ಯವು ಮಾಹಿಷ್ಮತೀಶ್ವರನಿಗೆ ಒತ್ತಾಸೆ ಮಾಡಲು ಬಂದುದನ್ನು ಕಂಡು ಭಗ್ನೋತ್ಸಾಹನಾದನು. ಆದರೂ ಧೈರ್ಯವನ್ನು ತಳೆದು ತನ್ನ ಸೇನೆಯನ್ನು ಹುರಿಗೊಳಿಸಿದನು. ಕಾಲ್ಬಲವು ವೀರವಾದವನ್ನು ಉಗ್ಗಡಿಸುತ್ತ ಬಿಲ್ಲು ಬಾಣಗಳನ್ನು ತಳೆದು ಹಗೆಯನ್ನು ಇದಿರಿಸಲು ಅನುವಾಯಿತು. ಗೋಪಾಲನು ತನ್ನ ಅಶ್ವಸೈನ್ಯವನ್ನೂ ಗಜಾನೀಕಿನಿಯನ್ನೂ ಕ್ರಮವಾಗಿ ವಿಭಾಗ ಮಾಡಿ ಕೋಟೆಯ ಸುತ್ತಲು

ನಿಲ್ಲಿಸಿದನು ಆದರೆ ಮಾಡುವುದೇನು ? ಒಂದು ಕಡೆ ಮಾಹಿಷ್ಮತಿಯ ಸೈನಿಕರ ಅಂಬಿನ ಮಳೆ, ಇನ್ನೊಂದು ಕಡೆ ಶೂದ್ರಕನ ಸೇನೆಯ ಬಿರುಗಾಳಿಯ ಹೊಡೆತ, ಇವುಗಳಿಂದ ಉಜ್ಜಯಿನೀ ಭಟರು ಹಿಂಜರಿದು ಓಡಿಹೋಗುವ ಗತಿ ಬಂದಿತು. ಆದರೆ ಓಡಿಹೋಗುವುದಾದರೂ ಎಲ್ಲಿಗೆ ? ಹೇಗೆ ?

ಗೋಪಾಲನು ದಿಕ್ಕು ತೋರದೆ ಸಂಧಿಯನ್ನು ಪ್ರಸ್ತಾವಿಸಿದನು. ವಿಜಯಸಿಂಹನು ಸೇನಾಪತಿಯು ಸೆರೆ ಸಿಕ್ಕಿದಲ್ಲದೆ ಸಂಧಿಗೆ ಸಮ್ಮತಿಸುವುದು ಸಾಧ್ಯವಲ್ಲವೆನ್ನುತ್ತಿರುವಷ್ಟರಲ್ಲಿಯೇ ಶೂದ್ರಕನು ಅವನನ್ನು ಸೆರೆ ಹಿಡಿದಿದ್ದನು. ಅವಂತೀ ಭಟರು ಕರ್ತವ್ಯಶೂನ್ಯರಾಗಿ ಆಯುಧಗಳನ್ನು ಕೆಳಗಿಟ್ಟು ಮರೆಹೊಕ್ಕರು. ಮಾಹಿಷ್ಮತೀಶ್ವರನು ತನ್ನ ವಿಜಯಾಭ್ಯುದಯಕ್ಕೆ ಮುಖ್ಯ ಕಾರಣರಾದ ಶೂದ್ರಕ ವಿಜಯಸಿಂಹರನ್ನು ಪಟ್ಟದ ಆನೆಯ ಮೇಲೆ ಅಂಬಾರಿಯನ್ನು ಹಾಕಿ ಕುಳ್ಳಿರಿಸಿ, ಪಟ್ಟಣದಲ್ಲೆಲ್ಲ ಮೆರೆವಣಿಗೆ ಮಾಡಿ ವೈಭವದಿಂದ ಅವರಿಬ್ಬರನ್ನೂ ಅರಮನೆಗೆ ಕರೆದುಯ್ದು ಸನ್ಮಾನಿಸಿದನು.

ಮರುದಿನ ಶೂದ್ರಕನು ಹೊರಡಲು ಅನುವಾದನು. ಮಾಹಿಷ್ಮತೀಶ್ವರನು ಎಷ್ಟೋ ಬಗೆಯಿಂದ ಬಲಾತ್ಕರಿಸಿ ಬೇಡಿಕೊಂಡರೂ, ಕಾರ್ಯಗೌರವದಿಂದ ನಿಲ್ಲಲು ಸಾಧ್ಯವಿಲ್ಲವೆಂದು ಹೊರಟು, ಬಂಧುದತ್ತ ವಿಜಯಸಿಂಹರೊಡಗೂಡಿ, ಚತುರಂಗಸೇನೆಯೊಂದಿಗೆ ಪ್ರಯಾಣಮಾಡಿ ನರ್ಮದೆಯನ್ನು ದಾಟಿ, ವಿಂಧ್ಯಪರ್ವತದ ಮಾರ್ಗವಾಗಿ ಅಮಾವಾಸ್ಯೆಯ ದಿನಕ್ಕೆ ಉಜ್ಜಯಿನಿಯ ಗಡಿಯನ್ನು ಹೊಕ್ಕನು. ದಾರಿಯಲ್ಲಿ ಕಂಡು ಬಂದ ಕೆಲವು ಮಂದಿ ಪಟ್ಟಣಿಗರ ಮೂಲಕ, ಶೂರಸೇನನು ಪಟ್ಟಣವನ್ನು ತತ್ತರಗೊಳಿಸಿ ಆಕ್ರಮಿಸಿದನೆಂತಲೂ, ಸಂಘಿಲಕನು ಹೇಡಿಯಂತೆ ಹಗೆಯನ್ನು ಇದಿರಿಸಲಾರದೆ ಸೆರೆಸಿಕ್ಕಿದನೆಂತಲೂ, ಮಾಳವೇಶ್ವರನೂ ಅನಂಗಲೇಖೆಯೂ ಅವನ ಸೆರೆಯಾಳುಗಳಾದ ಬಳಿಕ ಅವರನ್ನು ಮಧುರೆಗೆ ಕೊಂಡು ಹೋಗುವ ನಡುದಾರಿಯಲ್ಲಿ ಕಿರಾತಪತಿಯಾದ ವಿಂಧ್ಯಕೇತುವು ಮಧುರೇಶ್ವರನನ್ನು ಅಡ್ಡಯಿಸಿದನೆಂತಲೂ, ಅವರಿಬ್ಬರಿಗೂ ಘೋರ ಯುದ್ಧವಾಗಿ ಮಧುರೇಶ್ವರನು ಸಂಧಿಯನ್ನು ಪ್ರಸ್ತಾವಿಸಿದಾಗ ಬಂದಿಗಳಾಗಿರುವ ಮಾಳವೇಶ್ವರನನ್ನೂ ಅನಂಗಲೇಖೆಯನ್ನೂ ಜೀವದೊಂದಿಗೆ ತನಗೆ ಒಪ್ಪಿಸಿದಲ್ಲದೆ

ತಾನು ಸಂಧಿಗೆ ಸಮ್ಮತಿಸುವುದಿಲ್ಲವೆಂದು ಕಿರಾತರಾಜನು ಹೇಳಿದ ಕಾರಣ, ಮಧುರೇಶ್ವರನು ಕರ್ತವ್ಯಶೂನ್ಯನಾಗಿ ಅವರಿಬ್ಬರನ್ನು ವಿಂಧ್ಯಕೇತುವಿಗೆ ಒಪ್ಪಿಸಿ ತಾನು ತಲೆ ತಪ್ಪಿಸಿಕೊಂಡನೆಂತಲೂ, ಸಂಘಿಲಕನು ಮಧುರೇಶ್ವರನ ಅನುಗ್ರಹದಿಂದ ಹಿಂದಣ ದಿನವೇ ಸಿಂಹಾಸನವನ್ನೇರಿದನೆಂತಲೂ ಸಮಾಚಾರವು ತಿಳಿದು ಬಂದಿತು. ಶೂದ್ರಕನು ದಿಕ್ಕು ತೋರದವನಂತೆ ಸ್ವಲ್ಪ ಹೊತ್ತು ಸ್ತಬ್ಧನಾಗಿ ನಿಂತನು ಮಧುರೇಶ್ವರನನ್ನು ಇದಿರಿಸಿ, ಮಾಳವೇಶ್ವರನನ್ನು ಕಾಪಾಡಿ, ಸಂಘಿಲಕನ ದುರಭಿಸಂಧಿಯನ್ನು ಸಭೆಯಲ್ಲಿ ಹೊರಪಡಿಸಿ, ರಾಜನ ಅನುಮತಿಯಿಂದ ಸಕಲ ಪ್ರಜೆಗಳ ಇದಿರಾಗಿ ವಿನಯವತಿಯನ್ನು ತಾನು ಮದುವೆಯಾಗಬೇಕೆಂಬುದು ಶೂದ್ರಕನ ಅಭಿಪ್ರಾಯವಾಗಿದ್ದಿತು. ಆದರೆ ಈಗ ಮಾಡುವುದೇನು ? ಅವನ ಆಶೋತ್ತರಗಳೆಲ್ಲವೂ ಬರಿದಾದುವು ಅರಸನನ್ನು ಸಲಹುವ ಉಪಾಯವೂ ಇಲ್ಲವಾಯಿತು. ಕಡೆಗೆ ಮನಸ್ಸನ್ನು ದೃಢಪಡಿಸಿ, ಉಜ್ಜಯಿನಿಯನ್ನು ಮುತ್ತಿ ಸಂಘಿಲಕನನ್ನು ಯುದ್ಧಕ್ಕೆ ಕರೆಕಳುಹಿದನು. ಅವನಿಗಾದರೋ ಈ ಸಮಾಚಾರವು ಕಿವಿಗೆ ಬಿದ್ದ ಕೂಡಲೇ ಪ್ರಾಣವು ದೇಹದಿಂದ ಹಾರಿ ಹೋಯಿತು. ತನ್ನ ದುರಭಿಸಂಧಿಗಳೇ ತನಗೆ ಇಂತಹ ಘೋರ ವಿಪತ್ತನ್ನು ಒದವಿಸಿದುವೆಂಬುದಾಗಿ ದೈವವನ್ನು ದೂರುತ್ತ, ಬೇರೆ ಉಪಾಯವಿಲ್ಲದೆ ಪ್ರಾಣದ ಆಸೆಯನ್ನು ಬಿಟ್ಟು, ಹೊರಗೆ ಮಾತ್ರ ಜಯಶೀಲನಂತೆ ನಟಿಸುತ್ತ, ತನ್ನ ಸೈನಿಕರನ್ನು ಬಗೆಬಗೆಯ ಉಡಿಗೆತೊಡಿಗೆಗಳಿಂದ ಪ್ರೋತ್ಸಾಹಗೊಳಿಸಿ, ಜಯಶೀಲರಾಗಿ ಹಿಂದಿರುಗಿದಲ್ಲಿ ಅದಕ್ಕಿಂತ ಅತಿಶಯವಾಗಿ ಮನ್ನಣೆ ಮಾಡುವಂತೆ ಭಾಷೆ ಕೊಟ್ಟು, ಶೂದ್ರಕನ ಸೇನೆಯ ಮೇಲೆ ಬಿದ್ದನು ಅವಂತಿಯ ಭಟರ ಮೋರೆಯ ಮೇಲೆ ರಕ್ತವಿಲ್ಲ. ಆನೆಗಳ ಹಿಂಡನ್ನು ಇದಿರಿಸಿದ ಕುರಿಯ ಮಂದೆಯಂತೆ ಹಿಂಜರಿಯ ತೊಡಗಿದರು. ನಿಮಿಷ ಮಾತ್ರದಲ್ಲಿ ಸಂಘಿಲಕನು ಶೂದ್ರಕನ ಕಣ್ಣಿಗೆ ಬಿದ್ದನು. ಬಿದ್ದುದೇ ತಡ; ಶೂದ್ರಕನು ಆನೆಯ ಮೇಲಿಂದ ಇಳಿಯ ಬಿದ್ದು, ಅವನ ಕುದುರೆಯನ್ನು ಕೆಡಹಿ, ಸಂಘಿಲಕನ ಮುಡಿಯಲ್ಲಿ ಕಯ್ ಹಾಕಿ, ಎಷ್ಟೋ ಬಗೆಯಿಂದ ಅವನು ಹೆಣಗಾಡಿದರೂ ಪಟ್ಟು ಬಿಡದೆ, ಅವನ ತಲೆಯನ್ನು ಕಡಿದು — ರಾಜದ್ರೋಹಿಗೆ ಇದೀಗ ತಕ್ಕ ಶಾಸ್ತಿ — ಎಂಬುದಾಗಿ ಊರಲ್ಲೆಲ್ಲ ಸಾರಿ ಬರುವಂತೆ ಅವನ ರುಂಡವನ್ನು ಭಟರ ಕಯ್ಗೆ ಕೊಟ್ಟು,

ವೈಭವದಿಂದ ಅರಮನೆಯನ್ನು ಹೊಕ್ಕು ಬಂಧುದತ್ತ ವಿಜಯಸಿಂಹರೊಂದಿಗೆ ಸುಖಸಂಕಥಾ ವಿನೋದದಿಂದ ಇರುವಲ್ಲಿ ಆ ಪುರದ ಪ್ರಮುಖರು ಶೂದ್ರಕನ ಅಭ್ಯುದಯಕ್ಕಾಗಿ ಅವನನ್ನು ಅಭಿನಂದಿಸೆ ಬಂದು, ಅಂದಿನ ವರೆಗೆ ತಾವು ಅನುಭವಿಸಿದ ಕಷ್ಟಪರಂಪರೆಗಳನ್ನು ಹೇಳಿಕೊಂಡು, ಶೂದ್ರಕನಿಂದ ಅಭಯುವನ್ನು ಪಡೆದು ಹೋದರು ಬಳಿಕ ಆ ದಿನವೆಲ್ಲ ಇದೇ ಬಗೆಯಾದ ವ್ಯಾಪಾರದಲ್ಲಿಯೇ ಕಳೆಯಿತು.

ಮಾರನೆಯ ದಿನ ಶೂದ್ರಕನು ಉಜ್ಜಯಿನೀಶ್ವರನನ್ನೂ ಅನಂಗ ಲೇಖೆಯನ್ನೂ ಸೆರೆಬಿಡಿಸಿ ಕಳುಹುವಂತೆ ವಿಂಧ್ಯಕೇತುವಿಗೆ ಪತ್ರವನ್ನು ಬರೆದು ಕಳುಹಿದನು ಅತ್ತಲಾ ಶಬರನಾಯಕನು ತನ್ನ ಪತ್ನೀಪರಿವಾರದೊಂದಿಗೆ ವಿಂಧ್ಯವಾಸಿನೀ ಸಂದರ್ಶನಾರ್ಥವಾಗಿ ವಿಂಧ್ಯಾರಣ್ಯವನ್ನು ಹೊಕ್ಕು ರಾಜದಂಪತಿಗಳಿಗೆ ಸ್ನಾನಾದಿಗಳನ್ನು ಮಾಡಿಸಿ, ಬಲಿಗೊಡುವುದಕ್ಕೆ ತಕ್ಕ ವೇಷವನ್ನು ಅಣಿ ಮಾಡುತ್ತಿದ್ದನು. ಆಗ ಅವನು ಕಿರಾತ ವೇಷಧಾರಿಯಾದ ರುದ್ರನಂತೆ ಕಾಣುತ್ತಿದ್ದನು. ಅವನ ಕಣ್ಣುಗಳಿಂದ ಕಿಡಿಗಳು ಉದುರುತ್ತಿದ್ದುವು. ಮನಸ್ಸಿನಲ್ಲಿ ಬೇರೆ ಯಾವ ಭಾವನೆಗೂ ಅವಕಾಶಕೊಡದೆ ತದೇಕ ಧ್ಯಾನದಿಂದ ದೇವಿಯ ಇದಿರಾಗಿ ಬಲಿಪೀಠದ ಬಳಿ ನಿಂತು, "ಮಾತೆ! ಜಗಜ್ಜನನಿ' ಹಿಂದೆ ನಾನು ನಿನ್ನ ಪಾದಸೇವೆಯನ್ನು ಮಾಡತೊಡಗಿದ್ದಾಗ ಈ ನೀಚನ ದೂತರು ಬಂದು ನನ್ನನ್ನು ಸೆರೆಹಿಡಿದುಯ್ದು ನಿನ್ನ ಪೂಜೆಗೆ ವಿಘ್ನವನ್ನು ತಂದೊಡ್ಡಿದರು ಇದಕ್ಕಾಗಿ ನಿನ್ನ ಕ್ಷಮೆ ಬೇಡುವೆನು. ಇದರಲ್ಲಿ ನನ್ನಿಂದ ಯಾವ ಪ್ರಮಾದವೂ ನಡೆದಿಲ್ಲ. ಆದರೆ ನಿನ್ನ ಕ್ರೋಧೋಪಶಮನಕ್ಕಾಗಿ ಅವನನ್ನೂ ಅವನ ಮಡದಿಯನ್ನೂ ನಿನಗೆ ಬಲಿಗೊಡಲು ಹಿಡಿತಂದಿರುವೆನು. ಈ ದಂಪತಿಗಳ ಬಲಿಪ್ರದಾನದಿಂದ ನೀನು ಸಂತಸಗೊಂಡು ನನ್ನ ಸರ್ವಾಪರಾಧಗಳನ್ನೂ ಮನ್ನಿಸಿ ಸಲಹು, ತಾಯೇ!" ಎನ್ನುತ್ತ ಸಾಷ್ಟಾಂಗ ಪ್ರಣಾಮ ಮಾಡಿ ಎದ್ದು ನಿಂತನು. ಆ ಸಮಯಕ್ಕೆ ಸರಿಯಾಗಿ ಶೂದ್ರಕನ ಪತ್ರಿಕೆಯು ಅವನ ಕೈಸೇರಿತು. ಅದನ್ನು ಓದಿದ ಕೂಡಲೇ ಬೆಪ್ಪನಂತೆ ಸುಮ್ಮನೆ ನಿಂತುಬಿಟ್ಟನು. ಬಳಿಕ ಆ ಲೇಖವನ್ನು ತನ್ನ ರಾಣಿಯಾದ ವಿಂಧ್ಯಾವಳಿಗೆ ಕೊಡಲಾಗಿ ಆಕೆಯು ಅದನ್ನು ಓದಿಕೊಂಡು, "ನಾಥಾ! ಮಹಾನುಭಾವನಾದ ಆ ಭೂಸುರೋತ್ತಮನಿಂದ ಅಲ್ಲವೇ ಈ ನಮ್ಮ ಸಕಲ ಸೌಭಾಗ್ಯ

ಗಳು! ಆತನ ಅಭಿಲಾಷೆಯನ್ನು ಭಂಗಗೊಳಿಸುವುದು ಯುಕ್ತವಲ್ಲವಷ್ಟೆ!" ಎಂದಳು. ಆಗಳಾ ಕಿರಾತಪತಿಯು "ಪ್ರಿಯೆ! ನಾನು ಆತನ ಅಡಿಯಾಳಾಗಿ ಸಾಯುವ ವರೆಗೂ ಆತನ ಊಳಿಗದಲ್ಲಿರುವೆನು. ಆದರೆ ಈಗ ಈ ವಿಷಕ್ರಿಮಿಯನ್ನು ಮಾತ್ರ ಉಳಿಸಲಾಗದು. ದೇವತಾಪೂಜೆಗೆ ಮೊದಲೊಮ್ಮೆ ವಿಘ್ನವಾಯಿತು. ಈಗಲೂ ವಿಘ್ನ ಬಂದಿತೆಂದರೆ ದೇವಿಯು ನಮ್ಮನ್ನು ಧ್ವಂಸಮಾಡದೆ ಬಿಡುವಳೇ? ಇವನನ್ನು ನಾವು ಬದುಕಿಸಿದೆವೆಂದರೆ ಕಾಲಸರ್ಪವನ್ನು ಕಾಲಿಂದ ತುಳಿದು ಮೈಮರೆತಿರುವಂತೆಯೇ ಸರಿ ಇದರಿಂದ ಅನೇಕವಾಗಿ ಅನರ್ಥಗಳುಂಟಾಗದಿರವು. ಆ ಮಹಾನುಭಾವನಾದ ಶೂದ್ರಕನು ಬ್ರಾಹ್ಮಣನಾದುದರಿಂದ ಆತನ ಮನಸ್ಸು ತುಂಬ ಮೆದುವಾದುದು. ಅದರಿಂದಲೇ ಆ ಪುಣ್ಯಪುರುಷನು ಈ ದ್ರೋಹಿಯ ವಿಷಯದಲ್ಲಿಯೂ ಮರುಕತೋರಿದನು. ಇವನನ್ನು ಕಣ್ಣಿಂದ ನೋಡಿದ ಮಾತ್ರವೇ ಪಾತಕವು ಸುತ್ತಿಕೊಳ್ಳದಿರದು ಮಾತೆ! ವಿಂಧ್ಯವಾಸಿನಿ! ನಿನ್ನಾಣೆಗೂ ಇವನು ದ್ರೋಹಿ" ಎನ್ನುತ್ತ ಆ ರಾಜದಂಪತಿಗಳ ಸೆರಗುಗಳಿಗೆ ಮುಡಿಹಾಕಿ, ಕೆಂಪು ಹೂಗಳಿಂದ ಮಾಲೆಗಳನ್ನು ಕಟ್ಟಿಸಿ, ಅವರ ಕೊರಳಿಗೆ ಹಾಕಿ, ತಲೆಗೂದಲನ್ನು ಬಿರಿಯ ಹುಯ್ದು, ಮತ್ತೊಮ್ಮೆ ಭಗವತಿಯನ್ನು ಮನಸಾ ಧ್ಯಾನಮಾಡಿ, ಒರೆಯಿಂದ ಕತ್ತಿಯನ್ನು ಸೆಳೆದು, "ಜಗಜ್ಜನನಿ! ಇವರಿಬ್ಬರ ಬಲಿ ಪ್ರದಾನದಿಂದ ನೀನು ಸಂತುಷ್ಟಳಾಗು"— ಎನ್ನುತ್ತ ಖಡ್ಗವನ್ನು ಮೇಲಕ್ಕೆ ಎತ್ತುವಷ್ಟರಲ್ಲಿ ಗರ್ಭಗುಡಿಯಿಂದ "ವತ್ಸಾ! ಕಿರಾತರಾಜ! ನಿಲ್ಲು, ನಿಲ್ಲು" ಎಂಬ ಶಬ್ದವು ಕೇಳಿಸಿತು. ವಿಂಧ್ಯಕೇತುವು ಕಂಬದಂತೆ ನಿಂತು ಬಿಟ್ಟನು. ಬಳಿಕ ಮೋರೆಯನ್ನು ದೇವಿಯ ಕಡೆಗೆ ತಿರುಗಿಸಿ "ದೇವೀ! ಇದೇನು?" ಎಂದನು "ಇವರು ಬಲಿಗೆ ತಕ್ಕವರಲ್ಲ, ಇತ್ತ ಕೇಳು. ಇವನು ಕ್ಷತ್ರಿಯನೂ ಅಲ್ಲ, ಅವಳು ಇವನ ಹೆಂಡತಿಯೂ ಅಲ್ಲ" ಎಂಬುದಾಗಿ ಒಳಗಡೆಯಿಂದ ಕೇಳಬಂದಿತು. ಆ ಮಾತಿಗೆ ಕಿರಾತರಾಜನು "ಅಮ್ಮಾ! ಇದೇನು? ಹೀಗೆ ಹೇಳುವೆ? ಹೀಗೆ ನನ್ನನ್ನು ಮೋಹಗೊಳಿಸುವೆಯಾ? ಇವರಿಬ್ಬರೂ ದಂಪತಿಗಳಲ್ಲವೆಂದು ಯಾರು ಹೇಳಬಲ್ಲರು?" ಎಂದನು.

"ಎಲೋ! ಕೇಳು! ಕೀರ್ತಿಶೇಷನಾದ ಮೇಘಸ್ವಾತಿಯು ಬಹಳ ಕಾಲದ ವರೆಗೆ ಮಕ್ಕಳಿಲ್ಲದವನಾಗಿದ್ದನು. ಒಂದು ಕಾಲದಲ್ಲಿ ಅಂತಃ

ಪುರದ ದಾಸಿಯೊಬ್ಬಳು ಸುಕುಮಾರರಾದ ಅವಳ ಮಕ್ಕಳನ್ನು ಹೆತ್ತಳು. ಆಗ ರಾಜನು ಆ ದಾಸಿಗೆ ಹೇರಳವಾಗಿ ಮಾನ್ಯ ಮಿರಾಸಿಗಳನ್ನು ಕೊಟ್ಟು ಅವಳ ಅನುಮತಿಯಿಂದ ಆ ಇಬ್ಬರು ಗಂಡುಮಕ್ಕಳನ್ನು ಸಾಕಿಕೊಂಡನು. ಕೆಲವು ಕಾಲದ ಬಳಿಕ ಪಟ್ಟದರಸಿಯು ವಿನಯವತಿಯನ್ನು ಹೆತ್ತಳು ಆತನ ಅವಸಾನ ಕಾಲದಲ್ಲಿ ಆ ಮಗಳಿಗೆ ಅರ್ಧರಾಜ್ಯವನ್ನು ವಾಗ್ದಾನಮಾಡಿ, ಅವಳು ಸ್ವಯಂವರದಲ್ಲಿ ವರಿಸಿದವನಿಗೆ ಅವಳನ್ನು ಕೊಟ್ಟು ಮದುವೆಮಾಡು ವಂತೆಯೂ, ಹಾಗಾಗದಿದ್ದಲ್ಲಿ ತನ್ನ ಪುರೋಹಿತನ ಮಗನಾದ ಶೂದ್ರಕನಿಗೇ ವಿನಯವತಿಯನ್ನು ಅರ್ಧರಾಜ್ಯದೊಂದಿಗೆ ಕೊಟ್ಟು ಮದುವೆಮಾಡಬೇಕೆಂ ತಲೂ ಶಾಸನಮಾಡಿ ಮೇಘಸ್ವಾತಿಯು ಪರಲೋಕಗತನಾದನು. ಇವನು ರಾಜ್ಯಲೋಭದಿಂದ ಆ ಕನ್ಯೆಯನ್ನು ಪ್ರೀತಿಯಿಂದ ಕಾಣದೆ ದ್ವೇಷಿಸತೊಡ ಗಿದನು. ವಿನಯವತಿಯು ದೈವಯೋಗದಿಂದ ಶೂದ್ರಕನನ್ನೇ ವರಿಸಿದಳು. ಇದನ್ನು ಕಂಡು ಇವನು ಅವರಿಬ್ಬರನ್ನು ಚಿತ್ರಹಿಂಸೆಯಿಂದ ಪೀಡಿಸಿ ಕೊಲ್ಲಿಸ ತೊಡಗಿದನು ಆದರೆ ಶೂದ್ರಕನು ವಿನಯವತಿಯನ್ನು ಕರೆದುಯ್ದು ಪಡಲಾರದ ಪಾಡುಪಟ್ಟು, ಈಗ ಉಜ್ಜಯಿನಿಯನ್ನು ಹೊಕ್ಕು ರಾಜ ದ್ರೋಹಿಯಾದ ಸಂಘಿಲಕನನ್ನು ಕೊಂದು, ರಾಜ್ಯಭಾರವನ್ನು ವಹಿಸ ಲೊಲ್ಲದೆ ನಿನಗೆ ಕಾಗದವನ್ನು ಬರೆದು ಕಳುಹಿ, ರಾಜನ ಆಗಮನವನ್ನು ಇದಿರು ನೋಡುತ್ತಿರುವನು. ಇನ್ನು ಈ ಅನಂಗಲೇಖೆಯಾದರೂ ಕ್ಷತ್ರಿಯ ವಂಶದವಳಲ್ಲ. ಇವಳು ಶೂದ್ರಕನ ಸೋದರಮಾವನ ದಾಸಿಯ ಮಗಳು. ಬಾಲ್ಯದಲ್ಲಿ ಶೂದ್ರಕನೊಡನ ಆಟಪಾಟಗಳಲ್ಲಿ ಕಲೆತು ಬೆಳೆ ದವಳು. ಒಮ್ಮೆ ಶೂದ್ರಕನ ಸೋದರಮಾವನು ಯಾತ್ರಾರ್ಥಿಯಾಗಿ ಹೊರಟನು. ಆಗ ನಡುದಾರಿಯಲ್ಲಿ ಕಳ್ಳರು ಅವರನ್ನೆಲ್ಲ ಕೊಂದು ಸರ್ವ ಸ್ವವನ್ನು ಹರಣ ಮಾಡಿದರು. ದೈವಯೋಗದಿಂದ ಸತ್ತಂತೆ ಬಿದ್ದಿದ್ದ ಇವಳು ಸ್ವಲ್ಪ ಹೊತ್ತಿನ ಮೇಲೆ ಆ ದಾರಿಯಲ್ಲಿ ನಡೆತಂದ ವರ್ತಕನ ಗಾಡಿಯ ಶಬ್ದದಿಂದ ಎಚ್ಚತ್ತು ಅತ್ತಳು. ಆಗಳಾ ವರ್ತಕನು ಕನಿಕರ ದಿಂದ ಇವಳನ್ನು ಎತ್ತಿಕೊಂಡು ಇವಳ ಮುಖಕಾಂತಿ ವಿಲಾಸಗಳಿಗೆ ಬೆರ ಗಾಗಿ ಬ್ರಾಹ್ಮಣ ಕನ್ಯೆ ಎಂಬುದಾಗಿ ತಿಳಿದು ಮಿಥಿಲಾಧಿಪನಿಗೆ ಸಮ ರ್ಪಿಸಲಾಗಿ, ಆತನು ನಂಬಿದವನಾಗಿ ಇವಳನ್ನು ಅಂತಃಪುರದಲ್ಲಿಯೇ ಸಲಹುತ್ತಿದ್ದನು. ಇಷ್ಟರಲ್ಲಿ ಕಳ್ಳರ ಪಾಲಾಗಿ ಸತ್ತುಹೋದ ಸಮಾಚಾರ

ದಿಂದ ಇವಳು ಆ ಬ್ರಾಹ್ಮಣನ ಮಗಳೆಂತಲೂ ಸ್ಪಷ್ಟವಾಯಿತು. ಆಗ ಮಿಥಿಲಾಧಿನಾಥನು ಈ ವಿಷಯವನ್ನು ತನ್ನ ಮಂತ್ರಿಗೆ ತಿಳುಹಲಾಗಿ ಆತನು 'ದೇವಾ! ಇವಳ ರೂಪವಿಲಾಸಗಳು ಸರ್ವಚಿತ್ತಾಪಹಾರಕಗಳಾ ಗಿರುವುವು. ವಿಷಕನ್ಯೆಯನ್ನಾಗಿಸಲು ಇಂತಹ ರೂಪಲಾವಣ್ಯಾವತಿಯರೇ ಅತ್ಯಾವಶ್ಯಕ; ದೈವಯೋಗದಿಂದ ದೊರೆತಿದ್ದಾಳೆ. ನಾವೀಗ ಇವಳನ್ನು ಆ ರೀತಿ ಪೋಷಣೆ ಮಾಡುತ್ತಿದ್ದು, ಸಮಯ ಬಂದಾಗ ಶತ್ರುರಾಜರಿಗೆ ಕೊಟ್ಟರೆ ನಮ್ಮ ಕಾರ್ಯವು ಸುಲಭವಾಗಿ ಕೈಗೂಡಬಲ್ಲುದು" ಎನಲು ರಾಜನು ಅದಕ್ಕೆ ಸಮ್ಮತಿಸಿದನು. ಅಂತೆಯೇ ಇವಳನ್ನು ವೈದ್ಯರ ಮೂಲಕ ವಿಷಕನ್ಯೆಯನ್ನಾಗಿಸಿದನು. ಇವಳಿಗೆ ವಿವಾಹಯೋಗ್ಯವಾದ ವಯಸ್ಸು ಪ್ರಾಪ್ತವಾಯಿತು. ಮೇಘಸ್ವಾತಿಯು ಮಿಥಿಲಾಧಿಪನ ಮಗಳನ್ನು ತನ್ನ ಮಗನಿಗೆ ಕೊಡುನಂತೆ ಪ್ರಸ್ತಾವಿಸಿದನು. ಆದರೆ ಮಿಥಿಲಾಧಿಪನು, ಇವನು ಕ್ಷತ್ರಿಯ ಕುಮಾರನಲ್ಲದ ಕಾರಣ ತನ್ನ ಮಗಳನ್ನು ಕೊಡಲು ಸಾಧ್ಯವಿಲ್ಲವೆಂಬುದಾಗಿ ಹೇಳಿ ಕಳುಹಿಸಿಬಿಟ್ಟನು ಇದನ್ನು ಕೇಳಿ ಮೇಘ ಸ್ವಾತಿಯು ಕ್ರೋಧೋದ್ದೀಪಿತನಾಗಿ ಮಿಥಿಲೆಯ ಮೇಲೆ ದಂಡೆತ್ತಿ ಬಂದು, ಬಹಳ ದಿನಗಳ ವರೆಗೆ ಕಾದು, ಹೋರಾಡಿ, ಕೋಟೆಯನ್ನು ಭೇದಿಸಿ, ಅರಮನೆಯನ್ನು ಹೊಕ್ಕನು ಮಿಥಿಲೇಶ್ವರನು ಸಮ್ಮತಿಸಿದವನಂತೆ ನಟಿಸಿ ಇವಳನ್ನೇ ತನ್ನ ಮಗಳೆಂದು ಹೇಳಿ ಮಾಳವೇಶ್ವರನಿಗೆ ಒಪ್ಪಿಸಿ, ಇವಳನ್ನು ಅವರ ಸಂಗಡ ಉಜ್ಜಯಿನಿಗೆ ಕರೆದುಯ್ಯ ಬಹುದೆಂತಲೂ ತಾನು ಮದು ವೆಗೆ ಬೇಕಾದ ಸಲಕರಣೆಗಳನ್ನು ಒದವಿಸಿಕೊಂಡು ಸುಮುಹೂರ್ತದಲ್ಲಿ ಹೊರಟು ಬರುವುದಾಗಿಯೂ ಹೇಳಿ ಆತನನ್ನು ಸಮಾಧಾನಪಡಿಸಿ ಕಳುಹಿ ದನು. ಆಗ ಮೇಘಸ್ವಾತಿಯ ಮುಖ್ಯ ಮಂತ್ರಿಯಾದ ಧರ್ಮಪಾಲನು ಗಂಗಾಯಾತ್ರೆಗೆ ಹೋಗಿದ್ದು ಇವಳ ಮದುವೆಯ ಸಮಯಕ್ಕೆ ಅಲ್ಲಿಗೆ ಹಿಂದಿರುಗಿ ಬಂದನು. ಈ ಕನ್ಯೆಯನ್ನು ಪರೀಕ್ಷಿಸಿ, ಇವಳ ಗುಟ್ಟನ್ನು ತಿಳಿದು, ಇವಳನ್ನು ಐದು ವರ್ಷಗಳ ವರೆಗೆ ಸೋಕಲಾಗದೆಂದು ಅರಸ ನೊಂದಿಗೂ ಇವನೊಂದಿಗೂ ರಹಸ್ಯವಾಗಿ ಹೇಳಿ, ಎಲ್ಲಿಯಾದರೂ ಪ್ರಮಾದ ವಶದಿಂದ ಸಂಪರ್ಕವಾದಲ್ಲಿ ಕೂಡಲೇ ಸಾಯುವನೆಂತಲೂ ಕಟ್ಟಾಣ ತಿಯನ್ನಿತ್ತನು. ಋಷಿಕಲ್ಪನಾದ ಆ ಬ್ರಾಹ್ಮಣನ ಮಾತೆಂದರೆ ತಂದೆ ಮಕ್ಕಳೆಲ್ಲರಿಗೂ ವೇದವಾಕ್ಯವಾಗಿದ್ದಿತು. ಅದರಂತೆಯೇ ತಂದೆಯು

ಲೋಕಾಂತರವನ್ನೈದಿದರೂ ಇವನು ಇನ್ನೂ ಇವಳ ಗೋಜಿಗೆ ಹೋಗ ಲಿಲ್ಲ. ಇವಳು ಈಗಲೂ ವಿಷಕನ್ಯೆಯೇ."

ಆ ಮಾತುಗಳನ್ನು ಕೇಳಿ ಕಿರಾತರಾಜನು "ರಾಜದಂಪತಿಗಳಿರಾ! ಇದೆಲ್ಲವೂ ದಿಟವೇ?" ಎಂದು ಪ್ರಶ್ನೆ ಮಾಡಲಾಗಿ ರಾಜನು "ನನ್ನ ವಿಷಯ ವಾಗಿ ಹೇಳಿದುದೆಲ್ಲವೂ ದಿಟ. ಇವಳನ್ನು ಇಂದಿನ ವರೆಗೂ ನಾನು ಸೋಕಿ ದವನಲ್ಲ. ಆದರೆ ಇದಕ್ಕೆ ಕಾರಣವೇನೆಂಬುದನ್ನು ಮಾತ್ರ ನಾನರಿಯೆನು" ಎಂದನು. ಕಿರಾತನಾಥನು "ದೇವೀ! ನಿನ್ನ ವಿಷಯವೇನು? ದೇವತಾಸನ್ನಿ ಧಾನದಲ್ಲಿ ಮರೆಮಾಚದೆ ಹೇಳು" ಎಂದನು ರಾಣಿಯು "ಜಗನ್ಮಾತೆಯು ಎಂದಿಗಾದರೂ ಸುಳ್ಳು ಹೇಳುವಳೇ? ಎಲ್ಲವೂ ದಿಟ. ನಾನು ವಿಷಕನ್ಯೆ ಯೆಂಬುದನ್ನು ನಾನು ಬಲ್ಲೆನು. ಸೂಕ್ಷ್ಮದರ್ಶಿಯಾದ ಶೂದ್ರಕನು ಬಲ್ಲನು. ಮಹಾ ಮಹಿಮನಾದ ಆ ಧರ್ಮಪಾಲನಿಗೂ ತಿಳಿದಿದ್ದಿತು. ನನ್ನ ವಿಷವನ್ನು ಹೋಗಲಾಡಿಸುವ ಶಕ್ತಿಯು ಅವರಿಬ್ಬರಿಗೇ ಗೊತ್ತು" ಎಂದಳು.

ಆಗ ಶಬರರಾಜನು "ಜಗನ್ಮಾತೆಯೇ! ಹಾಗಾದರೆ ಈಗ ನನಗೆ ಏನಪ್ಪಣೆ?" ಎಂಬುದಾಗಿ ಕಯ್ಮುಗಿದು ಬೇಡಿಕೊಳ್ಳಲು, "ನೀನು ಬಲಿ ಗೊಡಕೆಲಸವಿಲ್ಲ. ಮಿಕ್ಕ ನಿವೇದನಗಳಿಂದಲೇ ನಾನು ಸಂತಸಗೊಳ್ಳು ವೆನು. ಇವರನ್ನು ಬಿಡು ಇವನು ಕೂಡಲೇ ಅವಂತಿಗೆ ಹೋಗಿ ವಿನಯ ವತಿಯನ್ನು ಶೂದ್ರಕನಿಗೆ ಕೊಟ್ಟು ಮದುವೆಮಾಡಿ, ಅವನನ್ನು ರಾಜ್ಯದಲ್ಲಿ ಪಟ್ಟಾಭಿಷಿಕ್ತನನ್ನಾಗಿ ಮಾಡಿ, ತಾನು ವನದುರ್ಗವನ್ನು ಹೊಕ್ಕು ಅಲ್ಲಿ ಅಧಿಕಾರ ಮಾಡಿಕೊಂಡಿರಬೇಕು ಇವನ ತಮ್ಮನು ಮೊದಲಿನಿಂದಲೂ ವಿರಕ್ತಮಾರ್ಗದಲ್ಲಿರುವ ಕಾರಣ ಅವನಿಗೆ ರಾಜ್ಯದಲ್ಲಿ ವಿಭಾಗವು ಅನಾ ವಶ್ಯಕ. ಅವನೀಗ ಹಿಮಾಲಯ ಪ್ರಾಂತದಲ್ಲಿದ್ದಾನೆ. ಅನಂಗಲೇಖೆಯು ಇನ್ನೂ ಹದಿನೈದು ತಿಂಗಳು ಕಾಲ ನಿಯಮದಿಂದಲೇ ಇದ್ದು, ಔಷಧಾದಿಗಳ ಸೇವನೆಯಿಂದಲೂ ವ್ರತೋಪವಾಸಗಳಿಂದಲೂ ತನ್ನ ವಿಷವನ್ನು ನಿಶ್ಶೇಷ ವಾಗಿ ಹೋಗಲಾಡಿಸಿದ ಬಳಿಕ ಮರಳಿ ರಾಣಿಯಾಗಲು ಅಭ್ಯಂತರವಿಲ್ಲ" ಎಂಬ ಆಶೀರ್ವಾದ ರೂಪವಾದ ವಚನಗಳು ಗುಡಿಯೊಳಗಿಂದ ಹೊರ ಹೊಮ್ಮಿದುವು. ರಾಜನು ಇವೆಲ್ಲವೂ ಸಮ್ಮತವೆಂಬುದಾಗಿ ದೇವಿಯ ಸನ್ನಿಧಾನದಲ್ಲಿ ಹೇಳಿದನು. ಅನಂಗಲೇಖೆಯು ತನ್ನ ಅವಧಿಯು ಮುಗಿ ಯುವ ವರೆಗೆ ನಿಯಮದಿಂದಿರಲು ಒಪ್ಪಿದಳು. ಶಬರನಾಥನು ಅವರ

ವೇಷವನ್ನು ತೆಗೆಯಿಸಿ, ಅವರಿಬ್ಬರನ್ನೂ ತಕ್ಕ ಸಿಬ್ಬಂದಿಯೊಂದಿಗೆ ಉಜ್ಜಯಿನಿಗೆ ಕಳುಹಿ, ಈ ವಾರ್ತೆಯನ್ನು ಚಾರರ ಮೂಲಕ ಶೂದ್ರಕನಿಗೆ ತಿಳಿಸಿದನು.

ಅತ್ತ ಶೂದ್ರಕನು ಅರಸನನ್ನು ಮಹಾವೈಭವದಿಂದ ಇದಿರ್ಗೊಂಡು ಕರೆತಂದು ಸಿಂಹಾಸನದಲ್ಲಿ ಕುಳ್ಳಿರಿಸಿದನು. ರಾಜನ ಬಾಯಿಂದ ಮಾತೇ ಹೊರಡಲಿಲ್ಲ. ಶೂದ್ರಕನು ಅದನ್ನು ಅಷ್ಟಾಗಿ ಲಕ್ಷ್ಯಮಾಡಲೂ ಇಲ್ಲ. ವಿವಾಹ ಮಹೋತ್ಸವವು ನಿಶ್ಚಿತವಾಯಿತು. ದೇಶದೇಶಗಳಿಂದ ರಾಜಾಧಿರಾಜರೆಲ್ಲರೂ ಬಂದು ನೆರೆದರು. ಧರ್ಮಪಾಲನೂ ಆ ಸಮಯಕ್ಕೆ ಎಲ್ಲಿಂದಲೋ ಬಂದೇಬಿಟ್ಟನು. ಅವನನ್ನು ಕಂಡೊಡನೆ ರಾಜನಿಗೆ ತಮ್ಮ ತಂದೆಯೇ ಸ್ವರ್ಗದಿಂದ ಇಳಿದು ಬಂದಷ್ಟು ಸಂತೋಷವಾಯಿತು. ನಡೆದ ವೃತ್ತಾಂತವನ್ನೆಲ್ಲ ಪೋಣಿಸಿದಂತೆ ಹೇಳಿಬಿಟ್ಟನು ಕೂಡಲೇ ಶೂದ್ರಕನು ಬಂದೆರಗಿದನು. ಧರ್ಮಪಾಲನು ಬಂದ ದಿನವೇ ವಿನಯವತಿಯೂ ಮಾಧವಿಯೂ ಹರಗಣನೂ ಹರಿಮತಿಯೂ ಸಿಂಹಭಟನೂ ವನದುರ್ಗದಿಂದ ಚತುರಂಗಸೇನೆಯೊಡನೆ ಮಹಾ ವೈಭವದಿಂದ ಬಂದು ಸೇರಿದರು. ವಿನಯವತಿಯು ಧರ್ಮಪಾಲನಿಗೆ ಅಡ್ಡಬಿದ್ದು ಕಂಬನಿಸುರಿಸಿದಳು. ಧರ್ಮಪಾಲನು ಆಕೆಯನ್ನು ಸಮಯೋಚಿತ ಮಾತುಗಳಿಂದ ಸಂತವಿಸಿದನು. ಆಗ ಧರ್ಮಪಾಲನು ಶೂದ್ರಕನನ್ನು ಬರನೆಳೆದು "ಪಂಡಿತಾವತಂಸಾ! ನಿನ್ನ ತಂದೆಯು ನಿನಗೆ ಸಕಲ ಧರ್ಮರಹಸ್ಯಗಳನ್ನು ಉಪದೇಶಿಸಿರುವನು. ಬ್ರಾಹ್ಮಣನು ಕ್ಷತ್ರಕನ್ಯೆಯನ್ನು ಪರಿಗ್ರಹಿಸುವುದಾದರೆ ಮೊದಲು ಬ್ರಾಹ್ಮಣ ಕನ್ಯೆಯನ್ನು ಮದುವೆಯಾಗ ಬೇಕು. ಇಲ್ಲವಾದರೆ ಅವನಿಗೆ ಅಗ್ನಿ ಹೋತ್ರಾಧಿಕಾರವು ಸಿದ್ಧಿಸಲಾರದು. ಈ ವಿಷಯವನ್ನು ನಾನೀಗ ನಿನಗೆ ನೆನಪಿಗೆ ತಂದಿರುವೆನಲ್ಲದೆ ಇದು ಶಾಸನವೆಂದು ಭಾವಿಸಲಾಗದು" ಎಂದನು. ಶೂದ್ರಕನು ಆ ಮಾತಿಗೆ ಸಮ್ಮತಿಸಿ, ತನಗೆ ತಕ್ಕ ಕನ್ಯೆಯು ಯಾರೆಂಬುದಾಗಿ ಯೋಚಿಸುತ್ತಿರುವಲ್ಲಿ ರಾಜನು ಧರ್ಮಪಾಲನನ್ನು ಕುರಿತು "ತಮ್ಮ ಮಗಳು ಇನ್ನೂ ಅವಿವಾಹಿತಳೇ ಅಲ್ಲವೆ? ಆಕೆ ರೂಪವತಿಯೆಂಬುದಾಗಿ ಕೇಳಿರುವೆನು" ಎನಲು ಧರ್ಮಪಾಲನು "ಆಕೆಯು ವಿವಾಹ ಯೋಗ್ಯವಾದ ವಯಸ್ಸಿನಲ್ಲಿರುವಳು ಇನ್ನೂ ಮದುವೆಯಾಗಿಲ್ಲ. ಆದರೆ ಶೂದ್ರಕನ ಅಭಿಪ್ರಾಯವು ಹೇಗಿರುವುದೋ" ಎಂಬುದಾಗಿ ಹೇಳಲಾಗಿ,

ಶೂದ್ರಕನು ಏನನ್ನೋ ಜ್ಞಾಪಿಸಿಕೊಳ್ಳುತ್ತ "ತಮ್ಮ ಮಗಳ ಹೆಸರೇನೆಂಬುದನ್ನು ನಾನು ತಿಳಿಯ ಬಯಸುವೆನು" ಎನಲು 'ಚಂದ್ರರೇಖೆ' ಎಂಬ ಪ್ರತ್ಯುತ್ತರವನ್ನು ಕೇಳಿ, ವಿನಯವತಿಯನ್ನು ನೋಡಲಾಗಿ, ಅವಳು ಮುಗುಳ್ನಗೆಯಿಂದ ತಲೆವಾಗಿ, ಶೂದ್ರಕನನ್ನು ಓರೆಗಣ್ಣಿಂದ ನೋಡುತ್ತ ತನಗೆ ಸಮ್ಮತವೆಂದಳು. ವಿಪ್ರಕುಮಾರನು ಭವಿತವ್ಯತೆಯನ್ನು ನೆನಪಿಗೆ ತಂದುಕೊಂಡು ತಾನೂ ಚಂದ್ರರೇಖೆಯೂ ಮೊದಲು ಮಾಡಿಕೊಂಡಿದ್ದ ಒಪ್ಪಂದವನ್ನು ಸ್ಮರಿಸಿಕೊಂಡು ತನಗೂ ಸಮ್ಮತವೆಂಬುದಾಗಿ ಮರಳಿ ಧರ್ಮಪಾಲನ ಕಾಲ್ಗೆರಗಿದನು.

ಬಳಿಕ ಅರಸನೂ ಮಂತ್ರಿಗಳೂ ಮಂಗಳ ಮಹೋತ್ಸವ ಸಮಾರಂಭಗಳನ್ನು ಸಜ್ಜುಗೊಳಿಸ ತೊಡಗಿದರು. ಅಂತಃಪುರದಲ್ಲಿ ವಿನಯವತಿಯ ಅಲಂಕಾರಾರ್ಥವಾಗಿ ಬೇಕಾದ ಭೂಷಣವಸ್ತ್ರಾದಿಗಳೂ ಸಿದ್ಧವಾದುವು. ಪಟ್ಟಣದ ಒಂದೊಂದು ಮನೆಯೂ ಮದುವೆಯ ಮನೆಯಾಗಿದ್ದಿತು. ಒಬ್ಬೊಬ್ಬರ ಮನೆಗಳಲ್ಲಿಯೂ ದೇಶದೇಶಾಂತರಗಳಿಂದ ಬಂಧುಬಳಗದವರೂ ಆಪ್ತಮಿತ್ರರೂ ನೆರೆದಿದ್ದರು. ಎಲ್ಲರೂ ಸಂತೋಷಸಮುದ್ರದಲ್ಲಿ ಓಲಾಡುತ್ತಿದ್ದರು ಶಿಲ್ಪಿಗಳು ತಮ್ಮ ಕಲಾನೈಪುಣ್ಯವನ್ನೆಲ್ಲ ವೆಚ್ಚಮಾಡಿ, ವಿವಾಹಮಂಟಪವನ್ನು ಸಿಂಗರಿಸಿದರು ದೇಶದೇಶಗಳಿಂದ ಬಂದ ರಾಜವರ್ಗವೂ ಪಂಡಿತಗೋಷ್ಠಿಯೂ ವಿವಾಹಮಂಟಪದಲ್ಲಿ ಉಚಿತಾಸನಗಳಲ್ಲಿ ಕುಳಿತಿರಲು, ಧರ್ಮಪಾಲನು ಚಂದ್ರರೇಖೆಯನ್ನು ಶೂದ್ರಕನಿಗೆ ಧಾರಾಪೂರ್ವಕವಾಗಿ ಪಾಣಿಗ್ರಹಣ ಮಾಡಿಸಿದ ಬಳಿಕ ಮಾಳವೇಶ್ವರನು ವಿನಯವತಿಯನ್ನು ಧಾರೆಯೆರೆದು ಕೊಟ್ಟನು. ಶಾಸ್ತ್ರಪ್ರಕಾರವಾಗಿ ಐದು ದಿನಗಳ ವಿವಾಹಮಹೋತ್ಸವವು ಮಹಾವೈಭವದಿಂದ ನಡೆಯಿತು. ಮದುವೆಗೆ ಬಂದಿದ್ದವರೆಲ್ಲರೂ ಉಡುಗೊರೆ ಉಚಿತಗಳನ್ನು ಪಡೆದು ಸಂಭ್ರಮದಿಂದ ಹಿಂದೆರಳಿದರು.

ಕೆಲವು ದಿನಗಳ ತರುವಾಯ ಮಾಳವರಾಜನು ಉಜ್ಜಯಿನಿಯಲ್ಲಿ ಶೂದ್ರಕನಿಗೆ ಪಟ್ಟಗಟ್ಟಿ ತಾನು ವನದುರ್ಗಕ್ಕೆ ಪ್ರಯಾಣಮಾಡಿದನು. ಧರ್ಮಪಾಲನು ಶೂದ್ರಕನ ಮಂತ್ರಿತ್ವವನ್ನು ಕೈಕೊಂಡನು. ಅತ್ತ ಚಕೋರನು ವನದುರ್ಗಾಧೀಶನಲ್ಲಿ ಅಮಾತ್ಯನಾದನು. ಚಂದ್ರರೇಖೆಯೂ ವಿನಯವತಿಯೂ ಸವತೀಮತ್ಸರವನ್ನುಳಿದು ಅಕ್ಕತಂಗಿಯರಂತೆ ಅನ್ಯೋನ್ಯ ಪ್ರೀತಿವಾತ್ಸಲ್ಯಗಳಿಂದ ಶೂದ್ರಕನ ಗುಣ ಸಂಪತ್ತಿಗೆ ಒಲಿದು

ಬಂದ ಲಕ್ಷ್ಮೀಸರಸ್ವತಿಗಳಂತೆ ಆನಂದದಾಯಿನಿಯರಾಗಿದ್ದರು. ರಾಜ್ಯ ಕ್ಷೇಮಾಭಿವೃದ್ಧಿಕಾರ್ಯವು ವಿನಯವತಿಯ ಸಲಹೆ ಇಲ್ಲದೆ ನಡೆಯುತ್ತಿರಲಿಲ್ಲ. ಸತ್ರ, ಮಠ, ದೇವಾಲಯ, ಧರ್ಮಶಾಲಾದಿಗಳ ಮೇಲ್ವಿಚಾರಣೆಯು ಚಂದ್ರರೇಖೆಯ ಸಮ್ಮತಿಯನ್ನನುಸರಿಸಿದ್ದಿತು.

ಒಂದು ದಿನ ಪ್ರಸಂಗವಶದಿಂದ ಚಂದ್ರರೇಖೆಯು, ವಿಂಧ್ಯವಾಸಿನಿಯ ಮಂದಿರದಲ್ಲಿ ಸಿದ್ಧಪುರುಷನಾಗಿದ್ದು ಕೀರ್ತಿಶೇಷನಾದ ಮೇಘಸ್ವಾತಿಯು ತನ್ನ ಮೇಲೆ ಹೊರಿಸಿದ್ದ ಕಾರ್ಯಭಾರವನ್ನು ನಿರ್ವಹಿಸುವ ಸಲುವಾಗಿ ವಿಚಿತ್ರ ಚರ್ಯೆಯನ್ನು ಕೈಕೊಂಡು, ತಕ್ಕ ಸಮಯದಲ್ಲಿ ಶೂದ್ರಕನಿಗೆ ಅನೇಕ ಸಹಾಯ ಸಂಪತ್ತಿಯನ್ನು ಒದವಿಸಿದವನು ತನ್ನ ತಂದೆಯಾದ ಧರ್ಮಪಾಲ ನೆಂತಲೂ, ಸಿಂಹಭಟನು ಆತನ ಶಿಷ್ಯವರ್ಯನೆಂತಲೂ ತಿಳಿಯಪಡಿಸಿದಳು ಶೂದ್ರಕನು ತನ್ನ ಗುರುವೂ ಮಂತ್ರಿವರ್ಯನೂ ಎನಿಸಿದ ಧರ್ಮಪಾಲನ ನೀತಿ ಕೌಶಲಕ್ಕೆ ಮೆಚ್ಚಿ ತಲೆದೂಗಿದನು. ಇದನ್ನು ಕೇಳಿದ ಕೂಡಲೇ ವಿನಯ ವತಿಯ ಪ್ರೀತಿಯು ಚಂದ್ರರೇಖೆಯ ವಿಷಯದಲ್ಲಿ ಇಮ್ಮಡಿಯಾಯಿತು. ಶೂದ್ರಕನ ರಾಜ್ಯಭಾರಕ್ರಮವನ್ನು ಬಣ್ಣಿಸಲು ನಮಗೆ ಶಕ್ತಿ ಸಾಲದು. ನಮ್ಮ ಲೇಖನಿಯು ಸೋತುಹೋಗಿದೆ. ಆತನ ರಾಜ್ಯವು ರಾಮರಾಜ್ಯ ವಾಗಿದ್ದಿತೆಂದು ಮಾತ್ರವೇ ನಾವು ಹೇಳಬಲ್ಲೆವು

